ಶ್ರೀ ವಿದ್ಯಾಧೀಶ ಗ್ರಂಥಮಾಲಾ-3

This book is published with the financial assistance of Tirumala Tirupati Devasthanams under their scheme 'Aid to publish religious books'

# विष्णुतत्वविनिर्णयः

ಶ್ರೀಆನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ವಿಷ್ಣುತತ್ವವಿನಿರ್ಣಯ

ಕನ್ನಡ ಅನುವಾದ ವಿವರಣ ಸಹಿತ

ಅನುವಾದಕರು :

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತ, ದರ್ಶನರತ್ನ, ಮೀಮಾಂಸಾಭೂಷಣ

**ಪ್ರೊ|| ಕೆ. ಟಿ. ಪಾಂಡುರಂಗಿ,** ಎಂ.ಎ.

ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾನಿಲಯ

ಉಪಕುಲಪತಿ, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು

1992

ಶ್ರೀ ವಿದ್ಯಾಧೀಶ ಗ್ರಂಥಮಾಲಾ–3

**This book is published with the financial assistance of Tirumala Tirupati Devasthanams under their scheme 'Aid to publish religious books'**

# विष्णुतत्वविनिर्णयः

ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯವಿರಚಿತ

# ವಿಷ್ಣು ತತ್ತ್ವ ವಿ ನಿ ರ್ಣ ಯ

ಕನ್ನಡ ಅನುವಾದ ವಿವರಣ ಸಹಿತ

ಅನುವಾದಕರು .

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತ, ದರ್ಶನರತ್ನ, ಮೀಮಾಂಸಾಭೂಷಣ

**ಪ್ರೊ|| ಕೆ. ಟಿ. ಪಾಂಡುರಂಗಿ, ಎಂ.ಎ.**

ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾನಿಲಯ

ಉಪಕುಲಪತಿ, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು

1992

**ವಿಷ್ಣುತತ್ತ್ವವಿನಿರ್ಣಯ**—ಕನ್ನಡ ಅನುವಾದ ಸಹಿತ.

ಅನುವಾದಕರು ಮತ್ತು ಪ್ರಕಾಶಕರು  ಪ್ರೊ|| ಕೆ ಟಿ ಪಾಂಡುರಂಗಿ

ಪುಟಗಳು  xvi+40+184

ಬೆಲೆ . ೩೦ ರೂಪಾಯಿಗಳು.



ಪುಸ್ತಕ ದೊರೆಯುವ ಸ್ಥಳ

೧. **ವೇದಾಂತ ಬುಕ್ ಹೌಸ್**
6 ನೆಯ ಮೇನ್ ರಸ್ತೆ, ಚಾಮರಾಜಪೇಟೆ, ಬೆಂಗಳೂರು–560 018

೨. **ಕೆ. ಟಿ. ಪಾಂಡುರಂಗಿ**
132/4, 3 ನೆಯ ಬ್ಲಾಕು, ಜಯನಗರ, ಬೆಂಗಳೂರು–560 011

ಮುದ್ರಕರು

ಪ್ರಭಾ ಮುದ್ರಣಾಲಯ

22-A, ಡಾ|| ಡಿ ವಿ ಗುಂಡಪ್ಪ ರಸ್ತೆ, ಬಸವನಗುಡಿ, ಬೆಂಗಳೂರು–560 004

# ಅನುವಾದಕರ ವಿಜ್ಞಾಪನೆ

ಶ್ರೀಮಧ್ವಾಚಾರ್ಯರ ಸರ್ವಮೂಲಗ್ರಂಥಗಳಲ್ಲಿ ಒಂದಾದ ಶ್ರೀವಿಷ್ಣುತತ್ವ ವಿನಿರ್ಣಯದ ಕನ್ನಡ ಅನುವಾದ, ವಿವರಣೆಗಳನ್ನೊಳಗೊಂಡ ಈ ಗ್ರಂಥವನ್ನು ಆಸ್ತಿಕ ವಾಚಕರ ಕೈಗೆ ಅರ್ಪಿಸಲು ತುಂಬ ಸಂತೋಷವಾಗುತ್ತದೆ.

ಶ್ರೀವಿಷ್ಣುತತ್ವವಿನಿರ್ಣಯ ಗ್ರಂಥವು ಅನೇಕ ದೃಷ್ಟಿಯಿಂದ ಅಪೂರ್ವಗ್ರಂಥ ವಾಗಿದೆ ವೇದಾಂತಶಾಸ್ತ್ರವು ತರ್ಕಶಾಸ್ತ್ರದಂತೆ ಕೇವಲ ಯುಕ್ತಿಗಳಿಂದ ತನ್ನ ಪ್ರಮೇಯಗಳನ್ನು ಸಮರ್ಥಿಸುವದಿಲ್ಲ. ಆದರೆ ವೇದಗಳು, ಪಂಚರಾತ್ರಾಗಮ, ಇತಿಹಾಸ ಪುರಾಣಗಳು ಈ ಆಕರಗ್ರಂಥಗಳ ಯುಕ್ತಿಪೂರ್ವಕವಾದ ಮಥನದಿಂದ ಪ್ರತಿಪಾದಿಸುವದು. ಆದ್ದರಿಂದ ಮೊದಲು ಇವುಗಳ ಪ್ರಾಮಾಣ್ಯವನ್ನು ಸಮರ್ಥಿಸ ಬೇಕಾಗುವದು. ಆದ್ದರಿಂದ ಶ್ರೀವಿಷ್ಣುತತ್ತ್ವವಿನಿರ್ಣಯದಲ್ಲಿ ಮೊದಲು ವೇದಗಳ ಅಪೌರುಷೇಯತ್ವವನ್ನೂ ಪ್ರಾಮಾಣ್ಯದ ಸ್ವತಸ್ತ್ವವನ್ನೂ ಸಮರ್ಥಿಸಲಾಗಿದೆ. ಅಪೌರುಷೇಯವಾದ ವಾಙ್ಮಯವನ್ನು ಅಂಗೀಕರಿಸದೆ ಧರ್ಮ ಅಧರ್ಮಗಳು ಸಿದ್ಧಿಸುವದಿಲ್ಲ ಧರ್ಮ, ಅಧರ್ಮಗಳನ್ನು ಅಲ್ಲಗಳೆಯಲು ಬರುವದಿಲ್ಲ ಆದ್ದರಿಂದ ಅಪೌರುಷೇಯವಾಙ್ಮಯವನ್ನು ಒಪ್ಪಲೇಬೇಕೆಂದು ಪ್ರತಿಪಾದಿಸಿದ್ದಾರೆ. ಅಪೌರು-ಷೇಯವಾದ ವೇದಗಳು ನಿರ್ದುಷ್ಟವಾದ್ದರಿಂದ ಪ್ರಮಾಣಭೂತವಾದವುಗಳು ಜ್ಞಾನದ ಪ್ರಾಮಾಣ್ಯವು ಸಾಕ್ಷಿಯಿಂದ ಸ್ವತಃ ತಿಳಿದುಬರುವದು ಅಪ್ರಾಮಾಣ್ಯಕ್ಕೆ ಮಾತ್ರ ಪರೀಕ್ಷೆಯ ಸಹಕಾರ ಬೇಕು ಅಪ್ರಾಮಾಣ್ಯವು ದೋಷಗಳಿಂದ ಉಂಟಾಗುವದು. ಆ ದೋಷಗಳು ಯಾವವು ಎಂಬುದನ್ನು ಪರೀಕ್ಷಿಸಿ ತಿಳಿದುಕೊಳ್ಳ ಬೇಕಾಗುವದು. ಒಂದು ರಾಜಮಾರ್ಗದಲ್ಲಿ ಸರಾಗವಾಗಿ ಸ್ವತಃ ನಡೆಯುವೆವು ಆದರೆ ಮುಳ್ಳುಗಳು ಇದ್ದರೆ ಮಾತ್ರ ತೆಗೆದುಹಾಕಬೇಕಾಗುವದು. ಹೀಗೆ ವೇದಾ-ಪೌರುಷೇಯತ್ವ ಮತ್ತು ಪ್ರಾಮಾಣ್ಯಸ್ವತಸ್ತ್ವಗಳು ಶ್ರೀವಿಷ್ಣುತತ್ತ್ವವಿನಿರ್ಣಯ ದಲ್ಲಿಯ ವಿಷಯ ವಿವೇಚನೆಯಲ್ಲಿಯ ಪ್ರಥಮ ಘಟ್ಟ.

ಇನ್ನು ವೇದಗಳು ಅಪೌರುಷೇಯ, ಪ್ರಮಾಣ ಎಂದು ಒಪ್ಪಿದರೂ ಅವು ಏನನ್ನು ಪ್ರತಿಪಾದಿಸುತ್ತವೆ ಎಂಬ ವಿಷಯದಲ್ಲಿ ಅದ್ವೈತಿಗಳಿಗೂ ದ್ವೈತಿಗಳಿಗೂ ಭಿನ್ನಾಭಿಪ್ರಾಯವಿದೆ. ಅದ್ವೈತಿಗಳು ವೇದವಚನಗಳಲ್ಲಿ 'ತತ್ತ್ವಾವೇದಕ' ಅಂದರೆ ಪ್ರಾಮಾಣಿಕವಾದುದನ್ನು ಹೇಳುವ ವಚನಗಳು, ಮತ್ತು 'ಅತತ್ತ್ವಾ-ವೇದಕ' ಅಂದರೆ ಪ್ರಾಮಾಣಿಕವಲ್ಲದ ಕೇವಲ ವ್ಯಾವಹಾರಿಕವಾದ ವಿಷಯಗಳನ್ನು ಹೇಳುವ ವಚನಗಳು ಎಂದು ಎರಡು ವಿಭಾಗಮಾಡಿ ಅಭೇದಶ್ರುತಿಗಳು ಮಾತ್ರ ತತ್ತ್ವಾವೇದಕ, ಭೇದಶ್ರುತಿಗಳು ಅತತ್ತ್ವಾವೇದಕ ಎಂದು ವಾದಿಸುವರು. ಶ್ರೀವಿಷ್ಣುತತ್ವವಿನಿರ್ಣಯದಲ್ಲಿ 'ಶ್ರುತಿಗಳನ್ನು ಹೀಗೆ ವರ್ಗೀಕರಿಸುವದು ಯುಕ್ತವಲ್ಲ,

ಕೆಲವೇ ಶ್ರುತಿವಚನಗಳು ಪ್ರಮಾಣ ಎಂಬುದು ಸರಿಯಲ್ಲ ಎಲ್ಲ ಶ್ರುತಿಗಳೂ ಪ್ರಮಾಣ. ಅಲ್ಲದೆ ಅದ್ವೈತಿಗಳು 'ಅಭೇದ' ಪರವೆಂದು ಹೇಳುವ 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಯಾವ ಶ್ರುತಿಯೂ ಅಭೇದಪರವಲ್ಲ, 'ತತ್ತ್ವಮಸಿ' ಎಂಬುದನ್ನು ವಿವರಿಸಲು ಕೊಟ್ಟ ಒಂಬತ್ತೂ ದೃಷ್ಟಾಂತಗಳು ಭೇದಪರವಾಗಿವೆ' ಎಂಬುದನ್ನು ವಿವರವಾಗಿ ವಿವರಿಸಿದ್ದಾರೆ ಇದು ಇಲ್ಲಿಯ ವಿಷಯ ವಿವೇಚನೆಯ ಎರಡನೆಯ ಘಟ್ಟವು

ಭೇದವು ಸತ್ಯವೇ? ಅದು ಕೇವಲ ವ್ಯಾವಹಾರಿಕವಲ್ಲವೇ? ಜಗತ್ತೂ ಕೇವಲ ವ್ಯಾವಹಾರಿಕವಲ್ಲವೇ? ಪ್ರತ್ಯಕ್ಷಪ್ರಮಾಣದಿಂದ ತಿಳಿದುಬರುವ ಭೇದವನ್ನು ಶ್ರುತಿಯು ಕೇವಲ ಅನುವಾದ ಮಾಡುವದಿಲ್ಲವೇ ಎಂಬ ಪ್ರಶ್ನೆಗಳನ್ನು ಅದ್ವೈತಿಗಳು ಕೇಳುತ್ತಾರೆ ಇವುಗಳಿಗೆ ಉತ್ತರವಾಗಿ ಭೇದವು ಸತ್ಯ ಮತ್ತು ಆಯಾ ವಸ್ತು-ಸ್ವರೂಪಭೂತ, ಜಗತ್ತೂ ಪಂಚಭೇದಗಳೂ ಸತ್ಯ ಎಂದು ಅನೇಕ ಶ್ರುತಿಗಳು ಸಾರುತ್ತವೆ. ಭೇದಶ್ರುತಿಗಳು ಕೇವಲ ಅನುವಾದಕವಲ್ಲ. ಪ್ರಮಾಣಾಂತರದಿಂದ ಸಿದ್ಧವಾದುದನ್ನು ಅನುವಾದ ಮಾಡಿದರೂ ಅದರಿಂದ ದಾರ್ಢ್ಯವೇ ಉಂಟಾಗುವದೇ ಹೊರತು ಅಪ್ರಮಾಣವಾಗುವದಿಲ್ಲ ಇತ್ಯಾದಿ ವಿಷಯಗಳನ್ನು ವಿವರಿಸಿರುವರು. ಪ್ರಾಸಂಗಿಕವಾಗಿ 'ಅಜ್ಞಾನ' 'ಏಕಜೀವವಾದ' ಇತ್ಯಾದಿಗಳನ್ನು ನಿರಾಕರಿಸಿರುವರು ಇದು ಇಲ್ಲಿಯ ವಿಷಯವಿವೇಚನೆಯಲ್ಲಿಯ ಮೂರನೆಯ ಘಟ್ಟ. ಈ ಮೂರೂ ಘಟ್ಟಕ್ಕೆ ಸೇರಿದ ವಿಷಯಗಳು ಸಾಮಾನ್ಯವಾಗಿ ಒಂದು ಕ್ರಮದಲ್ಲಿ ಬಂದಿದ್ದರೂ ವಿಷಯವಿವೇಚನೆಯ ಅಗತ್ಯವನ್ನನುಸರಿಸಿ ಕೆಲವು ಮುಖ್ಯಾಂಶಗಳು ಎಲ್ಲ ಕಡೆಗೂ ಹರಡಿವೆ. ಮತ್ತೆ ಮತ್ತೆ ಪ್ರಸ್ತಾಪಿಸಲ್ಪಟ್ಟಿವೆ.

ಇವೆಲ್ಲದಕ್ಕೂ ಶಿಖರಪ್ರಾಯವಾದುದು ವಿಷ್ಣುವೇ ಸರ್ವಾಗಮಗಳ ತಾತ್ಪರ್ಯನೂ ಸರ್ವೋತ್ತಮನೂ ಎಂದು ಪ್ರತಿಪಾದಿಸುವದು ಈ ಗ್ರಂಥದ ಮುಖ್ಯ ವಿಷಯ. 'ಸದಾಗಮೈಕವಿಜ್ಞೇಯಮ್' ಎಂಬುದನ್ನು ಸಮರ್ಥಿಸುವದೇ ಈ ಗ್ರಂಥದ ಪ್ರಧಾನ ವಿಷಯ ಇನ್ನುಳಿದ ವಿಷಯಗಳು ಇದಕ್ಕೆ ಅಂಗವಾಗಿ ಬಂದಿರುವವು. ಆದ್ದರಿಂದ ಆರಂಭದಲ್ಲಿಯೂ ಪ್ರತಿಯೊಂದು ಘಟ್ಟದ ಉಪಕ್ರಮ ಉಪಸಂಹಾರಗಳಲ್ಲಿಯೂ ಈ ಎಲ್ಲ ವಿವೇಚನೆಯು ವಿಷ್ಣುಸರ್ವೋತ್ತಮತ್ವವನ್ನು ಪ್ರತಿಷ್ಠಾಪಿಸುವದನ್ನು ವಿಶದೀಕರಿಸುವರು. ವಿಷ್ಣುವಿನಲ್ಲಿಯೇ ಆಗಮಗಳ ಮಹಾತಾತ್ಪರ್ಯವೆಂಬುದನ್ನು ವಿಶದೀಕರಿಸುವರು. ಎರಡು ಮತ್ತು ಮೂರನೆಯ ಪರಿಚ್ಛೇದಗಳಲ್ಲಿ ವಿಷ್ಣುವು ಕ್ಷರ ಮತ್ತು ಅಕ್ಷರಗಳಿಗಿಂತ ಉತ್ತಮನೆಂಬುದನ್ನೂ ನಿರ್ದೋಷನೆಂಬುದನ್ನೂ ವಿಶೇಷ ಪ್ರಮಾಣವಚನಗಳಿಂದ ವಿಶದೀಕರಿಸುವರು.

ಹೀಗೆ ಈ ಸಮಗ್ರ ಗ್ರಂಥವು ಇದರ ಹೆಸರಿಗೆ ಅನ್ವರ್ಥಕವಾಗುವಂತೆ ವಿಷ್ಣು-ಸರ್ವೋತ್ತಮತ್ವವನ್ನೂ ವಿಷ್ಣುವಿನಲ್ಲಿಯೇ ಸಕಲ ಸದಾಗಮಗಳ ತಾತ್ಪರ್ಯವಿರು

ವದನ್ನೂ ಪ್ರತಿಪಾದಿಸುವ ಅಪೂರ್ವ ಗ್ರಂಥವಾಗಿದೆ. ದ್ವೈತಸಿದ್ಧಾಂತದ ಪ್ರಧಾನ ಪ್ರಮೇಯಗಳು, ಮುಖ್ಯಶ್ರುತಿವಚನಗಳ ನಿಷ್ಕೃಷ್ಟವಾದ ಅರ್ಥ, ವೇದಾಪೌರುಷೇಯತ್ವ, ಪ್ರಾಮಾಣ್ಯಸ್ವತಸ್ತ್ವ, ಭೇದಸ್ವರೂಪ, ಅನ್ವಿತಾಭಿಧಾನವಾದ ಇತ್ಯಾದಿ ಮಹತ್ತ್ವದ ವಿಷಯಗಳು ಇವುಗಳನ್ನು ತಿಳಿದುಕೊಳ್ಳಲು ತುಂಬ ಸಹಾಯಕವಾಗಿದೆ.

ಈ ಎಲ್ಲ ಅಪೂರ್ವವಾದ ವಿಷಯಗಳನ್ನು ಶ್ರೀಮಧ್ವಾಚಾರ್ಯರು ಬಹಳ ಸಂಕ್ಷಿಪ್ತವಾಗಿ ಹೇಳಿದ್ದಾರೆ ಚಿಕ್ಕವಾದ ಮಾರ್ಮಿಕವಾಕ್ಯಗಳಿಂದ ಬಹು ಅರ್ಥಗರ್ಭಿತವಾದ ಅಂಶಗಳನ್ನು ಹೇಳುತ್ತಾರೆ ಇವುಗಳನ್ನೆಲ್ಲ ಶ್ರೀಜಯತೀರ್ಥರು ತಮ್ಮ ಟೀಕಾದಲ್ಲಿ ವಿಶದವಾಗಿ ನಿರೂಪಿಸುತ್ತಾರೆ. ಇಲ್ಲಿಯ ಶ್ರೀ ಟೀಕಾಚಾರ್ಯರ ಸಂಸ್ಕೃತಗದ್ಯಶೈಲಿಯು ಅಪೂರ್ವವಾದ ಗದ್ಯಶೈಲಿಯು. ಅದನ್ನು ಓದುತ್ತಿರುವಂತೆ ಭಾಷೆಯ ಗಾಂಭೀರ್ಯ, ಲಾಲಿತ್ಯ ಎರಡರ ಆನಂದವೂ ದೊರೆಯುತ್ತದೆ. ಶಾಸ್ತ್ರೀಯ ವಿಷಯಗಳ ಕ್ಲಿಷ್ಟತೆ ಹೋಗಿ ಸ್ಪಷ್ಟತೆ ವ್ಯಕ್ತವಾಗುತ್ತದೆ ಆಚಾರ್ಯರಿಗೆ ಅಭಿಪ್ರೇತವಾದ ಯುಕ್ತಿಗಳು ಸ್ಫುಟವಾಗಿ ಆಚಾರ್ಯರ ಪಂಕ್ತಿಗಳ ಗಹನತೆಯು ಅರಿವಾಗುತ್ತದೆ ಆಚಾರ್ಯರ ಮನೋಗತವನ್ನು ಖಚಿತವಾಗಿ ಗುರುತಿಸಿ ವಿವರಿಸುವ ಶ್ರೀ ಟೀಕಾಚಾರ್ಯರ ಶೈಲಿಯಿಂದ ಮಹದುಪಕಾರವನ್ನು ಪಡೆದ ಅನುಭವ ಬರುತ್ತದೆ.

ಕಾಲಕ್ರಮದಲ್ಲಿ ಶ್ರೀ ಟೀಕಾಚಾರ್ಯರ ವ್ಯಾಖ್ಯಾನವನ್ನೂ ವಿಶದೀಕರಿಸುವ ಅಗತ್ಯವುಂಟಾದ್ದರಿಂದ ಅನೇಕ ವಿದ್ವಾಂಸರಾದ ಯತಿಶ್ರೇಷ್ಠರೂ ಪಂಡಿತಶ್ರೇಷ್ಠರೂ ಟಿಪ್ಪಣಿಗಳನ್ನು ಬರೆದಿದ್ದಾರೆ ಇವುಗಳಲ್ಲಿ ಶ್ರೀ ರಘೋತ್ತಮತೀರ್ಥರ ಭಾವಬೋಧವೇ ಪ್ರಾಚೀನವೆಂದು ತೋರುತ್ತದೆ ಶ್ರೀವಿಷ್ಣುತತ್ತ್ವನಿರ್ಣಯಟೀಕಾಕ್ಕೆ ಈ ಕೆಳಗೆ ನಿರ್ದೇಶಿಸಿದ ಹದಿನೆಂಟು ಟಿಪ್ಪಣಿಗಳಿರುವದು ತಿಳಿದುಬರುತ್ತದೆ.

೧ ಶ್ರೀ ರಘೋತ್ತಮತೀರ್ಥರ ಭಾವಬೋಧ, ೨. ಶ್ರೀ ವಿಜಯೀಂದ್ರತೀರ್ಥರ ಟಿಪ್ಪಣಿ, ೩. ಶ್ರೀ ವಿದ್ಯಾಧೀಶತೀರ್ಥರ ಟಿಪ್ಪಣಿ, ೪. ಶ್ರೀ ರಾಘವೇಂದ್ರತೀರ್ಥರ ಟಿಪ್ಪಣಿ, ೫ ಶ್ರೀನಿವಾಸತೀರ್ಥರ ಟಿಪ್ಪಣಿ, ೬. ಪಾಂಡುರಂಗಿ ಕೇಶವಭಟ್ಟಾರಕರ ಟಿಪ್ಪಣಿ, ೭. ಶ್ರೀಮುಷ್ಣಂ ಅನಂತಾಚಾರ್ಯರ ಟಿಪ್ಪಣಿ, ೮. ಲಿಂಗೇರಿ ಆಚಾರ್ಯರ ಟಿಪ್ಪಣಿ, ೯. ಉಮರ್ಜೀ ಆಚಾರ್ಯರ ಟಿಪ್ಪಣಿ, ೧೦. ಶ್ರೀಸತ್ಯನಾಥತೀರ್ಥರ ಟಿಪ್ಪಣಿ, ೧೧ ಶ್ರೀಸತ್ಯಧರ್ಮತೀರ್ಥರ ಟಿಪ್ಪಣಿ, ೧೨. ಶ್ರೀವ್ಯಾಸತತ್ತ್ವಜ್ಞರ ಟಿಪ್ಪಣಿ ಗುರ್ವೀ ಮತ್ತು ಲಘ್ವೀ, ೧೩. ಕೊನೇರೀ ಆಚಾರ್ಯರ ಟಿಪ್ಪಣಿ, ೧೪. ಅಡವೀ ಆಚಾರ್ಯರ ಟಿಪ್ಪಣಿ, ೧೫. ಕೇಶವಸ್ವಾಮಿಗಳ ಟಿಪ್ಪಣಿ, ೧೬. ತತ್ತ್ವಜ್ಞಸ್ವಾಮಿಗಳ ಟಿಪ್ಪಣಿ, ೧೭. ರುಪಲ್ಲಿ ಕೃಷ್ಣಾಚಾರ್ಯರ ಟಿಪ್ಪಣಿ, ೧೮. ಭಾವಮಾರ್ತಾಂಡಮಂಡಲ.

ಇವುಗಳಲ್ಲಿ ನಂ. ೧, ೪, ೫, ೬, ೧೨ ಇವು ಮುದ್ರಿತವಾಗಿವೆ ಉಳಿದವು ಗಳಲ್ಲಿ ಕೆಲವು ಹಸ್ತಲಿಖಿತಗಳಲ್ಲಿ ಉಪಲಬ್ಧವಾಗಿವೆ ಇನ್ನು ಕೆಲವು ಕೇವಲ ಪರಂಪರೆಯಿಂದ ತಿಳಿದುಬರುತ್ತವೆ ಈ ಎಲ್ಲ ಟಿಪ್ಪಣಿಗಳೂ ಮೂಲ ಮತ್ತು ಟೀಕಾ ತಿಳಿದುಕೊಳ್ಳಲು ಬಹಳ ಸಹಾಯಕವಾಗಿವೆ. ಪ್ರತಿಯೊಂದು ಟಿಪ್ಪಣಿಯಲ್ಲಿಯೂ ಏನಾದರೂ ಕೆಲವು ವಿಶೇಷ ವಿವರಣೆಗಳು ದೊರೆಯುತ್ತವೆ ಆದ್ದರಿಂದ ಇವುಗಳ ಹಸ್ತಪ್ರತಿಗಳನ್ನು ರಕ್ಷಿಸುವದು ಮತ್ತು ಕಾಲಕ್ರಮದಲ್ಲಿ ಮುದ್ರಿಸುವದು ಅಗತ್ಯವಾದ ಕಾರ್ಯವಾಗಿದೆ

ಮೂಲ, ಟೀಕಾ ಮತ್ತು ಟಿಪ್ಪಣಿಗ್ರಂಥಗಳು ವಿದ್ವಾಂಸರಿಗೂ ಕ್ರಮಬದ್ಧ ವಾಗಿ ಓದುವ ವಿದ್ಯಾರ್ಥಿಗಳಿಗೂ ಉಪಯುಕ್ತವಾಗುವವು. ಆದರೆ ಈ ಗ್ರಂಥಗಳ ಸಾರವನ್ನು ತಿಳಿದುಕೊಳ್ಳಬೇಕೆನ್ನುವವರಿಗೆ ಕನ್ನಡ, ಇಂಗ್ಲಿಷ್, ಹಿಂದಿ ಇತ್ಯಾದಿ ಪ್ರಚಲಿತ ಭಾಷೆಗಳಲ್ಲಿ ಅನುವಾದವು ಅಗತ್ಯವಿದೆ. ಈ ಶತಮಾನದ ಆರಂಭದಿಂದ ದ್ವೈತವೇದಾಂತ ಗ್ರಂಥಗಳ ಕನ್ನಡ ಅನುವಾದವು ಪ್ರಾರಂಭವಾಗಿದೆ ಉಡುಪಿಯ ಶ್ರೀ ಮಧ್ವಮುನಿ ಸೇವಾ ಸಂಘದವರು ಶ್ರೀಮಧ್ವಾಚಾರ್ಯರ ೩೭ ಗ್ರಂಥಗಳನ್ನೂ ಕನ್ನಡದಲ್ಲಿ ಅನುವಾದ ಮಾಡಿಸಿ ಪ್ರಕಟಿಸಿ ಮಹದುಪಕಾರವನ್ನು ಮಾಡಿದ್ದಾರೆ. ಇದರ ಪ್ರತಿಗಳು ತೀರಿಹೋಗಿದ್ದು ಎರಡನೆಯ ಆವೃತ್ತಿಯ ಪ್ರಕಟಣೆಯು ಅತ್ಯಗತ್ಯ ವಾಗಿದೆ. ದಾವಣಗೇರಿಯ ಸರ್ವಜ್ಞಾಚಾರ್ಯ ಸೇವಾ ಸಂಘದವರು ಈ ಮೊದಲು ಸತ್ತತ್ವರತ್ನಮಾಲಾ, ವಿಷ್ಣುರಹಸ್ಯ, ಭಾಗವತಸಾರೋದ್ಧಾರ ಇತ್ಯಾದಿ ಗ್ರಂಥ ಗಳನ್ನು ಕನ್ನಡ ಅನುವಾದದೊಂದಿಗೆ ಪ್ರಕಟಿಸಿದ್ದು, ಇತ್ತೀಚೆಗೆ ಶ್ರೀವಾದಿರಾಜ ತೀರ್ಥರ ಯುಕ್ತಿಮಲ್ಲಿಕಾ ಗ್ರಂಥವನ್ನು ೧೪ ಸಂಪುಟಗಳಲ್ಲಿ ಕನ್ನಡ ಪ್ರತಿಪದಾರ್ಥ, ತಾತ್ಪರ್ಯಸಹಿತ ಪ್ರಕಟಿಸಿದ್ದಾರೆ ಶ್ರೀ ಫಲಿಮಾರು ಶ್ರೀ ಭಂಡಾರಕೇರಿಮಠಾಧೀಶ ರಾದ ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದಂಗಳವರು ತತ್ತ್ವಸಂಖ್ಯಾನ, ತತ್ತ್ವವಿವೇಕ, ಖಂಡನತ್ರಯಗಳನ್ನು ಕನ್ನಡ ಅನುವಾದಮಾಡಿ ಪ್ರಕಟಿಸಿದ್ದಾರೆ. ಶ್ರೀ ಜಾಲಿಹಾಳ ಕೇಶವಾಚಾರ್ಯರು ಶ್ರೀಮನ್ನ್ಯಾಯಸುಧಾಗ್ರಂಥವನ್ನು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಿದ್ದಾರೆ. ಶ್ರೀವ್ಯಾಸನಕೆರೆ ಪ್ರಭಂಜನರು ಶ್ರೀ ಯಾದವಾರ್ಯ ಕೃತಿಮಂಜರೀ, ಶ್ರೀವೇದೇಶತೀರ್ಥ ಕೃತಿಮಂಜರೀ ಇತ್ಯಾದಿ ಕೆಲವು ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಪ್ರಕೃತ ಲೇಖಕರ ಅಣುಭಾಷ್ಯ ತತ್ತ್ವಮಂಜರಿಯ ಕನ್ನಡ ಅನುವಾದವನ್ನು ೧೯೭೫ ರಲ್ಲಿ ಬೆಂಗಳೂರಿನ ಮಾಡೆಲ್ ಹೌಸ್ ಬೀದಿಯ ಶ್ರೀ ರಾಘವೇಂದ್ರಸ್ವಾಮಿಗಳ ಮಠದವರು ಪ್ರಕಟಿಸಿದ್ದರು. ಈಗ ಇದರ ಎರಡನೆಯ ಆವೃತ್ತಿಯ ಪ್ರಕಟವಾಗಿದೆ. ಇವರ ಗೀತಾತಾತ್ಪರ್ಯದ ಉಪೋದ್ಘಾತಭಾಗ ಮತ್ತು ಸದಾಚಾರಸ್ಮೃತಿಯ ಕನ್ನಡ ಅನುವಾದಗಳನ್ನು ಜಯನಗರದ ಶ್ರೀ ರಾಘವೇಂದ್ರಸ್ವಾಮಿಗಳ ಮಠದವರು ಪ್ರಕಟಿಸಿದ್ದಾರೆ.

ಬೆಂಗಳೂರಿನ ಮಲ್ಲೇಶ್ವರದಲ್ಲಿಯ ಶ್ರೀರಾಘವೇಂದ್ರಾಶ್ರಮ (ರಿ.) ಅಧ್ಯಕ್ಷರಾದ ಶ್ರೀ ಬಿ. ಎನ್ ವಾಸುದೇವರಾಯರು ಶ್ರೀ ಗೀತಾಭಾಷ್ಯ, ಗೀತಾತಾತ್ಪರ್ಯ ಇತ್ಯಾದಿ ಸುಮಾರು ೨೦ ಗ್ರಂಥಗಳ ಕನ್ನಡ ಅನುವಾದಗಳನ್ನು ಪ್ರಕಟಿಸಿದ್ದಾರೆ. ಹೀಗೆ ಕನ್ನಡದಲ್ಲಿ ದ್ವೈತವೇದಾಂತದ ಗ್ರಂಥಗಳು ಪ್ರಕಟವಾಗುವ ಕಾರ್ಯ ಸ್ವಲ್ಪಮಟ್ಟಿಗೆ ನಡೆದಿದೆ ಆದರೆ ಇದು ಏನೇನೂ ಸಾಲದು. ಈ ಎಲ್ಲ ಸಂಸ್ಥೆಗಳವರು ಪರಸ್ಪರ ಸಹಕಾರದಿಂದ ಒಂದು ಸರ್ವಾಂಗಪೂರ್ಣ ಯೋಜನೆಯನ್ನು ಮಾಡಿಕೊಂಡು ಎಲ್ಲ ಗ್ರಂಥಗಳನ್ನೂ ಕನ್ನಡ, ಹಿಂದಿ ಮತ್ತು ಇಂಗ್ಲಿಷ್‌ಗಳಲ್ಲಿ ಅನುವಾದ ಮಾಡಿಸಿ ಪ್ರಕಟಿಸುವದು ಅತ್ಯಗತ್ಯವಾಗಿದೆ ಈ ಯೋಜನೆಯು ಎಲ್ಲ ಗ್ರಂಥಗಳನ್ನೊಳಗೊಂಡಂತೆ ಸರ್ವಾಂಗಪೂರ್ಣವಾಗಿದ್ದು ಅದರಲ್ಲಿ ಕೆಲಕೆಲವು ಗ್ರಂಥಗಳ ಪ್ರಕಟಣೆಯನ್ನು ಕೆಲ ಸಂಸ್ಥೆಗಳು ವಹಿಸಿಕೊಂಡು ಆರ್ಥಿಕ ದೃಷ್ಟಿಯಿಂದ ವಿಕೇಂದ್ರೀಕರಣ, ಪ್ರಕಟಣೆ–ಮಾರಾಟಗಳ ದೃಷ್ಟಿಯಿಂದ ಕೇಂದ್ರೀಕೃತ ದೃಷ್ಟಿಕೋನಗಳನ್ನಿಟ್ಟುಕೊಂಡರೆ ಈ ಕಾರ್ಯವು ಯಶಸ್ವಿಯಾಗುವದರಲ್ಲಿ ಸಂದೇಹವಿಲ್ಲ.

ಇನ್ನು ಅನುವಾದಗಳ ಪ್ರಯೋಜನ ಏನು ಎಂಬ ಬಗ್ಗೆ ನಮ್ಮ ತತ್ತ್ವಮಂಜರಿಯ ಪೀರಿಕೆಯಲ್ಲಿ ಕೆಲವು ಮಾತುಗಳನ್ನು ಈಗಾಗಲೇ ಹೇಳಿದ್ದೇವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಪುನರುಚ್ಚರಿಸುತ್ತೇವೆ

೧. ಶಾಸ್ತ್ರಗ್ರಂಥಗಳು ಗುರುಮುಖದಿಂದ ಪಾಠವಿಲ್ಲದೆ ಕೇವಲ ಅನುವಾದಗಳಿಂದ ತಿಳಿದುಕೊಳ್ಳಲು ಬರುವದಿಲ್ಲ ಗುರುಮುಖದಿಂದ ಪಾಠವಾದ ಮೇಲೆ ಆ ವಿಷಯಗಳನ್ನು ಮತ್ತೊಮ್ಮೆ ಚಿಂತನೆಮಾಡಲು ನೆನಪಿಟ್ಟುಕೊಳ್ಳಲು ಮಾತ್ರ ಅನುವಾದಗಳು ಸಹಾಯಮಾಡುವವು.

೨. ಯಾವದೇ ಶಾಸ್ತ್ರವನ್ನು ಓದಬೇಕಾದರೆ, ತಿಳಿದುಕೊಳ್ಳಬೇಕಾದರೆ ಆ ಶಾಸ್ತ್ರದ ಕೆಲವು ಪಾರಿಭಾಷಿಕ ಪದಗಳನ್ನು ರೂಢಿಸಿಕೊಳ್ಳಬೇಕಾಗುವದು. ಪ್ರತಿಯೊಂದು ಸಂಸ್ಕೃತ ಪಾರಿಭಾಷಿಕ ಪದಕ್ಕೂ ಒಂದು ಕನ್ನಡ ಪದವನ್ನು ಅಪೇಕ್ಷಿಸಬಾರದು. ಕನ್ನಡ ಅನುವಾದದಲ್ಲಿ ಉಪಯೋಗಿಸಿದ ಸಂಸ್ಕೃತ ಪಾರಿಭಾಷಿಕ ಪದಗಳು ಮೊದಮೊದಲು ಅಪರಿಚಿತವೆನಿಸಿದರೂ ಮುಂದೆ ರೂಢಿಯಾಗುವವು. ಯಾವದೇ ಭಾಷೆಯಲ್ಲಿಯ ಹೊಸ ಪದಗಳನ್ನು ಕಲಿಯುವಾಗಿನ ನಿಯಮ ಇಲ್ಲಿ ಅನ್ವಯಿಸುವದು.

೩. ಅನುವಾದದ ಉದ್ದೇಶವು ಪ್ರತಿಪದಾರ್ಥ, ಅನ್ವಯ, ವ್ಯಾಕರಣವ್ಯುತ್ಪತ್ತಿ, ಶಾಸ್ತ್ರಾಂತರ ಪ್ರಕ್ರಿಯೆ ಇತ್ಯಾದಿ ಎಲ್ಲವನ್ನೂ ತಿಳಿಸುವದಾಗಿರುವದಿಲ್ಲ. ಅದು ಪಾಠದಿಂದ ತಿಳಿದುಕೊಳ್ಳಬೇಕಾದ ಅಂಶ. ಅನುವಾದವು ಒಟ್ಟು ತಾತ್ಪರ್ಯವನ್ನು ಮಾತ್ರ ತಿಳಿಸುವದು.

ಪ್ರಕೃತ ಶ್ರೀವಿಷ್ಣುತತ್ತ್ವವಿನಿರ್ಣಯದ ಅನುವಾದವನ್ನು ಸಾಧ್ಯವಾದಷ್ಟು ಸುಲಭವಾಗಿಯೂ ಸ್ಪಷ್ಟವಾಗಿಯೂ ಮಾಡಲು ಪ್ರಯತ್ನಿಸಿರುವೆವು ಮೂಲದ ಪಂಕ್ತಿಗಳ ಅರ್ಥವು ಸ್ಪಷ್ಟವಾಗುವಂತೆ ಕಂಸಗಳಲ್ಲಿ ಕೆಲ ವಿವರಗಳನ್ನು ಕೊಟ್ಟಿರುವೆವು. ಟೀಕಾದ ಸಾರವನ್ನು ವಿವರಣೆಯ ರೂಪದಲ್ಲಿ ಕೊಟ್ಟಿರುವೆವು. ಈ ಎಲ್ಲವೂ ಆಸ್ತಿಕ ವಾಚಕರಿಗೆ ಸಹಾಯವಾಗುವದೆಂದು ನಂಬುವೆವು. ಕೆಲ ವಿಶ್ವವಿದ್ಯಾನಿಲಯಗಳಲ್ಲಿ ಈ ಗ್ರಂಥವು ಸಂಸ್ಕೃತ ಮತ್ತು ತತ್ತ್ವಜ್ಞಾನ ಎಮ್. ಎ. ವರ್ಗಗಳಿಗೆ ಪಠ್ಯಪುಸ್ತಕ ವಾಗಿದ್ದು ಅವರಿಗೂ ಉಪಯುಕ್ತವಾಗುವದೆಂದು ನಂಬುವೆವು.

ಈ ಗ್ರಂಥದ ಪ್ರಕಾಶನಕ್ಕೆ ತಿರುಮಲೆ ತಿರುಪತಿ ದೇವಸ್ಥಾನದವರು ಧನಸಹಾಯ ಮಾಡಿದ್ದಾರೆ ಮದ್ರಾಸಿನ ಇಂದಿರಾಬಾಯಿ ಚಾರಿಟೀಸ್‌ದ ಶ್ರೀ ಎಸ್. ಎ. ಎನ್. ರಂಗನಾಥಾಚಾರ್ಯರೂ ಸಹಾಯ ಮಾಡಿದ್ದಾರೆ ಶ್ರೀ ರಂಗನಾಥಾಚಾರ್ಯರು SMSO ಸಭೆಯ ಮುಖಾಂತರ ನಾನು ಮಾಡಿದ ದಶೋಪನಿಷತ್ತುಗಳ ಇಂಗ್ಲಿಷ್ ಭಾಷಾಂತರವನ್ನು ಪ್ರಕಟಿಸುವದಲ್ಲದೆ ನನ್ನ ಸ್ವಂತದ ಪ್ರಕಟಣೆಗಳಾದ ತತ್ತ್ವಮಂಜರೀ ಮತ್ತು ವಿಷ್ಣುತತ್ತ್ವವಿನಿರ್ಣಯಗಳಿಗೂ ಧನಸಹಾಯ ಮಾಡಿದ್ದಾರೆ. ನನ್ನ ಜ್ಞಾನಕಾರ್ಯಕ್ಕೆ ಅವರ ಪ್ರೋತ್ಸಾಹವು ದಾರಿದೀಪವಾಗಿದೆ. ಅವರಿಗೆ ಕೇವಲ ಮಾತುಗಳಿಂದ ಕೃತಜ್ಞತೆಯನ್ನು ಅರ್ಪಿಸು ವದಕ್ಕಿಂತ ಶ್ರೀ ಮಧ್ವಶಾಸ್ತ್ರದ ಸೇವೆಯನ್ನು ಇನ್ನೂ ಹೆಚ್ಚು ಹೆಚ್ಚು ಮಾಡುವದೇ ಅವರಿಗೆ ಸಂತೋಷನ್ನುಂಟುಮಾಡುವದು.

ಪ್ರಭಾ ಮುದ್ರಣಾಲಯದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರ ಕಾರ್ಯ ನಾವು ಮಾಡಿಸಿದ ಬೆಳ್ಳಿಯ ಕವಚಕ್ಕೆ ಬಂಗಾರದ ಹೊದಿಕೆ ಕೊಟ್ಟಂತೆ ಇರುವದು. ನನ್ನ ಗ್ರಂಥಗಳಿಗೆ ವಾಚಕರಿಂದ ಬರುವ ಮೆಚ್ಚಿಗೆಯಲ್ಲಿ ಅರ್ಧಕ್ಕಿಂತ ಹೆಚ್ಚು ಉತ್ತಮ ಮುದ್ರಣದಿಂದಲೇ ಇರುವದು. ಕಾಲು ಶತಮಾನದ ನಮ್ಮ ಅವರ ಸಂಬಂಧ ಇನ್ನೂ ಕಾಲು ಶತಮಾನ ಮುಂದುವರೆಯಬೇಕಾಗಿದೆ. ಅವರಿಗೆ ಕೃತಜ್ಞತೆಗಳು.

ಈ ನಮ್ಮ ಗ್ರಂಥಸೇವೆಯನ್ನು ಶ್ರೀ ಹರಿ ವಾಯು ಗುರುಗಳು ಇನ್ನೂ ಮುಂದುವರೆಸಲಿ ಎಂದು ಪ್ರಾರ್ಥಿಸುವೆವು.

**ಕೆ. ಟಿ. ಪಾಂಡುರಂಗಿ**
ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು
ಬೆಂಗಳೂರು ವಿಶ್ವವಿದ್ಯಾನಿಲಯ
ಉಪಕುಲಪತಿ, ಪೂರ್ಣಪ್ರಜ್ಞ
ವಿದ್ಯಾಪೀಠ, ಬೆಂಗಳೂರು

ವಿದ್ಯಾಧೀಶನಿಲಯ
132/4, III ಬ್ಲಾಕು, ಜಯನಗರ
ಬೆಂಗಳೂರು-11

# ವಿಷ್ಣುತತ್ತ್ವವಿನಿರ್ಣಯ ಸಾರ

ವಿಷ್ಣುತತ್ತ್ವವಿನಿರ್ಣಯ ಗ್ರಂಥದ ಮಂಗಲಶ್ಲೋಕದಲ್ಲಿ ಈ ಗ್ರಂಥದ ವಿಷಯ ವಿನ್ಯಾಸವನ್ನು ನಾರಾಯಣನಿಗೆ ಕೊಟ್ಟ ಮೂರು ವಿಶೇಷಣಗಳಿಂದ ವಿವರಿಸಲಾಗಿದೆ.

ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಮ್ |
ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಮ್ ||

ಎಂಬ ಈ ಮಂಗಲಶ್ಲೋಕದಲ್ಲಿ 'ಸದಾಗಮೈಕವಿಜ್ಞೇಯಮ್' ಎಂಬ ವಿಶೇಷಣವು ಮೊದಲನೆಯ ಅಧ್ಯಾಯದಲ್ಲಿ ಬಂದ ವಿಷಯಗಳ ಸಾರವನ್ನು ತಿಳಿಸುತ್ತದೆ. ಈ ಅಧ್ಯಾಯದಲ್ಲಿ ಸದಾಗಮಗಳು ಯಾವವು? ವೇದಗಳು ಪೌರುಷೇಯವೇ ಅಪೌರುಷೇಯವೇ? ಜ್ಞಾನದ ಪ್ರಾಮಾಣ್ಯವು ಸ್ವತಃ ಇರುವದು, ಸಿದ್ಧವಾಕ್ಯಗಳಿಂದಲೂ ಶಾಬ್ದಬೋಧ ಅಂದರೆ ವಾಕ್ಯಾರ್ಥಬೋಧವಾಗುವದು, ಭೇದವು ಸತ್ಯವಾಗಿರುವದು, ಧರ್ಮಿಸ್ವರೂಪವಾಗಿರುವದು, 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಶ್ರುತಿಗಳು ಅಭೇದಬೋಧಕವಲ್ಲ, 'ತತ್ತ್ವಮಸಿ' ಎಂಬ ವಾಕ್ಯದ ಸಂದರ್ಭದಲ್ಲಿ ಬಂದ ಒಂಬತ್ತೂ ದೃಷ್ಟಾಂತಗಳು ಭೇದವನ್ನೇ ಬೋಧಿಸುವವು, ಶ್ರುತಿಯು ಜಗತ್ತಿನ ಸತ್ಯತ್ವವನ್ನೂ ವಿಷ್ಣುವಿನ ಸರ್ವೋತ್ತಮವನ್ನೂ ಪ್ರತಿಪಾದಿಸುವದು ಎಂಬ ವಿಷಯಗಳು ಬಂದಿರುವವು. ಸದಾಗಮಗಳೇ ವಿಷ್ಣುವಿನ ಜ್ಞಾನವನ್ನು ಮಾಡಿಕೊಡುವ ಪ್ರಮಾಣಗಳು. ಪ್ರತ್ಯಕ್ಷ, ಅನುಮಾನಗಳಲ್ಲ. ವಿಷ್ಣುವೇ ಸದಾಗಮಗಳ ಮುಖ್ಯಪ್ರತಿಪಾದ್ಯನು ಎಂಬ ಪ್ರಮೇಯವೇ ಮೊದಲನೆಯ ಅಧ್ಯಾಯದ ಸಾರ.

ಎರಡನೆಯ ಅಧ್ಯಾಯದಲ್ಲಿ ವಿಷ್ಣುವು ಕ್ಷರ ಅಂದರೆ ಜೀವರು ಹಾಗೂ ಜಡಗಳು, ಅಕ್ಷರ ಅಂದರೆ ಲಕ್ಷ್ಮೀದೇವಿ ಇವರೆಲ್ಲರಿಗಿಂತ ಉತ್ತಮನು ಎಂಬ ವಿಷಯವು ಪ್ರತಿಪಾದಿಸಲ್ಪಟ್ಟಿದೆ. ಇದರ ಸಾರವನ್ನು 'ಸಮತೀತಕ್ಷರಾಕ್ಷರಮ್' ಎಂಬ ಎರಡನೆಯ ವಿಶೇಷಣವು ಹೇಳುತ್ತದೆ. ವಿಷ್ಣುವು ಸರ್ವಥಾ ದೋಷರಹಿತನು ಮತ್ತು ಅನಂತಗುಣಪೂರ್ಣನು ಎಂಬ ಪ್ರಮೇಯವನ್ನು ಮೂರನೆಯ ಅಧ್ಯಾಯವು ಪ್ರತಿಪಾದಿಸುತ್ತದೆ. ಇದನ್ನು 'ನಿರ್ದೋಷಾಶೇಷಸದ್ಗುಣಮ್' ಎಂಬ ಮೂರನೆಯ ವಿಶೇಷಣವು ತಿಳಿಸುತ್ತದೆ. ಹೀಗೆ ಈ ಗ್ರಂಥದ ಮೂರು ಅಧ್ಯಾಯಗಳ ಸಾರವನ್ನು ಮೂರು ವಿಶೇಷಣಗಳಿಂದ ಮಂಗಲಶ್ಲೋಕದಲ್ಲಿಯೇ ತಿಳಿಸಲಾಗಿದೆ.

**ಸದಾಗಮಗಳು**

**ವೇದಗಳು ಮಹಾಭಾರತ ಪಂಚರಾತ್ರ ಮೂಲರಾಮಾಯಣ ಮತ್ತು ಇವುಗಳಿಗೆ ಅನುಸಾರಿಯಾದ ಪುರಾಣಗಳು ಸದಾಗಮಗಳು. ಇವೆಲ್ಲ ಪ್ರಮಾಣ. ಇವುಗಳಿಗೆ ವಿರುದ್ಧವಾದ ಪಾಶುಪತಾದಿ ಆಗಮಗಳಲ್ಲಿಯೂ ಕೂಡ' ವೇದಾದಿಗಳಿಗೆ**

ವಿರುದ್ಧವಲ್ಲದ ಭಾಗಗಳು ಪ್ರಮಾಣ ಇದರಿಂದ ಸದಾಗಮಗಳು ಕೇವಲ ವೇದಗಳಿಗೆ ಮಾತ್ರ ಸೀಮಿತವಾಗಿಲ್ಲ ಆದರೆ ಇತಿಹಾಸ ಪುರಾಣಗಳೂ ಸದಾಗಮಗಳು ಎಂದು ತಿಳಿದುಬರುತ್ತದೆ ವೇದಗಳ ಅರ್ಥವನ್ನು ಇತಿಹಾಸ ಪುರಾಣಗಳ ಸಹಾಯದಿಂದ ತಿಳಿಯಬೇಕು ಎಂಬ ಮಾತಿನ ಮರ್ಮ ತಿಳಿದುಬರುತ್ತದೆ

**ವೇದಾಪೌರುಷೇಯತ್ವ**

ವೇದಗಳನ್ನು ಯಾರೂ ಬರೆದಿಲ್ಲ ವೇದಮಂತ್ರಗಳು ಋಷಿಗಳಿಗೆ ಗೋಚರವಾಗಿ ಅನಾದಿಯಾಗಿ ನಡೆದುಕೊಂಡು ಬಂದಿವೆ ಇವನ್ನು ಯಾರಾದರೂ ರಚಿಸಿದ್ದರೆ ಅವರು ಯಾರು ಎಂಬುದು ಪರಂಪರೆಯಾಗಿ ತಿಳಿದುಬರುತ್ತಿತ್ತು ಆದರೆ ಇಂಥವರು ರಚಿಸಿದರು ಎಂದು ಯಾರೂ ಎಂದೂ ಹೇಳಿಲ್ಲ ಆಯಾ ಮಂತ್ರಗಳಿಗೆ ಸಂಬಂಧಿಸಿದ ಋಷಿಗಳು ಕೇವಲ ಅವುಗಳ ದ್ರಷ್ಟಾರರಾದ ಋಷಿಗಳು. ರಚಿಸಿದವರಲ್ಲ.

ವೇದಗಳು ಧರ್ಮ ಅಧರ್ಮ ಆತ್ಮ ಪರಮಾತ್ಮ ಇತ್ಯಾದಿ ಅತೀಂದ್ರಿಯ ವಸ್ತುಗಳನ್ನು ತಿಳಿಸುವವು. ಇವು ಪ್ರತ್ಯಕ್ಷ ಅಥವಾ ಅನುಮಾನದಿಂದ ತಿಳಿದುಬರುವಂಥ ವಿಷಯಗಳಲ್ಲ ಸರ್ವಜ್ಞನಾದ ವ್ಯಕ್ತಿಯೋರ್ವನು ವೇದಗಳನ್ನು ರಚಿಸಿದನು ಎಂದು ಹೇಳಲೂ ಬರುವದಿಲ್ಲ ಅವನಾದರೂ ಸರ್ವಜ್ಞನಾಗಲು ಯಾವದಾದರೂ ಪ್ರಮಾಣಗಳಿಂದಲೇ ಎಲ್ಲ ವಿಷಯಗಳ ಜ್ಞಾನವನ್ನು ಪಡೆಯಬೇಕು ಪ್ರತ್ಯಕ್ಷ ಅನುಮಾನಗಳಿಂದ ತಿಳಿಯಲಾರದ ಧರ್ಮ ಅಧರ್ಮ ಆತ್ಮ ಪರಮಾತ್ಮಗಳನ್ನು ಅವನಾದರೂ ತಿಳಿದುಕೊಳ್ಳುವದು ಹೇಗೆ? ಆದ್ದರಿಂದ ಅವನಿಗೂ ಅಪೌರುಷೇಯ ವೇದಗಳೇ ಪ್ರಮಾಣವೆಂದು ಹೇಳಬೇಕಾಗುವದು.

ಸಾಮಾನ್ಯವಾಗಿ ವಾಕ್ಯಗಳನ್ನು ಯಾರಾದರೂ ಶಬ್ದಗಳನ್ನು ಜೋಡಿಸಿ ರಚಿಸಬೇಕಾಗುವದು. ಆದರೆ ಈ ನಿರ್ಬಂಧವು ಪೌರುಷೇಯ ವಾಕ್ಯಗಳಿಗೆ ಮಾತ್ರ ಅನ್ವಯಿಸುವದು. ಋಷಿಗಳಿಗೆ ಗೋಚರವಾಗುವ ವೇದವಾಕ್ಯಗಳು ಅನಾದಿ ನಿತ್ಯವಾದವು. ಇವುಗಳಲ್ಲಿಯ ವರ್ಣ ಪದ ಕ್ರಮ ಎಲ್ಲವೂ ನಿತ್ಯ. ವಾಕ್ಯವು ಪ್ರಮಾಣವಾಗಿರಬೇಕಾದರೆ ಅದು ನಿರ್ದುಷ್ಟವಾಗಿರುವದು ಮುಖ್ಯ. ಆಪ್ತರು ಹೇಳಿದ ಮಾತುಗಳು ನಿರ್ದುಷ್ಟವಾಗಿರುವವು. ಅಪೌರುಷೇಯ ವಾಕ್ಯಗಳೂ ನಿರ್ದುಷ್ಟವಾಗಿರುವವು

ವೇದಗಳು ಅಪೌರುಷೇಯ ಮತ್ತು ನಿತ್ಯ. ಆದರೆ ಪುರಾಣಗಳು ನಿತ್ಯಾನಿತ್ಯ. ಇವು ಅರ್ಥತಃ ನಿತ್ಯ ಆದರೆ ಶಬ್ದತಃ ಅನಿತ್ಯ.

**ಸ್ವತಃ ಪ್ರಾಮಾಣ್ಯ**

ನಿರ್ದುಷ್ಟವಾದ ಇಂದ್ರಿಯಗಳು ನಿರ್ದುಷ್ಟವಾದ ಹೇತುಗಳು ಮತ್ತು ನಿರ್ದುಷ್ಟವಾದ ಪೌರುಷೇಯ ಶಬ್ದ ಇವುಗಳಿಂದ ಪ್ರತ್ಯಕ್ಷ ಅನುಮಿತಿ ಶಬ್ದರೂಪ

ಜ್ಞಾನವುಂಟಾಗುವದು. ಈ ಜ್ಞಾನಗಳು ಪ್ರಮಾಣವಾಗಿರಲು ಇವುಗಳ ನಿರ್ದುಷ್ಟವಾದ ಸಾಧನಗಳನ್ನು ಬಿಟ್ಟು ಬೇರೆ ಸಾಧನಗಳು ಅಗತ್ಯವಿಲ್ಲ ಇದನ್ನೇ ಉತ್ಪತ್ತಿಯಲ್ಲಿ ಪ್ರಾಮಾಣ್ಯದ ಸ್ವತಸ್ತ್ವ ಎನ್ನುವರು. ಹೀಗೆ ಉಂಟಾದ ಈ ಜ್ಞಾನಗಳನ್ನೂ ಇವುಗಳ ಪ್ರಾಮಾಣ್ಯವನ್ನೂ ಸಾಕ್ಷಿಯು ಗ್ರಹಿಸುವದು. ಈ ಸಾಕ್ಷಿಗೆ ಬೇರೆ ಯಾವ ಸಾಧನದ ಅಗತ್ಯವಿಲ್ಲ ಇದನ್ನೇ ಜ್ಞಪ್ತಿಯಲ್ಲಿ ಪ್ರಾಮಾಣ್ಯ ಸ್ವತಸ್ತ್ವ ಎನ್ನುವರು ಹೀಗೆ ದ್ವೈತಮತದಲ್ಲಿ ಉತ್ಪತ್ತಿ ಮತ್ತು ಜ್ಞಪ್ತಿ ಎರಡರಲ್ಲಿಯೂ ಪ್ರಾಮಾಣ್ಯ ಸ್ವತಸ್ತ್ವವನ್ನು ಅಂಗೀಕರಿಸಿರುವರು.

ಜ್ಞಾನದ ಅಪ್ರಾಮಾಣ್ಯವು ಇಂದ್ರಿಯಾದಿ ದೋಷಗಳಿಂದ ಉಂಟಾಗುವದು ಜ್ಞಾನದ ಅಪ್ರಾಮಾಣ್ಯವು ಬಾಧ ಅಥವಾ ವ್ಯಭಿಚಾರಗಳು ಉಂಟಾದಾಗ ಪರೀಕ್ಷಿಸಿ ನೋಡಿದರೆ ಕಂಡುಬರುವದು. ಈ ಅಪ್ರಾಮಾಣ್ಯವು ಸಾಕ್ಷಿಗೇ ತಿಳಿಯುವದು ಆದರೆ ಪರೀಕ್ಷಿಸಿದಾಗ ತಿಳಿಯುವದು ಆದ್ದರಿಂದ ಅಪ್ರಾಮಾಣ್ಯವು ಪರತಃ ಅಂದರೆ ಪರೀಕ್ಷೆಯ ಸಹಕಾರದಿಂದ ತಿಳಿಯುವದು ಎನ್ನುವರು.

ವೇದಗಳು ಮಾತ್ರ ಸದಾ ನಿರ್ದುಷ್ಟವಾಗಿರುವದರಿಂದ ಸ್ವತಃ ಪ್ರಮಾಣವುಳ್ಳವುಗಳಾಗಿರುವವು

**ಸಿದ್ಧವಾಕ್ಯಗಳಿಂದಲೂ ವಾಕ್ಯಾರ್ಥಬೋಧವಾಗುವದು**

ಬಾಲಕರು ವಾಕ್ಯಗಳ ಅರ್ಥಗಳನ್ನು ತಿಳಿದುಕೊಳ್ಳುವಾಗ ಅವುಗಳನ್ನು ಹಿರಿಯರು ಮಾಡುವ ಕಾರ್ಯಗಳಿಂದ ತಿಳಿದುಕೊಳ್ಳುವರು. ಉದಾಹರಣೆಗೆ ಕುದುರೆಯನ್ನು ಕಟ್ಟು ಕುದುರೆಯನ್ನು ಬಿಚ್ಚು ಎಂಬ ವಾಕ್ಯಗಳನ್ನು ಕೇಳಿ ಹಿರಿಯರು ಆ ಕಾರ್ಯಗಳನ್ನು ಮಾಡುವದನ್ನು ನೋಡಿ ಕುದುರೆ ಅಂದರೆ ಯಾವದು ಎಂಬುದನ್ನು ತಿಳಿದುಕೊಳ್ಳುವರು. ಇದರಿಂದ ಕಾರ್ಯಗಳನ್ನು ಬೋಧಿಸುವ ವಾಕ್ಯಗಳಿಂದಲೇ ವಾಕ್ಯಾರ್ಥಬೋಧವಾಗುವದು. ಆದ್ದರಿಂದ ಸಿದ್ಧವಸ್ತುವಾದ ವಿಷ್ಣುವನ್ನು ವೇದವಾಕ್ಯಗಳು ಬೋಧಿಸಲಾರವು ಎಂಬ ಆಕ್ಷೇಪವನ್ನು ಕೆಲವರು ಮಾಡುವರು. ಆದರೆ 'ಇವರು ನಿನ್ನ ತಂದೆ' 'ಇವರು ನಿನ್ನ ತಾಯಿ' ಎಂಬ ಕಾರ್ಯವಿಲ್ಲದ ವಾಕ್ಯಗಳಿಂದಲೂ ವಾಕ್ಯಾರ್ಥ ಬೋಧವಾಗುವದು ಕಂಡುಬರುತ್ತದೆ. ಆದ್ದರಿಂದ ಕಾರ್ಯವನ್ನು ಬೋಧಿಸುವ ವಾಕ್ಯಗಳೇ ವಾಕ್ಯಾರ್ಥಬೋಧಕ ಎಂಬ ನಿಯಮವಿಲ್ಲ. ಸಿದ್ಧವಾದ ವಸ್ತುಗಳನ್ನು ಬೋಧಿಸುವ ವಾಕ್ಯಗಳೂ ವಾಕ್ಯಾರ್ಥ ಬೋಧಕ. ಆದ್ದರಿಂದ ವೇದಗಳು ಸಿದ್ಧವಸ್ತುವಾದ ವಿಷ್ಣುವನ್ನು ಬೋಧಿಸಲು ಯಾವ ಬಾಧಕವೂ ಇಲ್ಲ. ಅಲ್ಲದೆ ಒಂದು ವಾಕ್ಯವನ್ನು ಕೇಳಿ ಆಯಾ ವಿಷಯಗಳಲ್ಲಿ ಪ್ರವೃತ್ತನಾಗಲು ಅದು ಇಷ್ಟವಾಗಿದ್ದರೆ ಸಾಕು. ಆದ್ದರಿಂದ ಇಷ್ಟಸಾಧನತಾ ಜ್ಞಾನವು ಆಯಾ ವಿಷಯಗಳ ಕಡೆಗೆ ಪ್ರವರ್ತಕವೇ ಹೊರತು ಕಾರ್ಯತಾ ಜ್ಞಾನವಲ್ಲ.

**ಭೇದವು ಸತ್ಯ ಮತ್ತು ಧರ್ಮಿಸ್ವರೂಪ**

ಇನ್ನು ವೇದಗಳು ಜೀವ ಪರಮಾತ್ಮರ ಭೇದವನ್ನು ಹೇಳುವವೋ ಅಭೇದ ವನ್ನು ಹೇಳುವವೋ ಎಂದು ನಿರ್ಣಯಿಸುವದಕ್ಕಿಂತ ಮೊದಲು ಭೇದವು ಸತ್ಯವೇ ಮಿಥ್ಯೆಯೇ ಎಂಬುದನ್ನು ಪರಿಶೀಲಿಸಬೇಕು ಅದ್ವೈತಮತದ ಪ್ರಕಾರ ಭೇದವು ಕೇವಲ ವ್ಯಾವಹಾರಿಕ ಅದು ಮಿಥ್ಯಾಭೂತವಾದುದು ಇದಕ್ಕೆ ಅವರು ಹೇಳುವ ಕಾರಣವೇನೆಂದರೆ ಭೇದಕ್ಕೆ ಸ್ವಂತದ ಸ್ವರೂಪವೇ ಇಲ್ಲ ಅದು ಪರಾವಲಂಬಿ ಯಾದುದು. ಉದಾಹರಣೆಗೆ ಹೂವಿಗಿಂತ ಪುಸ್ತಕವು ಭಿನ್ನ, ಇವೆರಡರಲ್ಲಿ ಭೇದವಿದೆ ಎಂದು ಹೇಳಬೇಕಾದರೆ ಮೊದಲು ಹೂವು ಮತ್ತು ಪುಸ್ತಕಗಳು ಎರಡು ಪದಾರ್ಥಗಳು ಎಂದು ತಿಳಿಯಬೇಕು. ಇವು ಎರಡು ಪದಾರ್ಥಗಳು ಎಂದು ತಿಳಿಯಬೇಕಾದರೆ ಇವುಗಳು ಭಿನ್ನವಾಗಿವೆ ಎಂದು ತಿಳಿಯಬೇಕು ಹೀಗೆ ಭೇದ-ಜ್ಞಾನವು ಅನ್ಯೋನ್ಯಾಶ್ರಯವುಳ್ಳದ್ದಾಗಿದೆ ಆದ್ದರಿಂದ ಇದೊಂದು ಸತ್ಯವಾದ ಪದಾರ್ಥವೇ ಅಲ್ಲ. ಕೇವಲ ವ್ಯವಹಾರಕ್ಕಾಗಿ ಹೇಳುವಂಥದು ಆದ್ದರಿಂದ ಭೇದವು ಮಿಥ್ಯಾ ಎಂದು ಅದ್ವೈತಿಗಳ ವಾದ

ಈ ವಾದ ಸರಿಯಲ್ಲ ಹೂವು ಮತ್ತು ಪುಸ್ತಕ ಭಿನ್ನ ಎಂಬ ತಿಳುವಳಿಕೆಯಲ್ಲಿ ಎರಡು ಹಂತಗಳಿವೆ. ಹೂವನ್ನು ಹೂವು ಎಂದು ತಿಳಿದುಕೊಂಡಾಗ ಅದು ಇನ್ನಿತರ ಎಲ್ಲ ಪದಾರ್ಥಗಳಿಗಿಂತಲೂ ಭಿನ್ನ ಎಂಬುದೂ ತಿಳಿದುಬರುವದು. ಇದಕ್ಕೆ ಪುಸ್ತಕದ ಜ್ಞಾನದ ಅಗತ್ಯವಿಲ್ಲ. ಹೂವು ಇನ್ನಿತರ ಎಲ್ಲ ಪದಾರ್ಥಗಳಿಗಿಂತ ಭಿನ್ನ ಎಂದು ತಿಳಿದುಕೊಳ್ಳುವದೂ ಹೂವು ಹೂವು ಎಂದು ತಿಳಿದುಕೊಳ್ಳುವದೂ ಪರಸ್ಪರ ಪ್ರತ್ಯೇಕಿಸಲು ಬರುವಂಥವಲ್ಲ ಯಾಕಂದರೆ ಹೂವಿನಲ್ಲಿರುವ ಇತರ ಪದಾರ್ಥಗಳ ಭೇದವು ಹೂವಿನ ಸ್ವರೂಪವೇ ಆಗಿದೆ. ಆದ್ದರಿಂದ ಭೇದವನ್ನು ತಿಳಿದುಕೊಳ್ಳುವದು ಪರಾವಲಂಬಿಯಾಗಿಲ್ಲ. ಹೀಗಾಗಿ ಅನ್ಯೋನ್ಯಾಶ್ರಯಕ್ಕೆ ಅವಕಾಶವಿಲ್ಲ. ಹೂವು ಇತರ ಎಲ್ಲ ಪದಾರ್ಥಗಳಿಗಿಂತ ಭಿನ್ನ ಎಂದು ತಿಳಿದವನು ಅದು ಪುಸ್ತಕದಿಂದ ಭಿನ್ನ ಹಣ್ಣಿಗಿಂತ ಭಿನ್ನ ಎಂದು ಒಂದೊಂದನ್ನೇ ಪ್ರತ್ಯೇಕಿಸಿ ಹೇಳಲು ಆಯಾ ಪದಾರ್ಥ ಗಳ ಉಲ್ಲೇಖ ನೆರವಾಗುತ್ತದೆ. ಇದು ಭೇದದ ಪರಾವಲಂಬಿತ್ವವಲ್ಲ. ಆದರೆ ನಿರೂಪಣೆಯ ರೀತಿ. ಹೀಗೆ ಭೇದದ ಸ್ವರೂಪವನ್ನು ಸ್ಪಷ್ಟವಾಗಿ ಗುರುತಿಸಲು ಬರುವದರಿಂದ ಅದು ಇಲ್ಲವೇ ಇಲ್ಲ, ಸತ್ಯವಲ್ಲ, ಕೇವಲ ವ್ಯಾವಹಾರಿಕ ಎಂದು ಹೇಳುವದು ಸರಿಯಲ್ಲ.

ಇನ್ನು ಈ ಭೇದವನ್ನು ಶ್ರುತಿಯು ಪ್ರತಿಪಾದಿಸುವದೇ ಇಲ್ಲವೇ ಎಂಬ ಪ್ರಶ್ನೆಗೆ ಅದ್ವೈತಿಗಳು ಭೇದವು ಪ್ರತ್ಯಕ್ಷ ಮತ್ತು ಅನುಮಾನಗಳಿಂದಲೇ ತಿಳಿದುಬರುವದರಿಂದ ಶ್ರುತಿಯು ಅದಕ್ಕೆ ಪ್ರಮಾಣವಲ್ಲ. ಪ್ರಮಾಣಾಂತರಗಳಿಂದ ತಿಳಿದುಬರುವ ಭೇದ ವನ್ನು ಶ್ರುತಿಯು ಕೇವಲ ಅನುವಾದ ಮಾಡುವದು. ಭೇದವನ್ನು ಅನುವಾದ ಮಾಡಿ

ಅದನ್ನು ನಿರಾಕರಿಸಿ ಅಭೇದವನ್ನು ತಿಳಿಸಲು ಅನುವಾದಮಾಡುವದು ಹೀಗೆ ಭೇದವನ್ನು ಅನುವಾದಮಾಡುವ ಶ್ರುತಿಗಳು ಭೇದಕ್ಕೆ ಪ್ರಮಾಣವಲ್ಲ ಕೇವಲ ಅನುವಾದಕಗಳು ಎಂದು ಅದ್ವೈತಿಗಳು ವಾದಿಸುವರು.

ಈ ವಾದವೂ ಸರಿಯಲ್ಲ ಭೇದವು ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳಿಂದ ಸಿದ್ಧವಾಗಿದೆ ಎಂದು ಒಪ್ಪಿಕೊಂಡಮೇಲೆ ಅದು ಅಭೇದಶ್ರುತಿಯಿಂದ ನಿರಾಕರಿಸಲ್ಪಡುತ್ತದೆ ಎಂದು ಹೇಳುವದು ಸರಿಯಲ್ಲ ಅಭೇದವನ್ನು ಹೇಳಲು ಅಗತ್ಯವಾದ ಜೀವ ಮತ್ತು ಈಶ್ವರನನ್ನು ತಿಳಿಸಿಕೊಡುವ ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳು ಉಪಜೀವ್ಯ ಪ್ರಮಾಣಗಳು. ಆದ್ದರಿಂದ ಪ್ರಬಲವಾದವು. ಉಪಜೀವಕ ಪ್ರಮಾಣವಾದ ಅಭೇದ ಶ್ರುತಿಯು ಉಪಜೀವ್ಯಪ್ರಮಾಣಗಳಾದ ಪ್ರತ್ಯಕ್ಷ ಅನುಮಾನಗಳಿಗಿಂತ ಈ ವಿಷಯದಲ್ಲಿ ದುರ್ಬಲವು. ಸಾಮಾನ್ಯವಾಗಿ ಶ್ರುತಿಯು ಪ್ರತ್ಯಕ್ಷ ಮತ್ತು ಅನುಮಾನಗಳಿಗಿಂತ ಪ್ರಬಲವು. ಆದರೆ ಅವು ಉಪಜೀವ್ಯವಾದಾಗ ಶ್ರುತಿಯೇ ದುರ್ಬಲವಾಗುವದು ಉಪಜೀವ್ಯ ಅಂದರೆ ವಿಷಯ ಸಮರ್ಪಕ. ಪ್ರಕೃತದಲ್ಲಿ ಜೀವ-ಈಶ್ವರರ ಅಭೇದವನ್ನು ಹೇಳುವ ಶ್ರುತಿಗೆ ವಿಷಯಗಳಾದ ಜೀವ ಮತ್ತು ಈಶ್ವರರು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧರಾಗಿದ್ದಾರೆ ಎಂದು ಅದ್ವೈತಿಗಳೇ ಹೇಳಿದ್ದರಿಂದ ಈ ಪ್ರಮಾಣಗಳು ಉಪಜೀವ್ಯ ಪ್ರಮಾಣಗಳಾಗುವವು

ಭೇದಶ್ರುತಿಯು ಈಗಾಗಲೇ ಪ್ರತ್ಯಕ್ಷ ಅನುಮಾನಗಳಿಂದ ಸಿದ್ಧವಾದ ಭೇದವನ್ನು ಹೇಳುವದರಿಂದ ಕೇವಲ ಅನುವಾದಕ, ಆದ್ದರಿಂದ ಪ್ರಮಾಣವಲ್ಲ ಎಂದು ಹೇಳುವದೂ ಸರಿಯಲ್ಲ. ಪ್ರಮಾಣಾಂತರಪ್ರಾಪ್ತವಾದದ್ದನ್ನು ಹೇಳುವ ಮಾತ್ರದಿಂದ ಅನುವಾದವಾಗುವದಿಲ್ಲ. ಆದರೆ ಆ ಪ್ರಮಾಣಗಳಿಂದ ಪ್ರಾಪ್ತವಾದದ್ದನ್ನೇ ಅವಲಂಬಿಸಿ ಅದನ್ನೇ ಮತ್ತೆ ಹೇಳಿದರೆ ಅನುವಾದವಾಗುವದು ಪ್ರಕೃತದಲ್ಲಿ ಭೇದಶ್ರುತಿಗಳು ಸ್ವತಂತ್ರವಾಗಿಯೇ ಭೇದವನ್ನು ಹೇಳುತ್ತಿರುವವು. ಇಂಥ ಅನುವಾದದಿಂದ ಆ ಪ್ರಮೇಯ ದೃಢವಾಗುವದೇ ಹೊರತು ಅದರ ಪ್ರಾಮಾಣ್ಯವು ಕಡಿಮೆಯಾಗುವದಿಲ್ಲ.

ಜೀವ-ಈಶ್ವರ ಭೇದವು ಪ್ರತ್ಯಕ್ಷ-ಅನುಮಾನದಿಂದ ಸಿದ್ಧವಾಗಿದೆ ಎಂದು ಹೇಳುವರು. ಅಭೇದವು ಅದಕ್ಕೆ ವಿರುದ್ಧವಾದದ್ದರಿಂದ ಅಭೇದ ಶ್ರುತಿಗೇ ಪ್ರಕಾರಾಂತರದಿಂದ ಅರ್ಥ ಹೇಳುವದೇ ಉಚಿತವಾದ ಮಾರ್ಗ.

ಭೇದವು ಕೇವಲ ವ್ಯಾವಹಾರಿಕ ಅಥವಾ ಮಿಥ್ಯಾ ಎಂದು ಹೇಳುವದೂ ಸರಿಯಲ್ಲ. ಮಿಥ್ಯಾ ಶಬ್ದಕ್ಕೆ 'ಸದಸದ್ವಿಲಕ್ಷಣ' ಎಂಬ ಅರ್ಥವನ್ನು ಅದ್ವೈತಿಗಳು ಹೇಳುವರು. ಉದಾಹರಣೆಗೆ ಶುಕ್ತಿ ರಜತವು 'ಸತ್' ಅಲ್ಲ 'ಅಸತ್' ಅಲ್ಲ. ಆದ್ದರಿಂದ ಅದು 'ಸದಸದ್ವಿಲಕ್ಷಣ' ಅಂದರೆ ಮಿಥ್ಯಾ ಎಂಬ ವಿವರಣೆಯನ್ನು

ಕೊಡುವರು ಶುಕ್ತಿ ರಜತವು ಸತ್ ಆಗಿದ್ದರೆ ಮುಂದೆ ಇದು ರಜತವಲ್ಲ ಎಂಬ ಬಾಧಜ್ಞಾನ ಬರುತ್ತಿದ್ದಿಲ್ಲ. 'ಅಸತ್' ಆಗಿದ್ದರೆ ಅದರ ಪ್ರತೀತಿಯೇ ಬರುತ್ತಿದ್ದಿಲ್ಲ. ಆದ್ದರಿಂದ ಅದು ಸದಸದ್ವಿಲಕ್ಷಣ ಎಂಬುದು ಅವರ ವಾದ. ಈ ತರ್ಕವನ್ನವ-ಲಂಬಿಸಿಯೇ ಇಡೀ ಪ್ರಪಂಚವೇ ಮಿಥ್ಯಾ, ಭೇದವು ಮಿಥ್ಯಾ ಎಂದು ಹೇಳುವರು ಆದರೆ 'ಅಸತ್' ಆಗಿದ್ದರೆ ಪ್ರತೀತವೇ ಆಗುತ್ತಿದ್ದಿಲ್ಲ ಎಂಬ ಅವರ ವಾದ ಸರಿಯಲ್ಲ. 'ಅಸತ್'ಗೆ ಪ್ರತೀತಿ ಇದೆ. ಅದಕ್ಕೆ ಪ್ರತೀತಿ ಇಲ್ಲದಿದ್ದರೆ ಅದಕ್ಕಿಂತ ವಿಲಕ್ಷಣ ಎಂದು ಹೇಳಲು ಬರುವದಿಲ್ಲ 'ಅಸತ್' ಇಲ್ಲ ಎಂದು ನಿಷೇಧ ಮಾಡಲು ಬರುವದಿಲ್ಲ. ಆದ್ದರಿಂದ ಶುಕ್ತಿರಜತವು ಸದಸದ್ವಿಲಕ್ಷಣ ಅಂದರೆ ಮಿಥ್ಯಾ ಎಂದು ಹೇಳಲು ಬರುವದಿಲ್ಲ ಹೀಗೆ ಮಿಥ್ಯಾತ್ವದ ಲಕ್ಷಣವೇ ಕೂಡುವದಿಲ್ಲವಾದ್ದರಿಂದ ಪ್ರಪಂಚವನ್ನಾಗಲೀ ಭೇದವನ್ನಾಗಲೀ 'ಮಿಥ್ಯಾ' ಎಂದು ಹೇಳಲು ಬರುವದಿಲ್ಲ

ಒಟ್ಟಿನಲ್ಲಿ ಭೇದವನ್ನು ಒಪ್ಪಲು ಅನ್ಯೋನ್ಯಾಶ್ರಯದ ತೊಡಕಿಲ್ಲ, ಭೇದವು ಸತ್ಯ, ಭೇದವು ಧರ್ಮಿಸ್ವರೂಪ ಮತ್ತು ಭೇದಶ್ರುತಿಗಳು ಅನುವಾದಕವಲ್ಲ ಎಂಬ ಪ್ರಮೇಯಗಳನ್ನು ಈ ಮೊದಲನೆಯ ಅಧ್ಯಾಯದಲ್ಲಿ ಸಮರ್ಥಿಸಿದ್ದಾರೆ. ೧. ಜೀವ-ಜೀವ ಭೇದ ೨ ಜೀವ-ಜಡ ಭೇದ ೩. ಜಡ-ಜಡ ಭೇದ ೪. ಜೀವ-ಪರಮಾತ್ಮ ಭೇದ ೫ ಜಡ-ಪರಮಾತ್ಮ ಭೇದ ಎಂಬ ಪಂಚಭೇದಗಳನ್ನು ಪ್ರತಿಪಾದಿಸಿದ್ದಾರೆ

ಜೀವ-ಪರಮಾತ್ಮರ ಭೇದವು ಜೀವರು ಮುಕ್ತರಾದಮೇಲೆಯೂ ಮುಂದುವರೆಯುತ್ತದೆ ಎಂಬುದನ್ನು ಅನೇಕ ಶ್ರುತಿವಚನಗಳನ್ನು ಉದಾಹರಿಸಿ ವಿವರಿಸಿದ್ದಾರೆ

(i) ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ
(ii) ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ
(iii) ನಿರಂಜನಃ ಪರಮಂ ಸಾಮ್ಯಮುಪೈತಿ
(iv) ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ |

ಇತ್ಯಾದಿ ಶ್ರುತಿಗಳು ಮುಕ್ತಜೀವರ ಮತ್ತು ಪರಮಾತ್ಮನ ಭೇದವನ್ನೇ ಸ್ಪಷ್ಟವಾಗಿ ಪ್ರತಿಪಾದಿಸುವವು ಎಂದು ತೋರಿಸಿದ್ದಾರೆ.

**'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಶ್ರುತಿಗಳು ಅಭೇದವನ್ನು ಹೇಳುವದಿಲ್ಲ.**

'ತತ್ ತ್ವಮಸಿ' ಎಂಬ ಶ್ರುತಿಯು ಜೀವನು ಪರಮಾತ್ಮನಿಗೆ ಅಧೀನ, ಅವನಿಂದ ಭಿನ್ನ ಎಂದು ಹೇಳುತ್ತದೆ. ನಾನು ಸರ್ವಜ್ಞನಾಗಿದ್ದೇನೆ ಎಂಬ ಅಹಂಕಾರವನ್ನು ತಾಳಿದ ಶ್ವೇತಕೇತುವಿಗೆ 'ನೀನೇ ಬ್ರಹ್ಮ' ಎಂದು ಹೇಳಿದರೆ ಅವನ ಅಹಂಕಾರ ಇಳಿಯಲಾರದು. ಆದ್ದರಿಂದ ಅಭೇದಪರವಾದ ಅರ್ಥವು ಪ್ರಕೃತ ಸಂದರ್ಭಕ್ಕೆ ಹೊಂದುವದಿಲ್ಲ. ಮೃತ್ಪಿಂಡ, ಲೋಹಮಣಿ, ನಖನಿಕೃಂತನ

ದೃಷ್ಟಾಂತಗಳೂ ಅಭೇದವನ್ನು ಹೇಳುವದಿಲ್ಲ ಸದೃಶವಾದ ವಸ್ತುಗಳಲ್ಲಿ ಒಂದನ್ನು ತಿಳಿದುಕೊಂಡರೆ ಇನ್ನುಳಿದವು ತಿಳಿಯುವವು ಎಂದು ಹೇಳುವವು ಪ್ರಧಾನವಾದದ್ದರ ಜ್ಞಾನ ಮಾಡಿಕೊಂಡರೆ ಅಪ್ರಧಾನವಾದವುಗಳ ಜ್ಞಾನವು ಗತಾರ್ಥವಾಗುವದು ಎಂದು ಹೇಳುವವು. ಪರಮಾತ್ಮನು ಪ್ರಧಾನ, ಉಳಿದವು ಅಪ್ರಧಾನ, ಆದ್ದರಿಂದ ಪರಮಾತ್ಮನ ಜ್ಞಾನದಿಂದ ಉಳಿದವುಗಳ ಜ್ಞಾನ ಗತಾರ್ಥ ಎಂದು ಹೇಳುವದೇ 'ಏಕವಿಜ್ಞಾನದಿಂದ ಸರ್ವವಿಜ್ಞಾನ' ಎಂದು ಹೇಳಿದ್ದರ ಅಭಿಪ್ರಾಯ.

'ತತ್ತ್ವಮಸಿ' ಎಂಬ ವಾಕ್ಯದ ಸಂದರ್ಭದಲ್ಲಿ ಹೇಳಿದ ಒಂಬತ್ತೂ ದೃಷ್ಟಾಂತಗಳೂ ಭೇದವನ್ನೇ ಪ್ರತಿಪಾದಿಸುವವು ೧ ಪಕ್ಷಿ ಮತ್ತು ಅದನ್ನು ಕಟ್ಟಿದ ದಾರ ೨ ನದಿಗಳು ಮತ್ತು ಸಮುದ್ರ ೩ ನಾನಾ ವೃಕ್ಷಗಳ ಪುಷ್ಪರಸಗಳು ೪. ವೃಕ್ಷ-ವೃಕ್ಷಜೀವ ೫. ಬೀಜ ಮತ್ತು ಅದರಲ್ಲಿಯ ಸೂಕ್ಷ್ಮಕಣ ೬ ನೀರು ಮತ್ತು ಉಪ್ಪು ೭ ಗಾಂಧಾರದೇಶ ಮತ್ತು ಅಲ್ಲಿಂದ ಬಂದ ವ್ಯಕ್ತಿ ೮. ಮರಣ-ಶಯ್ಯೆಯಲ್ಲಿರುವವ ಮತ್ತು ಇಂದ್ರಿಯನಿಯಾಮಕರು ೯ ಕಳ್ಳತನ ಮಾಡಿದವ ಮತ್ತು ಕದ್ದ ವಸ್ತು ಇವುಗಳಲ್ಲಿ ಐಕ್ಯವನ್ನು ಹೇಳಲು ಅವಕಾಶವೇ ಇಲ್ಲ. ಆದ್ದರಿಂದ ಇಲ್ಲಿಯ ಒಂಬತ್ತೂ ದೃಷ್ಟಾಂತಗಳೂ ಜೀವ-ಪರಮಾತ್ಮರ ಭೇದವನ್ನು ತಿಳಿಸುವದಕ್ಕಾಗಿಯೇ ಹೇಳಿದ ದೃಷ್ಟಾಂತಗಳಾಗಿವೆ ಹೀಗೆ 'ತತ್ತ್ವಮಸಿ' ಉಪದೇಶದ ಸಂದರ್ಭ, ಏಕವಿಜ್ಞಾನದಿಂದ ಸರ್ವವಿಜ್ಞಾನದ ನಿರೂಪಣೆ, ಒಂಬತ್ತು ದೃಷ್ಟಾಂತಗಳು ಇವೆಲ್ಲ ಜೀವ-ಪರಮಾತ್ಮರ ಭೇದಪರವಾಗಿಯೇ 'ತತ್ತ್ವಮಸಿ' ಎಂಬ ವಾಕ್ಯದ ಅರ್ಥಮಾಡುವದಕ್ಕೇ ಅನುಕೂಲವಾಗಿವೆ 'ತತ್' ಎಂಬುದಕ್ಕೆ ತದಧೀನ, ಮತ್ತು ತತ್ಸದೃಶ ಎಂದು ಅರ್ಥಮಾಡಿ ನೀನು ಪರಮಾತ್ಮನಿಗೆ ಅಧೀನನಾಗಿರುವಿ ಜ್ಞಾನ ಆನಂದಾದಿ ಗುಣಗಳಲ್ಲಿ ಪರಮಾತ್ಮನಿಗೆ ಕಿಂಚಿತ್ ಸದೃಶನಾಗಿರುವಿ ಎಂದು ಉಪನಿಷತ್ತು ಉಪದೇಶ ಮಾಡುತ್ತದೆ. 'ಅತತ್ ತ್ವಮಸಿ' ಎಂದು ಪದಚ್ಛೇದ ಮಾಡಿದರೆ ಭೇದವನ್ನೇ ಸ್ಪಷ್ಟವಾಗಿ ಹೇಳುತ್ತದೆ ಎಂದೂ ಕಂಡುಬರುತ್ತದೆ.

'ಅಹಂ ಬ್ರಹ್ಮಾಸ್ಮಿ' 'ಸೋಽಹಮಸ್ಮಿ' ಇತ್ಯಾದಿ ಶ್ರುತಿಗಳಲ್ಲಿಯ 'ಅಹಮ್' ಶಬ್ದಕ್ಕೆ 'ಅಂತರ್ಯಾಮಿ' ಎಂದು ಅರ್ಥ. ಬ್ರಹ್ಮ ಅಂದರೆ ಗುಣಪೂರ್ಣನಾದ ಬ್ರಹ್ಮನು 'ಅಹಮ್' ಜೀವರಲ್ಲಿ ಅಂತರ್ಯಾಮಿಯಾಗಿದ್ದಾನೆ ಎಂದು ಅಭಿಪ್ರಾಯವು 'ಅಹಮ್' ಎಂಬುದಕ್ಕೆ 'ಅಹೇಯ' ಅಂದರೆ ಬಿಟ್ಟಿರಲು ಬರದಂಥವ ಎಂದೂ ಅರ್ಥವಿದೆ. ಯಾರೂ ಎಂದಿಗೂ ಪರಮಾತ್ಮನನ್ನು ಬಿಟ್ಟು ಇರುವದು ಸಾಧ್ಯವಿಲ್ಲ ಎಂಬುದು ಈ ಪದದ ಅರ್ಥವು. ಆದ್ದರಿಂದ 'ಅಹಂ ಬ್ರಹ್ಮಾಸ್ಮಿ' ಎಂಬುದೂ ಜೀವಬ್ರಹ್ಮರ ಐಕ್ಯವನ್ನು ಹೇಳುವದಿಲ್ಲ.

'ಪರೇ ಅವ್ಯಯೇ ಸರ್ವೇ ಏಕೀಭವಂತಿ' ಎಂಬ ವಾಕ್ಯವು ಮುಕ್ತರಾದ ಜೀವರು ಪರಮಾತ್ಮನೊಡನೆ ಸ್ಥಾನೈಕ್ಯ ಮತ್ತು ಮತ್ಯೈಕ್ಯವನ್ನು ಪಡೆಯುವರು ಎಂದು ಹೇಳುವದು. ಸ್ವರೂಪೈಕ್ಯವನ್ನು ಪಡೆಯುವರೆಂದು ಹೇಳುವದಿಲ್ಲ.

'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂಬ ವಾಕ್ಯವು 'ಬ್ರಹ್ಮಜ್ಞಾನಿಯು ತನ್ನ ಗುಣಗಳ ಮಹತಿಯನ್ನು ಪಡೆಯುವನು' ಎಂದು ಹೇಳುವದು ಬ್ರಹ್ಮೈಕ್ಯ ವನ್ನು ಹೇಳುವದಿಲ್ಲ.

'ಪ್ರಪಂಚೋ ಯದಿ ವಿದ್ಯೇತ' ಎಂಬ ಕಾರಿಕೆಯು ಪಂಚಭೇದಗಳ ನಿತ್ಯತ್ವ, ಸತ್ಯತ್ವಗಳನ್ನು ಹೇಳುವದು ಜಗತ್ತಿನ ಮಿಥ್ಯಾತ್ವವನ್ನು ಹೇಳುವದಿಲ್ಲ. ಇಲ್ಲಿಯು 'ಪ್ರಪಂಚ' ಶಬ್ದಕ್ಕೆ ಪಂಚಭೇದಗಳು ಎಂದು ಅರ್ಥವು. ಜಗತ್ತು ಎಂದು ಅರ್ಥವಲ್ಲ

'ನ ತು ತದ್ ದ್ವಿತೀಯಮಸ್ತಿ' ಎಂಬ ವಾಕ್ಯವು ಪರಮಾತ್ಮನ ನಾನಾರೂಪ ಗಳಲ್ಲಿ ಭೇದವಿಲ್ಲವೆಂದು ಹೇಳುವದು 'ನೇಹ ನಾನಾಸ್ತಿ' ಎಂಬ ವಾಕ್ಯವು ಪರಮಾತ್ಮ ರೂಪ ಮತ್ತು ಗುಣಕ್ರಿಯಾದಿಗಳಿಗೆ ಭೇದವಿಲ್ಲವೆಂದು ಹೇಳುವದು ಅವನ ಅವಯವ ಅವಯವಿಗಳಲ್ಲಿ ಭೇದವಿಲ್ಲವೆಂದು ಹೇಳುವರು.

'ನ ಪ್ರೇತ್ಯ ಸಂಜ್ಞಾ ಅಸ್ತಿ' ಎಂಬ ವಾಕ್ಯವು ಮತ್ತು 'ಯತ್ರ ತು ಅಸ್ಯ ಸರ್ವಮಾತ್ಮೈವ ಅಭೂತ್' ಎಂಬ ವಾಕ್ಯವು ಮುಕ್ತರಾದಮೇಲೆ ನಿರ್ವಿಶೇಷ ಚಿನ್ಮಾತ್ರಸ್ವರೂಪವು ಮಾತ್ರ ಉಳಿಯುವದು ಎಂದು ಹೇಳುವದಿಲ್ಲ ಆದರೆ ಮುಕ್ತರಿಗೆ ವೃತ್ತಿಜ್ಞಾನವಿಲ್ಲ ಎಂದು ಹೇಳುವದು ಮುಕ್ತರಿಗೆ ಯಾವ ಜ್ಞಾನವೂ ಇಲ್ಲ ಎಂದು ಹೇಳಿದರೆ ಉಂಟಾಗುವ ತೊಡಕುಗಳನ್ನು ಹೇಳುವದು.

ಹೀಗೆ ಆಪಾತತಃ ಅದ್ವೈತಪರವೆಂದು ತೋರುವ ಎಲ್ಲ ಪ್ರಮುಖ ವಾಕ್ಯ ಗಳನ್ನೂ ಉದಾಹರಿಸಿ ಅವು ಅದ್ವೈತಪರವಲ್ಲ ಎಂಬುದನ್ನು ತೋರಿಸಿ ಅವುಗಳ ಸರಿಯಾದ ಅರ್ಥವನ್ನು ವಿಷ್ಣುತತ್ವನಿರ್ಣಯದಲ್ಲಿ ವಿವರಿಸಲಾಗಿದೆ. ಈ ಗ್ರಂಥದ ಬಹುಭಾಗವು ಭೇದದ ಸಮರ್ಥನೆ ಮತ್ತು ಅಭೇದಶ್ರುತಿಗಳ ಅರ್ಥವಿವರಣೆಗೇ ಮೀಸಲಾಗಿದೆ.

**ಜಗತ್ತು ಸತ್ಯ**

ಜಗತ್ತು ಮಿಥ್ಯಾ ಎಂಬ ಅದ್ವೈತಿಗಳ ವಾದವನ್ನು ನಿರಾಕರಿಸಿ ಜಗತ್ತು ಸತ್ಯ ಎಂಬ ಸಿದ್ಧಾಂತವನ್ನು ಅನೇಕ ಶ್ರುತಿವಚನಗಳನ್ನು ಉದಾಹರಿಸಿ ದೃಢಪಡಿಸಲಾಗಿದೆ.

೧. ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋ ಅರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ
೨. ಯಚ್ಚಿಕೇತ ಸತ್ಯಮಿತ್ ತನ್ನ ಮೋಘಮ್
೩. ವಿಶ್ವಂ ಸತ್ಯಂ ಮಘವಾನಾ
೪. ಅನಾದ್ಯನಂತಂ ಜಗದೇತದೀದೃಕ್ ಪ್ರವರ್ತತೇ

ಇತ್ಯಾದಿ ಅನೇಕ ಶ್ರುತಿಗಳು ಜಗತ್ತಿನ ಸತ್ಯತ್ವವನ್ನು ಸಾರುತ್ತವೆ.

## ವಿಷ್ಣುಸರ್ವೋತ್ತಮತ್ವ

ಈ ಗ್ರಂಥದ ಮುಖ್ಯವಿಷಯವು ವಿಷ್ಣುಸರ್ವೋತ್ತಮತ್ವ ಪ್ರತಿಪಾದನೆ ಮಾಡುವದು. ಇನ್ನಿತರ ವಿಷಯಗಳು ಇದರ ಪ್ರತಿಪಾದನೆಗೆ ಪೋಷಕವಾಗಿ ನಿರೂಪಿತವಾಗಿರುವವು. ಆದ್ದರಿಂದ ಎಲ್ಲ ಶ್ರುತಿಸ್ಮೃತಿವಚನಗಳೂ ವಿಷ್ಣುವಿನ ಸರ್ವೋತ್ತಮತ್ವವನ್ನೇ ಪ್ರತಿಪಾದಿಸುವವು ಎಂದು ಸಾರಿ ಶ್ರೀ ಮಧ್ವಾಚಾರ್ಯರು ಅನೇಕ ಶ್ರುತಿಸ್ಮೃತಿವಚನಗಳನ್ನು ಉದಾಹರಿಸಿರುವರು.

೧ ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ |
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋऽಕ್ಷರ ಉಚ್ಯತೇ
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ (ಗೀತಾ)

೨ ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ
ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ | (ಪೈಂಗೀಶ್ರುತಿ)

೩. ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ |
ಲಕ್ಷ್ಮೀರಕ್ಷರದೇಹತ್ವಾದಕ್ಷರಾ ತತ್ಪರೋ ಹರಿಃ ||

೪. ನಾಮಾನಿ ಸರ್ವಾಣಿ ಯಮಾವಿಶಂತಿ
ತಂ ವೈ ವಿಷ್ಣುಂ ಪರಮಮುದಾಹರಂತಿ

೫ ಉತ್ಪತ್ತಿ ಸ್ಥಿತಿ ಸಂಹಾರಾಃ ನಿಯತಿಃ ಜ್ಞಾನಮಾವೃತಿಃ |
ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ ಸ ಹರಿರೇಕರಾಟ್ ||

೬ ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ |
ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ||

೭. ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ |
ಅತೋ ಮಿಥೋಪಿ ಭೇದೋ ನ ತೇಷಾಂ ಕಶ್ಚಿತ್ ಕದಾಚನ |

೮. ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ
ನ ಬಹುನಾ ಶ್ರುತೇನ |
ಯಮೈವೇಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ |

ಈ ಶ್ರುತಿಸ್ಮೃತಿವಚನಗಳಿಂದ

(1) ವಿಷ್ಣುವು ಕ್ಷರ ಅಂದರೆ ಜೀವ ಜಡಗಳು ಅಕ್ಷರ ಅಂದರೆ ಲಕ್ಷ್ಮೀ ಇವರಿಗಿಂತ ಉತ್ತಮನು ಸ್ವತಂತ್ರನು ಅನಂತಗುಣಪರಿಪೂರ್ಣನು ಸರ್ವಥಾ ದೋಷ-ರಹಿತನು.

(ii) ಸರ್ವಶಬ್ದವಾಚ್ಯನು, ಸರ್ವವೇದ ಪ್ರತಿಪಾದ್ಯನು, ಸರ್ವದೇವತಾನಾಮಗಳೂ ಅವನ ನಾಮಗಳು, ಸರ್ವದೇವತೆಗಳೂ ಅವನ ಪರಿವಾರದೇವತೆಗಳು

(iii) ಅವನು ಸೃಷ್ಟ್ಯಾದ್ಯಷ್ಟಕರ್ತನು ಅಂದರೆ ಸೃಷ್ಟಿ ಸ್ಥಿತಿ ಸಂಹಾರ ನಿಯಮನ ಜ್ಞಾನ ಕೊಡುವದು ಅಜ್ಞಾನ ಕೊಡುವದು ಸಂಸಾರ ಬಂಧನವನ್ನು ಕೊಡುವದು ಮೋಕ್ಷವನ್ನು ಕೊಡುವದು ಈ ಎಂಟರ ಕರ್ತನು ಈ ಎಂಟು ಹೇಳಿದ್ದು ಉಪಲಕ್ಷಣ—ಅವನು ಎಲ್ಲದಕ್ಕೂ ಕರ್ತನು

(iv) ಅವನ ಪ್ರಸಾದದಿಂದಲೇ ಅವನ ಅಪರೋಕ್ಷಜ್ಞಾನ ಮತ್ತು ಮುಕ್ತಿಗಳು ದೊರೆಯುವವು

ಎಂದು ವಿಷ್ಣುವಿನ ಸ್ವರೂಪ ಮತ್ತು ಮಹಿಮೆಗಳು ತಿಳಿದುಬರುವವು ಈ ಎಲ್ಲ ಅಂಶಗಳನ್ನು ವಿಷ್ಣುತತ್ವವಿನಿರ್ಣಯದಲ್ಲಿ ವಿವರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಅನೇಕ ಪ್ರಮಾಣವಚನಗಳನ್ನು ಕೊಟ್ಟು ವಿವರಿಸಲಾಗಿದೆ ಮೂರನೆಯ ಅಧ್ಯಾಯದಲ್ಲಿ ವಿಷ್ಣುವಿನ ನಿರ್ದೋಷತ್ವವನ್ನು ಪ್ರತಿಪಾದಿಸಲಾಗಿದೆ

ವಿಷ್ಣುವು ಸ್ವತಂತ್ರ, ಅನಂತಗುಣಪರಿಪೂರ್ಣ, ನಿರ್ದೋಷ, ಸರ್ವೋತ್ತಮ ಎಂಬ ನಾಲ್ಕು ಮುಖ್ಯವಾದ ಅಂಶಗಳನ್ನು ಈ ಗ್ರಂಥದಲ್ಲಿ ಪ್ರತಿಪಾದಿಸಲಾಗಿದೆ ಇವುಗಳ ಜ್ಞಾನದಿಂದ ಆತ್ಮೋದ್ಧಾರವನ್ನು ಪಡೆಯಬೇಕು ಎಂದು ಹೇಳಲಾಗಿದೆ

ವಿಷ್ಣುಂ ಸರ್ವಗುಣೈಃ ಪೂರ್ಣಂ ಜ್ಞಾತ್ವಾ ಸಂಸಾರವರ್ಜಿತಃ |
ನಿರ್ದುಃಖಾನಂದಭುಕ್ ನಿತ್ಯಂ ತತ್ಸಮೀಪೇ ಸ ಮೋದತೇ ||



|| ಶ್ರೀ ವೇದವ್ಯಾಸಾಯ ನಮಃ ||

ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯವಿರಚಿತಃ

# ಶ್ರೀ ವಿಷ್ಣುತತ್ತ್ವವಿನಿರ್ಣಯಃ

ಮಂಗಲಶ್ಲೋಕ

1 ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಮ್ ।
ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಮ್ ॥

2. ವಿಶೇಷಣಾನಿ ಯಾನೀಹ ಕಥಿತಾನಿ ಸದುಕ್ತಿಭಿಃ ।
ಸಾಧಯಿಷ್ಯಾಮಿ ತಾನ್ಯೇವ ಕ್ರಮಾತ್ ಸಜ್ಜನಸಂವಿದೇ ॥

ಪರಮಾತ್ಮಾ ಸದಾಗಮೈಕ ವಿಜ್ಞೇಯಃ

3 ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ ।
ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್ ॥
ಯೇ ಚಾನುಯಾಯಿನಸ್ತ್ವೇಷಾಂ ಸರ್ವೇ ತೇ ಚ ಸದಾಗಮಾಃ ।
ದುರಾಗಮಾಃ ತದನ್ಯೇ ಯೇ ತೈರ್ನ ಜ್ಞೇಯೋ ಜನಾರ್ದನಃ ॥
ಜ್ಞೇಯ ಏತೈಃ ಸದಾ ಯುಕ್ತೈಃ ಭಕ್ತಿಮದ್ಭಿಃ ಸುನಿಶ್ಚಿತೈಃ ।
ನ ಚ ಕೇವಲತರ್ಕೇಣ ನಾಕ್ಷಜೇನ ನ ಕೇನಚಿತ್ ॥
ಕೇವಲಾಗಮವಿಜ್ಞೇಯೋ ಭಕ್ತೈರೇವ ನ ಚಾನ್ಯಥಾ ॥
ಇತಿ ಬ್ರಹ್ಮಾಂಡೇ ॥

4. ನಾವೇದವಿನ್ಮನುತೇ ತಂ ಬೃಹಂತಂ ಸರ್ವಾನುಭೂಮಾತ್ಮಾನಂ
ಸಾಂಪರಾಯೇ—ಇತಿ ತೈತ್ತಿರೀಯಶ್ರುತಿಃ ।
ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾ ಅನ್ಯೇನೈವ
ಸುಜ್ಞಾನಾಯ ಪ್ರೇಷ್ಠ—ಇತಿ ಕಾಠಕಶ್ರುತಿಃ ।
ನೇಂದ್ರಿಯಾಣಿ ನಾನುಮಾನಂ ವೇದಾ ಹಿ ಏವ ಏನಂ ವೇದಯಂತಿ
ತಸ್ಮಾದಾಹುಃ ವೇದಾಃ ಇತಿ ಪಿಪ್ಪಲಾದಶ್ರುತಿಃ ।

ವೇದಾಃ ಅಪೌರುಷೇಯಾಃ

5. ನ ಚ ಏತೇಷಾಂ ವಚನಾನಾಮೇವ ಅಪ್ರಾಮಾಣ್ಯಮ್ । ಅಪೌರುಷೇಯತ್ವಾದ್ ವೇದಸ್ಯ । ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಇತಿ ತದ್ಗೃಹೀತತ್ವಾಚ್ಚ ।

6. ನ ಚ ಅಪೌರುಷೇಯಂ ವಾಕ್ಯಮೇವ ನಾಸ್ತೀತಿ ವಾಚ್ಯಮ್ । ತದಭಾವೇ ಸರ್ವಸಮಯಾಭಿಮತಧರ್ಮಾದ್ಯಸಿದ್ಧೇಃ । ಯಸ್ಯ ತೌ ನ ಅಭಿಮತೌ ನ ಅಸೌ ಸಮಯೀ ಸಮಯಪ್ರಯೋಜನಾಭಾವಾತ್ । ನ ಚ ತೇನ ಲೋಕೋಪಕಾರಃ । ಧರ್ಮಾದ್ಯಭಾವಜ್ಞಾನೇ ಪರಸ್ಪರಹಿಂಸಾದಿನಾ ಅಪಕಾರಸ್ಯೈವ ಪ್ರಾಪ್ತೇಃ । ನ ಚ ಉಪಕಾರೇಣ ತಸ್ಯ ಪ್ರಯೋಜನಮ್ । ಅದೃಷ್ಟಾಭಾವಾತ್ । ಅತೋ ಧರ್ಮಾದ್ಯಭಾವಂ ವದತಾ ಸ್ವಸಮಯಸ್ಯಾ-ನರ್ಥಕ್ಯಮಂಗೀಕೃತಮೇವೇತಿ ನಾಸೌ ಸಮಯೀ ।

7. ನ ಚ ಪೌರುಷೇಯೇಣ ವಾಕ್ಯೇನ ತತ್ಸಿದ್ಧಿಃ । ಅಜ್ಞಾನ-ವಿಪ್ರಲಂಭಯೋಃ ಪ್ರಾಪ್ತೇಃ । ನ ಚ ತದರ್ಥತ್ವೇನ ಸರ್ವಜ್ಞಃ ಕಲ್ಪ್ಯೇತ । ಅನ್ಯತ್ರ ಅದೃಷ್ಟಸ್ಯ ಸರ್ವಜ್ಞತ್ವಸ್ಯ ಕಲ್ಪನಂ ತಸ್ಯ ಅವಿಪ್ರಲಂಭಕತ್ವಕಲ್ಪನಂ ತಸ್ಯ ತತ್ಕೃತತ್ವಕಲ್ಪನಂ ಚೇತಿ ಕಲ್ಪನಾಗೌರವಪ್ರಾಪ್ತೇಃ । ಅಪೌರುಷೇಯ-ವಾಕ್ಯಾಂಗೀಕಾರೇ ನ ಕಿಂಚಿತ್ ಕಲ್ಪ್ಯಮ್ ।

8. ಅಪೌರುಷೇಯತ್ವಂ ಚ ಸ್ವತ ಏವ ಸಿದ್ಧಮ್ । ವೇದಕರ್ತುಃ ಅಪ್ರಸಿದ್ಧೇಃ । ಅಪ್ರಸಿದ್ಧೌ ಚ ಕರ್ತುಃ ತತ್ಕಲ್ಪನೇ ಕಲ್ಪನಾಗೌರವಮ್ । ಅಕಲ್ಪನೇ ಚ ಅಕರ್ತೃತ್ವಂ ಸಿದ್ಧಮೇವ । ನ ಚ ಲೌಕಿಕವಾಕ್ಯವತ್ ಸಕರ್ತೃಕತ್ವಮ್ । ತಸ್ಯ ಅಕರ್ತೃಕತ್ವಪ್ರಸಿದ್ಧ್ಯಭಾವಾತ್ । ನ ಚ ಕೇನಚಿತ್ ಕೃತ್ವಾ ವೇದ ಇತ್ಯುಕ್ತಂ ವೇದಸಮಂ ಪರಂಪರಾಭಾವಾತ್ । ನ ಚ ಸ್ವಯಂ ಪ್ರತಿಭಾತವೇದೈಃ ದೃಷ್ಟಮವೇದವಾಕ್ಯಂ ಭವತಿ ಪರಂಪರಾಸಿದ್ಧವೇದ ವಾಕ್ಯಾ-ನುಸಾರಿತ್ವಾತ್ । ವೇದದ್ರಷ್ಟೄಣಾಮುಕ್ತಗುಣವತ್ತ್ವಾಚ್ಚ ತೇಷಾಮ್ । ಉಕ್ತಂ ಚ ಬ್ರಹ್ಮಾಂಡೇ—

ವಿಂಶಲ್ಲಕ್ಷಣಶೋಽನೂನಃ ತಪಸ್ವೀ ಬಹುವೇದವಿತ್ ॥
ವೇದ ಇತ್ಯೇವ ಯಂ ಪಶ್ಯೇತ್ ಸ ವೇದೋ ಜ್ಞಾನದರ್ಶನಾತ್ ॥ ಇತಿ ॥

ಪ್ರಾಮಾಣ್ಯಂ ಸ್ವತಃ ಏವ

**9.** ಪ್ರಾಮಾಣ್ಯಂ ಚ ಸ್ವತ ಏವ ಅನ್ಯಥಾ ಅನವಸ್ಥಾನಾತ್ । ನ ಚ ಉಕ್ತ್ಯಯುಕ್ತ್ಯಧೀನತ್ವಂ ಪ್ರಾಮಾಣ್ಯಸ್ಯ । ಬುದ್ಧಿದೋಷನಿರಾಸಮಾತ್ರ-ಕಾರಣತ್ವಾತ್ ಯುಕ್ತೀನಾಮ್ । ಅದುಷ್ಟಬುದ್ಧೀನಾಂ ಸ್ವತ ಏವ ಸಿದ್ಧತ್ವಾಚ್ಚ ಪ್ರಾಮಾಣ್ಯಸ್ಯ । ನ ಚ ಆಕಾಂಕ್ಷಾಯಾಮೇವ ಪ್ರಮಾಣಾಂತರಾಪೇಕ್ಷತ್ವಾತ್ ಅನವಸ್ಥಾಭಾವ ಇತಿ ವಾಚ್ಯಮ್ । ಆಕಾಂಕ್ಷಾಯಾ ಏವ ಬುದ್ಧಿ-ದೋಷಾತ್ಮಕತ್ವಾತ್ ।

ದುಷ್ಟಬುದ್ಧೀನಾಮೇವ ಅಪ್ರಾಮಾಣ್ಯಶಂಕೇತಿ ಪರತಃ ಅಪ್ರಾಮಾಣ್ಯಮ್ । ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಮ್ ।

ವರ್ಣಾಃ ನಿತ್ಯಾಃ

**10.** ನ ಚ ಉಚ್ಚಾರಣಕಾಲೇ ಏವ ವರ್ಣಾನಾಮುತ್ಪತ್ತಿರಿತಿ ವಾಚ್ಯಮ್ । ತದೇವೇದಂ ವಚನಮಿತಿ ಪ್ರತ್ಯಭಿಜ್ಞಾವಿರೋಧಾತ್ । ನ ಚ ಸಾದೃಶ್ಯಾತ್ ಪ್ರತ್ಯಭಿಜ್ಞಾ ಭ್ರಾಂತಿರಿತಿ ವಾಚ್ಯಮ್ । ಸೋಽಯಂ ದೇವದತ್ತಃ ಇತ್ಯಾದೇರಪಿ ತಥಾತ್ವಪ್ರಾಪ್ತೇಃ ।

ಸರ್ವಕ್ಷಣಿಕತ್ವಂ ವದತಾ ಬೌದ್ಧೇನ ಸೇಯಂ ದಿಗಿತ್ಯಾದಿ ಪ್ರತ್ಯಭಿಜ್ಞಾಯಾ ಭ್ರಾಂತಿತ್ವಂ ನ ವಾಚ್ಯಂ ಪಂಚಸ್ಕಂಧೇಭ್ಯಃ ಅನ್ಯತ್ವಾತ್ ।

ನ ಚ ದಿಶ ಏವ ಭ್ರಾಂತಿಕಲ್ಪಿತಾಃ ವಿಜ್ಞಾನಶೂನ್ಯಯೋರಪಿ ಸಾಮ್ಯಾತ್ । ನ ಚ ಆದಿತ್ಯೋದಯಾದಿನೈವ ದಿಕ್ಕಲ್ಪನಾ ಅಂಧಕಾರೇಽಪಿ ದಿಙ್ಮಾತ್ರಪ್ರತೀತೇಃ । ಕಾದಾಚಿತ್ಕಭ್ರಾಂತಿರೇವಾದಿತ್ಯೋದಯಾದಿದರ್ಶನಾನ್ನಿವಾರ್ಯತೇ । ಸಾ ಚ ವಿಜ್ಞಾನಶೂನ್ಯಯೋರಪಿ ಭವತೀತಿ ತೇಷಾಂ ಮತಂ ವಾದಿವಿಪ್ರತಿಪತ್ತೇಃ । ಅತಃ ದಿಶಃ ಸ್ಥಿರಾ ಏವೇತಿ ಸಿದ್ಧ್ಯತಿ ಶೂನ್ಯವದೇವ ।

ಅತಃ ವೇದಸ್ಯಾಪಿ ಸ್ಥೈರ್ಯಂ ಸಿದ್ಧಂ ತದೇವೇದಂ ವಾಕ್ಯಮಿತಿ ಪ್ರತ್ಯಭಿ-ಜ್ಞಾನಾತ್ ।

**11.** ನ ಚ ಅನುಮಾನಾದೀನಾಂ ಆಗಮಂ ವಿನಾ ಪ್ರಾಮಾಣ್ಯಂ ಧರ್ಮಾದಿಷು ತದಗೋಚರತ್ವಾತ್ । ಅತಃ ಅಪೌರುಷೇಯವಾಕ್ಯೇನೈವ ಧರ್ಮಾದಿಸಿದ್ಧೇಃ ಸರ್ವವಾದಿನಾಮಪಿ ತದಂಗೀಕಾರ್ಯಮ್। ತತ್ ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಮ್ ।

ಅಪ್ರಾಮಾಣ್ಯಂ ಪರತಃ

ಅಪ್ರಾಮಾಣ್ಯಸ್ಯ ಪರತಸ್ತ್ವಾನಂಗೀಕಾರೇ ದುಷ್ಟೇಂದ್ರಿಯಾದೇರಪಿ ಅಪ್ರಾಮಾಣ್ಯಹೇತುತ್ವಂ ನ ಸ್ಯಾತ್ । ತದಂಗೀಕಾರೇ ಚ ಅನುಭವವಿರೋಧಃ । ಅತಃ ಪ್ರಾಮಾಣ್ಯಂ ಸ್ವತಃ ಪರತಃ ಅಪ್ರಾಮಾಣ್ಯಮಿತಿ ಸಿದ್ಧಮ್ ।

ವೇದಾಃ ನಿತ್ಯಾಃ

12. ವಾಚಾ ವಿರೂಪನಿತ್ಯಯಾ ।
ನಿತ್ಯಯಾ ಅನಿತ್ಯಯಾ ಸ್ತೌಮಿ ಬ್ರಹ್ಮ ತತ್ಪರಮಂ ಪದಮಿತಿ ।
ಶ್ರುತಿರ್ವಾವ ನಿತ್ಯಾ ಅನಿತ್ಯಾ ವಾವ ಸ್ಮೃತಯಃ ಯಾಶ್ಚಾನ್ಯಾ
ವಾಚಃ । ಇತಿ ಸ್ಟೈಂಗಿಶ್ರುತಿಃ

ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ ।
ಅನಾದಿನಿತ್ಯಾ ಸಾ ತಚ್ಚ ವಿನಾ ತಂ ನ ಸ ಗಮ್ಯತೇ ॥
ಇತಿ ಕಾತ್ಯಾಯನಶ್ರುತಿಃ

ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ ಬ್ರಹ್ಮ
ವಿಷ್ಠಿತಂ ತಾವತೀ ವಾಕ್ ।

ಕಃ ಛಂದಸಾಂ ಯೋಗಮಾವೇದ ಧೀರಃ ಕೋ ಧಿಷ್ಣ್ಯಾಂ
ಪ್ರತಿ ವಾಚಂ ಪಪಾದ । —ಇತ್ಯಾದಿ ಚ

13. ನಿತ್ಯಾ ವೇದಾ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ ।
ಸರ್ಗೇ ಸರ್ಗೇಽಮುನೈವೈತೇ ಉದ್ಗೀರ್ಯಂತೇ ತಥೈವ ಚ ॥
ತತ್ಕ್ರಮೇಣೈವ ತೈರ್ವರ್ಣೈಃ ತೈಃ ಸ್ವರೈರೇವ ನಾನ್ಯಥಾ ।
ಅತಃ ಶ್ರುತಿತ್ವಮೇತಾಸಾಂ ಶ್ರುತಾ ಏವ ಯತೋಽಖಿಲೈಃ ॥
ಜನ್ಮಾಂತರೇ ಶ್ರುತಾಃ ತಾಸ್ತು ವಾಸುದೇವಪ್ರಸಾದತಃ ।
ಮುನೀನಾಂ ಪ್ರತಿಭಾಸ್ಯಂತಿ ಭಾಗೇನೈವ ನ ಸರ್ವತಃ ॥
ಯತಃ ತಾಃ ಹರಿಣಾ ದೃಷ್ಟಾಃ ಶ್ರುತಾ ಏವಾಪರೈಃ ಜನೈಃ ।
ಶ್ರುತಯೋ ದೃಷ್ಟಯಶ್ಚೇತಿ ತೇನೋಚ್ಯಂತೇ ಪುರಾತನೈಃ ॥
ತದುತ್ಪತ್ತಿವಚಶ್ಚೈವ ಭವೇದ್ವ್ಯಕ್ತಿಮಪೇಕ್ಷ್ಯ ತು ।
ಚೇತನಸ್ಯ ಜನಿಃ ಯದ್ವದುಚ್ಯತೇ ಸರ್ವಲೌಕಿಕೈಃ ॥
ಪುರಾಣಾನಿ ತದರ್ಥಾನಿ ಸರ್ಗೇ ಸರ್ಗೇ ಅನ್ಯಥೈವ ತು ॥

ಕ್ರಿಯಂತೇऽತಸ್ತ್ವನಿತ್ಯಾನಿ ತದರ್ಥಾಃ ಪೂರ್ವಸರ್ಗವತ್ ।
ವೇದಾನಾಂ ಸೃಷ್ಟಿವಾಕ್ಯಾನಿ ಭವೇಯುಃ ವ್ಯಕ್ತ್ಯಪೇಕ್ಷಯಾ ॥
ಅವಾಂತರಾಭಿಮಾನಾನಾಂ ದೇವಾನಾಂ ವಾ ವ್ಯಪೇಕ್ಷಯಾ ॥
ನಾನಿತ್ಯತ್ವಾತ್ ಕುತಃ ತೇಷಾಮನಿತ್ಯತ್ವಂ ಸ್ಥಿರಾತ್ಮನಾಮ್ ॥
ಇತಿ ಬ್ರಹ್ಮಾಂಡೇ

14. ನ ಚ ಅನಿತ್ಯತ್ವೇ 'ಶ್ರುತಿಃ' 'ವೇದಃ' ಇತ್ಯಾದಿ ವಿಶೇಷಶಬ್ದಃ ಉಪಪದ್ಯತೇ ।

ವೇದಾಸ್ತೇ ನಿತ್ಯವಿನ್ನತ್ವಾತ್ ಶ್ರುತಯಶ್ಚಾಖಿಲೈಃ ಶ್ರುತೇಃ ।
ಆಮ್ನಾಯೋऽನನ್ಯಥಾಪಾಠಾದೀಶಬುದ್ಧಿಸ್ಥಿತಾಃ ಸದಾ ॥
ಇತಿ ಮಹಾವಾರಾಹೇ

ನ ಚ ನಿತ್ಯತ್ವಂ ವಿನಾ ವೇದಾನಾಂ ದರ್ಶನವ್ಯವಹಾರೋ ಯುಜ್ಯತೇ ।

15. ನ ಚ ವರ್ಣಪದಾದೀನಾಮನಿತ್ಯತ್ವಂ ವಕ್ತುಂ ಯುಕ್ತಮ್ । ಸರ್ವಜ್ಞತ್ವಾದೀಶ್ವರಸ್ಯ ತದ್ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್ । ನ ಚ ಘಟಾದಿವತ್ ಸಂಸ್ಕಾರಮಾತ್ರತ್ವಂ ವಕ್ತುಂ ಯುಕ್ತಮ್। ಪ್ರತ್ಯಭಿಜ್ಞಾವಿರೋಧಸ್ಯ ಉಕ್ತತ್ವಾತ್ ।

ಪುರಾಣಾನಾಮಪಿ ಅನ್ಯಥಾಶಬ್ದರಚನಮೇವ ಅನಿತ್ಯತ್ವಮ್ । ಅತಃ ಆಕಾಶಗುಣೇ ಶಬ್ದೇ ವ್ಯಜ್ಯಮಾನಾಃ ವರ್ಣಾದಯಃ ತತ್ಕ್ರಮಾತ್ಮಕೋ ವೇದಶ್ಚ ನಿತ್ಯ ಏವೇತಿ ಸಿದ್ಧಮ್ ॥

ಸಿದ್ಧಾನ್ವಿತೇ ವ್ಯುತ್ಪತ್ತಿಃ

16. ನ ಚ ಕೇವಲಸಿದ್ಧೇ ಅರ್ಥೇ ವ್ಯುತ್ಪತ್ತ್ಯಭಾವಾತ್ ಅಪ್ರಾಮಾಣ್ಯಮ್। ಸಿದ್ಧಾನ್ವಿತೇ ಏವ ವ್ಯುತ್ಪತ್ತಿಗ್ರಹೀತೇಃ। ಇಯಂ ಮಾತಾ ಅಯಂ ಪಿತಾ ಇತ್ಯಾದೌ ಅಂಗುಲಿಪ್ರಸಾರಣಾದಿಪೂರ್ವಕ ನಿರ್ದೇಶೇನೈವ ಹಿ ತದ್ ಜಾನಾತಿ।

ಕಾರ್ಯಾನ್ವಿತೇ ಏವ ವ್ಯುತ್ಪತ್ತಿರಿತಿ ವದತಃ ಕಾರ್ಯಸ್ಯ ಕಾರ್ಯಾನ್ವಯಾಭಾವಾತ್ ಕಲ್ಪನಾಗೌರವಮ್ । ಇಯಂ ಮಾತಾ ಅಯಂ ಪಿತಾ ಸುರೂಪೋಽಪಿ ಇತ್ಯಾದೌ ಸಿದ್ಧಮಾತ್ರಜ್ಞಾಪನೇನ ಪರ್ಯವಸಿತತ್ವಾತ್ ವಾಕ್ಯಸ್ಯ ।

**17.** ತಸ್ಯ ತತ್ರ ಪ್ರಾಮಾಣ್ಯಾನುಭವಾಚ್ಚ । ನ ಚ ಕುತ್ರಚಿತ್ ಸಿದ್ಧಜ್ಞಾಪನಾದನ್ಯತ್ರ ವಾಕ್ಯಸ್ಯ ಪ್ರಯೋಜನಂ ದೃಷ್ಟಂ । ಜ್ಞಾತ್ವೈವ ಹಿ ಇಷ್ಟ-ಸಾಧನತಾಂ ಪ್ರವರ್ತತೇ ನಿವರ್ತತೇ ಚ ವಿಪರ್ಯಯೇಣ । ಅತಃ ಸಿದ್ಧೇ ಏವ ಸರ್ವವಾಕ್ಯಾನಾಂ ಪ್ರಾಮಾಣ್ಯಂ ಸಿದ್ಧಮ್ । ಪ್ರಸಿದ್ಧಂ ಚ ವ್ಯಾಕರಣನಿರುಕ್ತಾ-ದೀನಾಂ ಸಿದ್ಧಮಾತ್ರೇ ಪ್ರಾಮಾಣ್ಯಂ ಸರ್ವವಾದಿನಾಮ್ । ತದನಂಗೀಕಾರೇ ಚ ಸರ್ವಶಾಬ್ದವ್ಯವಹಾರಾಸಿದ್ಧಿಃ ।

ಉಕ್ತಂ ಚ ನಾರದೀಯೇ—

ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಮ್ ।
ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರ ಹಿ ॥
ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ ।
ಪ್ರಮಾಣಾನಾಂ ಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ॥ ೨೩

**18.** ನ ಚ ಜೀವೇಶ್ವರಾಭೇದ ಏವ ತಾತ್ಪರ್ಯಮಾಗಮಸ್ಯ । ತತ್ರ ಪ್ರಮಾಣಾಭಾವಾತ್ । ನ ಚ ಜೀವೇಶ್ವರಭೇದಃ ಸಿದ್ಧ ಇತಿ ಅನುವಾದಕತ್ವಂ ಭೇದವಾಕ್ಯಾನಾಮ್ । ಆಗಮಂ ವಿನಾ ಈಶ್ವರಸ್ಯ ಅಸಿದ್ಧೇಃ ।

ನ ಚ ಅನುಮಾನಾತ್ ತತ್ಸಿದ್ಧಿಃ ವಿಪರ್ಯಯೇಣಾಪ್ಯನುಮಾತುಂ ಶಕ್ಯತ್ವಾತ್ । 'ವಿಮತಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಇತ್ಯುಕ್ತೇ 'ವಿಮತಂ ವಿಕರ್ತೃಕಂ ಅಸ್ಮತ್ಸಮ್ಮತ ಕರ್ತೃರಹಿತತ್ವಾತ್ ಆತ್ಮವತ್' ಇತ್ಯನು-ಮಾನವಿರೋಧಾತ್ । ಅಕಾರ್ಯತ್ವಮುಪಾಧಿಃ ಇತ್ಯುಕ್ತೇ ಶರೀರಿಜನ್ಯತ್ವಮಿತ-ರತ್ರಾಪ್ಯುಪಾಧಿರಿತ್ಯುತ್ತರಮ್ ।

**19.** ಪ್ರತ್ಯಕ್ಷಾನುಮಾನಸಿದ್ಧತ್ವೇ ಚ ಭೇದಸ್ಯ ತದ್ವಿರೋಧಾದೇವ ಅಪ್ರಾಮಾಣ್ಯಮ್ ಅಭೇದಾಗಮಸ್ಯ। ತೇನ ಅಭೇದಾಗಮಸ್ಯ ಪ್ರಾಮಾಣ್ಯಾಭಾವೇ ನ ಅನುವಾದಕತ್ವಂ ಭೇದವಾಕ್ಯಾನಾಮ್ । ನ ಹಿ ಬಲವತಃ ಅನುವಾದಕತ್ವಂ ದಾರ್ಢ್ಯಹೇತುತ್ವಾತ್ ।

**20.** ಪ್ರತ್ಯಕ್ಷಾದೇಃ ಆಗಮಸ್ಯ ಪ್ರಾಬಲ್ಯೇಽಪಿ ನ ಉಪಜೀವ್ಯಪ್ರಮಾಣ-ವಿರೋಧೇ ಪ್ರಾಮಾಣ್ಯಮ್। ವಿಷಯಾಭಾವೇ ಸ್ವಸ್ಯೈವ ಅಪ್ರಾಮಾಣ್ಯಪ್ರಾಪ್ತೇಃ । ತೇನೈವ ಹಿ ಅನುಮಾನಾದಿನಾ ಆಗಮಸ್ಯ ವಿಷಯಃ ಸಿದ್ಧ್ಯತಿ ತತ್ಪಕ್ಷೇಽಪಿ ।

ಅನುಮಾನೇನ ಹಿ ಅನುವಾದಿತ್ವಪಕ್ಷೇ ಈಶ್ವರಃ ಬೋದ್ಧವ್ಯಃ ಪ್ರತ್ಯಕ್ಷೇಣ ಚ ಆಗಮಃ । ಅತಃ ತಯೋಃ ವಿರೋಧೇ ಪ್ರಾಮಾಣ್ಯಂ ನ ಸ್ಯಾತ್ । ಅನುಮಾನ-ಸಿದ್ಧೇಶ್ವರಾಚ್ಚ ಭೇದಃ ಅನುಭವತಃ ಏವ ಸಿದ್ಧಃ ಜೀವಸ್ಯ ಅಸರ್ವಕರ್ತೃತ್ವೇನ ಅನುಭವಾತ್ ।

21. ನ ಚ ಅನುಭವವಿರೋಧೇ ಆಗಮಸ್ಯ ಪ್ರಾಮಾಣ್ಯಮ್ । ಆಗಮ-ಪ್ರಾಮಾಣ್ಯಾನುಭವಸ್ಯಾಪಿ ಅಪ್ರಾಮಾಣ್ಯಪ್ರಾಪ್ತೇಃ । ಬಹುಪ್ರಮಾಣಸಂವಾದಶ್ಚ ದಾರ್ಢ್ಯಹೇತುರೇವ । ಬಹೂನಾಂ ವಚನೇ ತಸ್ಯೈವ ದರ್ಶನೇ ದಾರ್ಢ್ಯಸ್ಯೈವ ದೃಷ್ಟೇಃ ।

22. ಸರ್ವಾವಿವಾದಸ್ಥಲೇ ಏವ ಕಥಂಚಿದನುವಾದಕತ್ವಮ್ । ನ ಚಾತ್ರ ಸರ್ವಾವಿವಾದಃ । ಏಕತ್ವವಾದಿನಾಮೇವ ವಿವಾದದರ್ಶನಾತ್ ।

ಬಹುಪ್ರಮಾಣವಿರೋಧೇ ಚ ಏಕಸ್ಯ ಅಪ್ರಾಮಾಣ್ಯಂ ದೃಷ್ಟಂ ಶುಕ್ತಿ-ರಜತಾದೌ । ನ ಚ ದೋಷಜನ್ಯತ್ವಾದೇವ ದುರ್ಬಲತ್ವಮಿತಿ ವಿರೋಧಃ । ಬಹುಪ್ರಮಾಣವಿರುದ್ಧಾನಾಂ ದೋಷಜನ್ಯತ್ವನಿಯಮಾತ್ । ದೋಷಜನ್ಯತ್ವಂ ಚ ಬಲವತ್ಪ್ರಮಾಣವಿರೋಧಾದೇವ ಜ್ಞಾಯತೇ ।

ಪ್ರಮಾಣತ್ರಯ ನಿರೂಪಣಮ್

23. ಅದುಷ್ಟಮಿಂದ್ರಿಯಂ ತು ಅಕ್ಷಮ್, ತರ್ಕೋऽದುಷ್ಟಃ ತಥಾऽನುಮಾ ।
ಆಗಮೋऽದುಷ್ಟವಾಕ್ಯಂ ಚ ಸ್ವದೃಕ್ ಚಾನುಭವಃ ಸ್ಮೃತಃ ॥
ಬಲವತ್ಪ್ರಮಾಣತಶ್ಚೈವ ಜ್ಞೇಯಾ ದೋಷಾಃ ನ ಚಾನ್ಯಥಾ ।
ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ ॥
ತಯೋಃ ಸ್ವಭಾವೋ ಬಲವಾನುಪಜೀವ್ಯಾದಿಕಶ್ಚ ಸಃ ॥

24. ಯಾಥಾರ್ಥ್ಯಮೇವ ಪ್ರಾಮಾಣ್ಯಂ ತನ್ಮುಖ್ಯಂ ಜ್ಞಾನಶಬ್ದಯೋಃ ।
ಜ್ಞಾನಂ ಚ ದ್ವಿವಿಧಂ ಬಾಹ್ಯಂ ತಥಾऽನುಭವರೂಪಕಮ್ ॥
ಬಲ್ಯೇವಾನುಭವಸ್ತತ್ರ ನಿರ್ದೋಷಂ ತ್ವಕ್ಷಜಾದಿಕಮ್ ।
ಅನುಪ್ರಮಾಣತಾಂ ಯಾತಿ ತಥಾಕ್ಷಾದಿತ್ರಯಂ ತತಃ ॥
ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್ ।
ಉಪಜೀವ್ಯವಿರೋಧೇ ತು ನ ಪ್ರಾಮಾಣ್ಯಮುಮುಷ್ಯ ಚ ॥

25. ಯಾಮಾಹುರನುಮಾಂ ಕೇಚಿತ್ ತ್ರಿಯಾದ್ಯವಯವಾತ್ಮಿಕಾಮ್ ।
ಸಾ ವ್ಯರ್ಥಾ ನೋಪಪತ್ತ್ಯೈಹಿ ವಿನಾ ಸಾಪಿ ಪ್ರಮಾಣತಾಮ್ ।
ಯಾತ್ಯತೋ ಯುಕ್ತಿರೇವೈಕಾ ಪ್ರಮಾಣಮನುಮಾತ್ಮಕಮ್ ।
ಯುಕ್ತಿಃ ಪ್ರತಿಜ್ಞಾರೂಪಾ ಚ ಹೇತುದೃಷ್ಟಾಂತರೂಪಿಕಾ ।
ತಥೋಪನಯರೂಪಾ ಚ ಪರಾ ನಿಗಮನಾತ್ಮಿಕಾ ।
ಪೃಥಕ್ ಪೃಥಕ್ ಪ್ರಮಾಣತ್ವಂ ಯಾತಿ ಯುಕ್ತಿತಯೈವ ತು ।

ಪರಾರ್ಥಾನುಮಾನೇ ಪಂಚಾವಯವ ನಿಯಮೋ ನಾಸ್ತಿ

26. ಪ್ರತಿಜ್ಞಾ ಹೇತುಗರ್ಭೈವ ಪೃಥಕ್‌ಪ್ರಾಮಾಣ್ಯಮೇಷ್ಯತಿ ।
ಸಿದ್ಧತ್ವೇನ ಪ್ರತಿಜ್ಞಾಯಾ ಹೇತುಮಾರ್ಗನಂ ಪೃಥಗ್‌ಭವೇತ್ ॥
ಪ್ರತಿಜ್ಞಾವಯವತ್ವಾತ್ತು ಸ್ವಾತಂತ್ರ್ಯೇಣೈವ ಮಾನತಾಮ್ ।
ದೃಷ್ಟಾಂತೋ ಯಾತ್ಯುಪನಯೋ ವ್ಯಾಪ್ತಿಮಾಶ್ರಿತ್ಯ ಕೇವಲಮ್॥
ವ್ಯಾಪ್ತಿಸ್ತು ಕೇವಲಾಪಿ ಸ್ಯಾತ್ ಪ್ರಮಾಣಂ ನಿಯಮಾಶ್ರಯಾತ್।
ತಥಾ ನಿಗಮನಂ ಚೋಪಸಂಹಾರೈಕಸ್ವರೂಪತಃ ॥
ಪ್ರಾಮಾಣ್ಯಂ ಯಾತ್ಯನುಭವೋ ಜ್ಞಾಪಯತ್ಯುಪಪತ್ತಿತಾಮ್ ॥

ಉಪಪತ್ತಿದೋಷಾಃ

27. ವಿರೋಧಶ್ಚ ತಥಾಧಿಕ್ಯಂ ನ್ಯೂನತಾಽಸಂಗತಿಸ್ತಥಾ ।
ಉಪಪತ್ತಿದೋಷಾ ವಿಜ್ಞೇಯಾ ವಿರೋಧಶ್ಚ ಸ್ವತೋಽನ್ಯತಃ ॥
ಜನಕಸ್ಯಾತ್ಯಯೋ ಜಾತಿಃ ಸ್ವಸ್ಯ ವಾಽನ್ಯಸ್ಯ ವಾ ಭವೇತ್ ।
ಜನಕಂ ಪ್ರಮಾಣಮುದ್ದಿಷ್ಟಂ ಸ್ವಸ್ಯಾರ್ಥಸ್ಯ ಪ್ರಕಾಶನಾತ್ ।
ನಿಗ್ರಹಾ ಏತ ಏವ ಸ್ಯುಃ ಸಂವಾದಾನುಕ್ತಿಸಂಯುತಾಃ ॥

ಅರ್ಥಾಪತ್ತಿಃ ಉಪಮಾ ಚ ಅನುಮಾನ ಭೇದ ಏವ

28. ಅರ್ಥತಃ ಪ್ರಾಪ್ತಿರೇವಾರ್ಥಾಪತ್ತಿರಿತ್ಯಭಿಧೀಯತೇ ।
ದೃಷ್ಟ್ವಾ ಸದೃಶಮೇವಾನ್ಯಂ ಪೂರ್ವದೃಷ್ಟೇ ತು ವಸ್ತುನಿ ॥
ಏತತ್ಸದೃಶತಾಜ್ಞಾನಮುಪಮಾನಂ ಪ್ರಕೀರ್ತಿತಮ್ ।
ಅಭಾವಸ್ಯ ಪರಿಜ್ಞಾನಂ ದ್ವಿವಿಧಂ ಸಮುದಾಹೃತಮ್ ।
ಏಕಂ ತತ್ರಾನುಭವತೋ ಯೋಗ್ಯಸ್ಯಾನುಪಲಬ್ಧಿತಃ ॥

ದ್ವಿತೀಯಮಪಿ ವಿಜ್ಞೇಯಂ ಸುಖಾದ್ಯೇ ಚ ಘಟಾದಿಕೇ ।
ಏಕಂ ಪ್ರತ್ಯಕ್ಷರೂಪಂ ಸ್ಯಾದ್ ದ್ವಿತೀಯಮನುಮಾತ್ಮಕಮ್ ।
ಕ್ವಚಿದ್ಘಟಾದ್ಯಭಾವೋಽಪಿ ಪ್ರತ್ಯಕ್ಷೇಣಾವಗಮ್ಯತೇ ।
ಝಂಟಿತ್ಯೇವ ಪರಿಜ್ಞಾನಾತ್ ನ ಲಿಂಗೋದ್ಭವತಾ ಮತಾ ।
ಅರ್ಥಾಪತ್ತಿಶ್ಚೋಪಮಾ ಚ ಹಿ ಅನುಮಾಭೇದ ಏವ ತು ॥
ಆಗಮೋ ದ್ವಿವಿಧೋ ಜ್ಞೇಯೋ ನಿತ್ಯೋಽನಿತ್ಯಸ್ತಥೈವ ಚ ।

ಪ್ರತ್ಯಕ್ಷಪ್ರಕಾರಾಃ

**29.** ಪ್ರತ್ಯಕ್ಷಂ ತ್ರಿವಿಧಂ ಜ್ಞೇಯಮೈಶ್ವರಂ ಯೌಗಿಕಂ ತಥಾ ।
ಅಯೌಗಿಕಂ ಚೇತಿ ತಥಾ ಸರ್ವಮಕ್ಷಾತ್ಮಕಂ ಮತಮ್ ॥
ಅಕ್ಷಾಣಿ ಚ ಸ್ವರೂಪಾಣಿ ನಿತ್ಯಜ್ಞಾನಾತ್ಮಕಾನಿ ಚ ।
ವಿಷ್ಣೋಃ ಶ್ರಿಯಃ ತಥೈವೋಕ್ತಾನ್ಯನ್ಯೇಷಾಂ ದ್ವಿವಿಧಾನಿ ತು ॥
ದೈವಾಸುರಾಣಿ ಮಧ್ಯಾನೀತ್ಯೇತತ್ಪ್ರತ್ಯಕ್ಷಮೀರಿತಮ್ ।
ವಿಷಯಾನ್ ಪ್ರತಿ ಸ್ಥಿತಂ ಹಿ ಅಕ್ಷಂ ಪ್ರತ್ಯಕ್ಷಮಿತಿ ಕೀರ್ತಿತಮ್ ॥
ಅಕ್ಷಯಂ ಪುರುಷಸ್ಯಾಕ್ಷಂ ಸ್ವರೂಪೇ ಮುಖ್ಯಮೇವ ತು ।
ಉಪಚಾರಸ್ತದನ್ಯತ್ರ ಸ್ಪಷ್ಟಾವುಪಚಯೋ ಯತಃ ॥
ಉಪಪತ್ತಿಸ್ವರೂಪತ್ವಾದನುಮಾ ಸಂಭವಾದಿಕಮ್ ।
ಪ್ರತ್ಯಕ್ಷಾಗಮಮಾಹಾತ್ಮ್ಯಾದನುಮಾನಂ ಪ್ರಮಾಣತಾಮ್ ।
ಯಾತಿ ನೈವಾನ್ಯಥಾ ತಸ್ಯ ನಿಯತತ್ವಂ ಕ್ವಚಿದ್ ಭವೇತ್ ॥

ಇತಿ ಬ್ರಹ್ಮತರ್ಕೇ

ಭೇದವಾಕ್ಯಾನಾಮೇವ ಪ್ರಾಬಲ್ಯಮ್

**30.** ಅತ್ರ ಚ ಉಪಜೀವ್ಯತ್ವೇನ ಪ್ರಮಾಣಪ್ರಾಬಲ್ಯಾತ್ ಭೇದ ಏವ ತಾತ್ಪರ್ಯಂ ಯುಕ್ತಮ್ । ಕಥಂ ಚ ಅನುವಾದಕತ್ವಂ ಭೇದಸ್ಯ ಪ್ರಮಾಣೇನ ಅಸಿದ್ಧೌ । ಸಿದ್ಧೌ ಚ ಕಥಮಭೇದವಾಕ್ಯಸ್ಯ ಅಬಾಧಃ । ನ ಚ ಅಪ್ರಮಾಣಸಿದ್ಧೇನ ಅನುವಾದಕತ್ವಂ ಪ್ರಮಾಣಸ್ಯ ಭವತಿ । ದುರ್ಬಲತ್ವೇ ಚ ಭೇದಪ್ರಮಾಣಸ್ಯ ಆಭಾಸತ್ವಾತ್ ನ ಭೇದವಾಕ್ಯಾನಾಮನುವಾದಿತ್ವಮ್ । ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಮ್ ।

ಸರ್ವಪ್ರಮಾಣವಿರುದ್ಧವಚನಾನಾಮೇವ ಪ್ರಾಬಲ್ಯಾಂಗೀಕಾರೇ 'ಇದಂ ವಾ ಅಗ್ರೇ ನೈವ ಕಿಂಚನಾಸೀತ್ ಅಸತಃ ಸದಜಾಯತ' ಇತ್ಯಾದೀನಾಮೇವ ಅವಿಚಾರೇಣ ಪ್ರತೀಯಮಾನಸ್ಯ ಅರ್ಥಸ್ಯ ಸರ್ವಪ್ರಮಾಣವಿರುದ್ಧತ್ವಾತ್ ತತ್ರ

ಸರ್ವಾಗಮಾನಾಂ ಮಹಾತಾತ್ಪರ್ಯಂ ಪ್ರಸಜ್ಯೇತ । ನ ಚ ತತ್ರ ಯುಕ್ತಿವಿರೋಧ ಇತಿ ವಾಚ್ಯಮ್ । ತಸ್ಮಿನ್ ಪಕ್ಷೇ ಯುಕ್ತಿವಿರುದ್ಧತ್ವೇನ ಅನನುವಾದಿತ್ವಮಿತಿ ಗುಣ ಏವ ಸ್ಯಾತ್ । ಯುಕ್ತಿಸಿದ್ಧತ್ವೇ ಹಿ ಅನುವಾದಿತ್ವಂ ಸ್ಯಾತ್ । ಅತಃ ಪ್ರಮಾಣ-ಸಿದ್ಧತ್ವೇ ತದಪಲಾಪಾಯುಕ್ತೇಃ, ಅಪ್ರಮಾಣಸಿದ್ಧತ್ವೇ ಚ ಭೇದಪ್ರಮಾಣಸ್ಯ ಅನುವಾದಿತ್ವಾಭಾವಾಚ್ಚ ನ ಭೇದವಾಕ್ಯಾನಾಂ ದೌರ್ಬಲ್ಯಮ್ ।

31 ನ ಚ ಪ್ರಮಾಣಬಹುತ್ವೇ ದೌರ್ಬಲ್ಯಮ್ । ದಾರ್ಢ್ಯಮೇವ ಹಿ ಬಹುವಾಕ್ಯಸಂವಾದೇ ದೃಷ್ಟಮ್ । ತಥಾ ಸತಿ ಅಭ್ಯಾಸಾದೇಃ ಅಪ್ರಾಮಾಣ್ಯ-ಹೇತುತ್ವಂ ಸ್ಯಾತ್ । ಅಭ್ಯಾಸಸ್ಯ ತಾತ್ಪರ್ಯಲಿಂಗತ್ವಂ ಸರ್ವೇಷಾಂ ಸಿದ್ಧಮ್ । ತದನಂಗೀಕಾರೇ ತತ್ಪಕ್ಷೇಽಪಿ ನವಕೃತ್ವಃ ತತ್ತ್ವಮಸೀತಿ ಅಭ್ಯಾಸಸ್ಯ ಅನುವಾದಕ-ತ್ವೇನ ಅಪ್ರಾಮಾಣ್ಯಂ ಸ್ಯಾತ್ । ಪ್ರಥಮವಾಕ್ಯೇನೈವ ಯಸ್ಯ ಅಸಿದ್ಧಂ ತದರ್ಥ-ಮಪರಮಿತ್ಯುಕ್ತೇ ಪ್ರತ್ಯಕ್ಷಾದಿನಾ ಭೇದೋ ಯೇನ ಅನಿಶ್ಚಿತಃ ತದರ್ಥಮಪರಂ ವಾಕ್ಯಮಿತ್ಯುತ್ತರಮ್। ತಸ್ಮಾದ್ ಬಹುಪ್ರಮಾಣಸಂವಾದಿತ್ವೇ ಪ್ರಾಬಲ್ಯಮೇವ । ಅತಃ ಸರ್ವಪ್ರಮಾಣವಿರುದ್ಧತ್ವಾತ್ ನ ಅಭೇದೇ ತಾತ್ಪರ್ಯಂ ವಾಕ್ಯಸ್ಯ ಕಿಂತು ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್ ॥

**ವಿಷ್ಣುಸರ್ವೋತ್ತಮತ್ವೇ ಆಗಮಾನಾಂ ತಾತ್ಪರ್ಯಮ್**

32. ತಥಾ ಚ ಉಕ್ತಂ ಭಗವತಾ—

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ಇತಿ

ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ
ಮಹಾ-ತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ ।
ಅವಾಂತರಂ ತತ್ಪರತ್ವಂ ತದನ್ಯತ್
ಸರ್ವಾಗಮಾನಾಂ ಪುರುಷಾರ್ಥಃ ತತೋಽತಃ ॥

ಇತಿ ಪೈಂಗಿಶ್ರುತಿಃ ।

ಮುಖ್ಯಂ ಚ ಸರ್ವವೇದಾನಾಂ ತಾತ್ಪರ್ಯಂ ಶ್ರೀಪತೇಃ ಪರಮ್ ।
ಉತ್ಕರ್ಷೇ ತು ತದನ್ಯತ್ರ ತಾತ್ಪರ್ಯಂ ಸ್ಯಾದವಾಂತರಮ್ ॥

ಇತಿ ಮಹಾವಾರಾಹೇ ।

ವಿಷ್ಣುಪ್ರಸಾದೇನೈವ ಮೋಕ್ಷಃ

33. ಯುಕ್ತಂ ಚ ವಿಷ್ಣೋಃ ಸರ್ವೋತ್ತಮತ್ವೇ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್। ಮೋಕ್ಷೋ ಹಿ ಸರ್ವಪುರುಷಾರ್ಥೋತ್ತಮಃ।
ಧರ್ಮಾರ್ಥಕಾಮಾಃ ಸರ್ವೇಽಪಿ ನ ನಿತ್ಯಾ ಮೋಕ್ಷ ಏವ ಹಿ ।
ನಿತ್ಯಃ ತಸ್ಮಾತ್ ತದರ್ಥಾಯ ಯತೇತ ಮತಿಮಾನ್ ನರಃ ।

ಇತಿ ಭಾಲ್ಲವೇಯ ಶ್ರುತಿಃ

ಅನಿತ್ಯತ್ವಾತ್ ಸದುಃಖತ್ವಾತ್ ನ ಧರ್ಮಾದ್ಯಾಃ ಪರಂ ಸುಖಮ್ ।
ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಮ್ ॥

ಇತಿ ಭಾರತೇ

ಮೋಕ್ಷಶ್ಚ ವಿಷ್ಣುಪ್ರಸಾದೇನ ವಿನಾ ನ ಲಭ್ಯತೇ ।
ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್
ಅಸ್ಮಾತ್ ಸಂಸಾರಾತ್ ಮುಚ್ಯತೇ ನ ಅಪರೇಣ ।
ನಾರಾಯಣೋಽಸೌ ಪರಮೋ ವಿಚಿಂತ್ಯಃ
ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ।

ಇತಿ ನಾರಾಯಣ ಶ್ರುತಿಃ

ನಾಯಮಾತ್ಮಾ ಪ್ರವಚನೇನ ಲಭ್ಯಃ,
ನ ಮೇಧಯಾ, ನ ಬಹುನಾ ಶ್ರುತೇನ ।
ಯಮೇವ ಏಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ।

ಇತಿ ಕಠಶ್ರುತಿಃ

ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ।

ಇತಿ ಭಗವದ್ವಚನಮ್ ।

ಉತ್ಪತ್ತಿಸ್ಥಿತಿಸಂಹಾರಾ ನಿಯತಿಃ ಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ ಸ ಹರಿರೇಕರಾಟ್ ॥

ಇತಿ ಸ್ಕಾಂದೇ

ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ ।
ಆನಂದದಶ್ಚ ಮುಕ್ತಾನಾಂ ಸ ಏವ ಏಕೋ ಜನಾರ್ದನಃ ॥ ಇತಿ ಚ ।
ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।
ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥ ಇತಿ ಚ

34. ಪ್ರೀತಿಶ್ಚ ಗುಣೋತ್ಕರ್ಷಜ್ಞಾನಾದೇವ ವಿಶೇಷತೋ ದೃಷ್ಟಾ ನ ಅಭೇದಜ್ಞಾನಾತ್ । ಅಭೇದಜ್ಞಾನಾತ್ ಅಪ್ರೀತಿರೇವ ಉತ್ತಮಾನಾಂ ಭವತಿ । ಘಾತಯಂತಿ ಹಿ ರಾಜಾನೋ ರಾಜಾಹಮಿತಿ ವದಂತಮ್ । ದದತಿ ಚ ಸರ್ವಮಭಿಪ್ರೇತಂ ಗುಣೋತ್ಕರ್ಷಂ ವದತಃ ।

ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ
ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।
ತತ್ಪ್ರೀಣನಾತ್ ಮೋಕ್ಷಮಾಪ್ನೋತಿ ಸರ್ವಃ
ತತೋ ವೇದಾಃ ತತ್ಪರಾಃ ಸರ್ವ ಏವ ॥
ಇತಿ ಸೌಪರ್ಣಶ್ರುತಿಃ

ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥

ಇತಿ ಗುಣೋತ್ಕರ್ಷಜ್ಞಾನಾದೇವ ಪರಮಾ ಪ್ರೀತಿಃ ಭಗವತೈವ ಅಭಿಹಿತಾ । ಅತಃ ವಿಷ್ಣೋಃ ಗುಣೋತ್ಕರ್ಷ ಏವ ಸರ್ವಶ್ರುತಿಸ್ಮೃತೀನಾಂ ತಾತ್ಪರ್ಯಮ್ । ನ ಚ ಅಭೇದೇ ತಾತ್ಪರ್ಯಮಿತ್ಯತ್ರ ಕಿಂಚಿತ್ ಮಾನಮ್ ।

ಭೇದಸ್ಯ ಧರ್ಮಿಸ್ವರೂಪತ್ವಮ್

35. ನ ಚ ವಿಶೇಷಣವಿಶೇಷ್ಯತಯಾ ಭೇದಸಿದ್ಧಿಃ । ವಿಶೇಷಣ ವಿಶೇಷ್ಯಭಾವಶ್ಚ ಭೇದಾಪೇಕ್ಷಃ । ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸಿದ್ಧಿಃ ಭೇದಾಪೇಕ್ಷಂ ಚ ಧರ್ಮಿಪ್ರತಿಯೋಗಿತ್ವಮಿತ್ಯನ್ಯೋನ್ಯಾಶ್ರಯತಯಾ ಭೇದಸ್ಯಾಯುಕ್ತಿಃ । ಪದಾರ್ಥಸ್ವರೂಪತ್ವಾದ್ ಭೇದಸ್ಯ । ನ ಚ ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸ್ಯ ಅಸ್ವರೂಪತ್ವಮ್ । ಐಕ್ಯವತ್ ಸ್ವರೂಪಸ್ಯೈವ ತಥಾತ್ವಾತ್ ।

ಸ್ವರೂಪಸಿದ್ಧಾವಪಿ ತದಸಿದ್ಧಿಶ್ಚ ಜೀವೇಶ್ವರೈಕ್ಯಂ ವದತಃ ಸಿದ್ಧೈವ । ಭೇದಸ್ತು ಸ್ವರೂಪದರ್ಶನ ಏವ ಸಿದ್ಧಃ । ಪ್ರಾಯಃ ಸರ್ವತೋ ವಿಲಕ್ಷಣಂ ಹಿ ಪದಾರ್ಥಸ್ವರೂಪಂ ದೃಶ್ಯತೇ । ಅಸ್ಯ ಭೇದ ಇತಿ ತು ಪದಾರ್ಥಸ್ಯ ಸ್ವರೂಪಮಿತಿವತ್ ।

36. ಯದಿ ನ ಸ್ವರೂಪಂ ಭೇದಃ ತದಾ ಪದಾರ್ಥೇ ದೃಷ್ಟೇ ಪ್ರಾಯಃ ಸರ್ವತೋ ವೈಲಕ್ಷಣ್ಯಂ ತಸ್ಯ ನ ಜ್ಞಾಯೇತ । ಅಜ್ಞಾತೇ ಚ ವೈಲಕ್ಷಣ್ಯೇ ಆತ್ಮನಿ ಘಟಃ ಇತ್ಯಪಿ ಸಂಶಯಃ ಸ್ಯಾತ್ । ನ ಹಿ ಕಶ್ಚಿತ್ ತಥಾ ಸಂಶಯಂ ಕರೋತಿ ನ ಹಿ ಆತ್ಮನಿ ಅಹಂ ದೇವದತ್ತೋ ನ ವಾ ಇತಿ ಕಸ್ಯಚಿತ್ ಸಂಶಯೋ ಭವತಿ । ಸಾಮಾನ್ಯತಃ ಸರ್ವವೈಲಕ್ಷಣ್ಯೇ ಜ್ಞಾತ ಏವ ಘಟತ್ವಾದಿ ಜ್ಞಾನಮ್ । ಅತೋ ನಾನ್ಯೋನ್ಯಾಶ್ರಯತಾ ।

ನ ಚ ಯುಗಪತ್ ಜ್ಞಾನಾನುತ್ಪತ್ತಿದೋಷಃ । ಯಥಾ ಯುಗಪದೇವ ದೀಪಸಹಸ್ರದರ್ಶನೇ ಸಾಮಾನ್ಯತಃ ಸರ್ವೇ ಜ್ಞಾಯಂತೇ ಏವ ತಥಾ ಸ್ಯಾತ್ । ಏಕಸ್ಮಿನ್ನೇವ ವಸ್ತುನಿ ವಿಶೇಷಃ ತೈರಪಿ ಅಂಗೀಕೃತ ಏವ । 'ನೇತಿ ನೇತಿ' ಇತ್ಯತ್ರ ಸರ್ವವೈಲಕ್ಷಣ್ಯಾಂಗೀಕಾರಾತ್ । ವಿಶೇಷಾನಂಗೀಕಾರೇ ಚ ಪುನರುಕ್ತೇಃ । ನ ಚ ಘಟಾದ್ ವೈಲಕ್ಷಣ್ಯಮೇವ ಪಟಾದ್ ವೈಲಕ್ಷಣ್ಯಂ ಅನುಭವವಿರೋಧಾತ್ । ತಸ್ಮಾದ್ ಭೇದದರ್ಶನಂ ಯುಕ್ತಮೇವ ।

### ಪ್ರಮಾಣದೃಷ್ಟಪದಾರ್ಥಾನಾಂ ಮಿಥ್ಯಾತ್ವಕಲ್ಪನಂ ನ ಯುಕ್ತಮ್

37. ಯಚ್ಚ ಪ್ರಮಾಣದೃಷ್ಟಾನಾಮಪಿ ಅರ್ಥಾನಾಂ ಮಿಥ್ಯಾತ್ವಕಲ್ಪನಂ ತಚ್ಚ ಪ್ರಮಾಣವಿರುದ್ಧತ್ವಾದೇವ ಪ್ರಕಾಶತಸ್ಕರತ್ವಮ್ । ನಹಿ ಪ್ರಮಾಣದೃಷ್ಟಸ್ಯ ತರ್ಕಬಾಧ್ಯತ್ವಮ್ । ಪ್ರತ್ಯಕ್ಷಾದಿವಿರುದ್ಧಾನಾಂ ತರ್ಕಾಭಾಸತ್ವನಿಯಮಾತ್ । ಶುಕ್ತ್ಯಾದೇಃ ರಜತತ್ವಾದಿ ಪ್ರತೀತೇರಪಿ ಬಲವತ್ಪ್ರತ್ಯಕ್ಷವಿರುದ್ಧತ್ವಾದೇವ ಭ್ರಮತ್ವಂ ನ ತರ್ಕಮಾತ್ರಾತ್ । ತರ್ಕಮಾತ್ರತಃ ಪ್ರತ್ಯಕ್ಷಬಾಧನೇ ಭೂತಚತುಷ್ಟಯಸ್ಯ ಅಬಾದೇಃ ಪೃಥಿವೀತ್ವಾದೃಷ್ಟೇಃ ಪೃಥಿವ್ಯಾ ಅಪಿ ಪೃಥಿವೀತ್ವಂ ನ ಸ್ಯಾತ್ । ಅತೋ ನ ತರ್ಕಮಾತ್ರತ ಏವ ದುಷ್ಟಸ್ಯ ಭ್ರಾಂತಿತ್ವಂ ಕಲ್ಪ್ಯಮ್ । ಅತಃ ಸರ್ವಭೇದನಿರಾಸಕತರ್ಕಸ್ಯ ಸರ್ವಶ್ರುತಿಸ್ಮೃತಿ ಪ್ರತ್ಯಕ್ಷಾನುಮಾನವಿರುದ್ಧತ್ವಾತ್ ನಿತರಾಮಾಭಾಸತ್ವಮ್ ।

### ಸದಸದ್ವಿಲಕ್ಷಣೇ ಪ್ರಮಾಣಾಭಾವಃ

38. ನ ಚ ಪರಮಾರ್ಥತಃ ಭೇದಾಭಾವಃ, ವ್ಯಾವಹಾರಿಕಃ ಸಃ ಅಸ್ತೀತಿ ವಾಚ್ಯಮ್ । ಸದಸದ್ವೈಲಕ್ಷಣ್ಯೇ ಪ್ರಮಾಣಾಭಾವಾತ್ । ಅಸತಃ ಖ್ಯಾತ್ಯಯೋಗಾದಿತಿ ವದತಃ ಖ್ಯಾತಿರಭೂನ್ನ ವಾ । ಯದಿ ನಾಭೂತ್ ನ ತತ್‌ಖ್ಯಾತಿನಿರಾಕರಣಮ್ । ಯದ್ಯಭೂತ್ ತಥಾಪಿ । ನ ಚ ಅಸತೋ ವೈಲಕ್ಷಣ್ಯಂ ತತ್ಪ್ರತೀತಿಂ ವಿನಾ ಜ್ಞಾಯತೇ । ನ ಚ ಶುಕ್ತೇಃ ರಜತತ್ವಂ ಸದಸದ್ವಿಲಕ್ಷಣಮ್ ।

ಅಸದೇವ ರಜತಂ ಪ್ರತ್ಯಭಾತ್ ಇತ್ಯನುಭವಾತ್ । ನ ಚ ಪ್ರತೀತತ್ವಾದಸತ್ತ್ವಾಭಾವಃ । ಅಸತಃ ಸತ್ತ್ವಪ್ರತೀತಿಃ ಸತಃ ಅಸತ್ತ್ವಪ್ರತೀತಿರಿತ್ಯನ್ಯಥಾ ಪ್ರತೀತೇರೇವ ಭ್ರಾಂತಿತ್ವಾತ್ । ನ ಚ ಅಸತಃ ಭ್ರಾಂತಾವಪಿ ಪ್ರತೀತಿರ್ನಾಸ್ತೀತಿ ವಾಚ್ಯಮ್ । ಅನಿರ್ವಚನೀಯ ಪರಮಾರ್ಥತ್ವಸ್ಯ ಅಸತ ಏವ ದೃಷ್ಟ್ಯಂಗೀಕಾರಾತ್ । ನ ಚ ತದಪ್ಯನಿರ್ವಾಚ್ಯಮ್ । ಅನವಸ್ಥಿತೇಃ । ಪ್ರಥಮಾನಿರ್ವಚನೀಯಾಸಿದ್ಧ್ಯಾ ಸರ್ವಾನಿರ್ವಚನೀಯಾಸಿದ್ಧಿರಿತಿ ಮೂಲಕ್ಷತಿಃ ।

39. ಅನಿರ್ವಚನೀಯತ್ವೇ ರಜತಸ್ಯ ಅನಿರ್ವಚನೀಯಮಿದಂ ರಜತಮಿತಿ ಬಾಧಕಜ್ಞಾನಮುತ್ಪದ್ಯೇತ । ಮಿಥ್ಯಾಶಬ್ದಸ್ತು ಅಭಾವವಾಚೀ । ನ ಚ ಸದಸದ್ವೈಲಕ್ಷಣ್ಯಂ ನಾಮ ಅಸ್ತೀತ್ಯತ್ರ ಕಿಂಚಿತ್ ಮಾನಮ್ । ಅನುಭವವಿರೋಧಶ್ಚ ತತ್ಪಕ್ಷೇ । ಸದಸತೋಃ ದ್ವಯೋಃ ಏವ ಸರ್ವೈಃ ಅನುಭೂಯಮಾನತ್ವಾತ್ । ಅತಃ ಅನಿರ್ವಚನೀಯಾಭಾವಾತ್, ಅಸತಃ ಪ್ರತೀತ್ಯನಂಗೀಕಾರಾತ್, ಪ್ರತೀಯಮಾನತ್ವಾಚ್ಚ ಭೇದಸ್ಯ ಸತ್ತ್ವಪ್ರಾಪ್ತೇಃ, ನ ಅದ್ವಿತೀಯತ್ವಂ ಯುಜ್ಯತೇ ॥

ಜೀವಪರಮಾತ್ಮೈಕ್ಯೇ ಶ್ರುತೀನಾಂ ತಾತ್ಪರ್ಯಂ ನ ಯುಜ್ಯತೇ

40 ಕಥಂ ಚ ಶ್ರುತಿಸಿದ್ಧಃ ಜೀವಪರಮಾತ್ಮಭೇದಃ ನಿರಾಕ್ರಿಯತೇ । ಮಿಥ್ಯಾವಾದಿತ್ವೇ ಚ ಶ್ರುತೇಃ ಕಥಮೈಕ್ಯಸ್ಯ ಸತ್ಯತ್ವಮ್ । ಕಥಂ ಚ ಏವಂ ವಾದಿನಾಂ ವೇದವಾದಿತ್ವಮ್ । ವೇದೋಕ್ತಸ್ಯ ಮಿಥ್ಯಾತ್ವಾಂಗೀಕಾರಾದೇವ ಹಿ ಅವೇದವಾದಿತ್ವಂ ಬೌದ್ಧಾದೀನಾಮಪಿ । ಅತಃ ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್ ।

41. ಕಥಂ ಚ ಜೀವಪರಮಾತ್ಮೈಕ್ಯೇ ಸರ್ವಶ್ರುತೀನಾಂ ತಾತ್ಪರ್ಯಂ ಯುಜ್ಯತೇ । ಸರ್ವಪ್ರಮಾಣವಿರುದ್ಧತ್ವಾತ್ । ತಥಾಹಿ ಅನುಭವವಿರೋಧಃ ನ ಹಿ ಅಹಂ ಸರ್ವಜ್ಞಃ ಸರ್ವೇಶ್ವರಃ ನಿರ್ದುಃಖಃ ನಿರ್ದೋಷ ಇತಿ ವಾ ಕಸ್ಯಚಿದನುಭವಃ । ಅಸ್ತಿ ಚ ತದ್ವಿಪರ್ಯಯೇಣ ಅನುಭವಃ । ನ ಹಿ ಮಿಥ್ಯಾನುಭವಃ ಅಯಮ್ । ತದ್ವಿಪರೀತಪ್ರಮಾಣಾಭಾವಾತ್ ।

'ಅತತ್ ತ್ವಮಸಿ' ಇತಿ ನವಕೃತ್ವೋಪದೇಶಃ

42. ನ ಚ ಅಭೇದೇ ಕಶ್ಚಿದಾಗಮಃ । ಸಂತಿ ಚ ಭೇದೇ ಸರ್ವಾಗಮಾಃ । ತಥಾಹಿ – ಅತತ್ತ್ವಮಸಿ ಇತಿ ನವಕೃತ್ವೋಪದೇಶಃ ಸದೃಷ್ಟಾಂತಕಃ । ನ ಚ ಅಯಂ ಅಭೇದೋಪದೇಶಃ ।

ಶಕುನಿ ಸೂತ್ರ ದೃಷ್ಟಾಂತಃ

(೧) ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧಃ ದಿಶಂ ದಿಶಂ ಪತಿತ್ವಾ ಅನ್ಯತ್ರ ಆಯತನಂ ಅಲಬ್ಧ್ವಾ ಬಂಧನಮೇವ ಉಪಾಶ್ರಯತೇ । ಸನ್ಮೂಲಾಃ ಸೋಮ್ಯ ಇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ ।

ಮಧು ಮಕ್ಷಿಕಾ ದೃಷ್ಟಾಂತಃ

43 (೨) ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠಂತಿ ನಾನಾತ್ಯ-ಯಾನಾಂ ವೃಕ್ಷಾಣಾಂ ರಸಾನಾಂ ಸಮವಹಾರಮೇಕತಾಂ ಗಮಯಂತಿ ತೇ ಯಥಾ ತತ್ರ ನ ವಿವೇಕಂ ಲಭಂತೇ ಅಮುಷ್ಯ ಅಹಂ ವೃಕ್ಷಸ್ಯ ರಸಃ ಅಸ್ಮಿ, ಅಮುಷ್ಯ ಅಹಂ ವೃಕ್ಷಸ್ಯ ರಸಃ ಅಸ್ಮಿ, ಇತಿ ಏವಮೇವ ಖಲು ಸೋಮ್ಯ ಇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹೇ ಇತಿ । ತೇ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ ಭವಂತಿ ತತ್ತದಾ ಭವಂತಿ ।

ನದೀ-ಸಮುದ್ರ ದೃಷ್ಟಾಂತಃ

(೩) ಇಮಾಃ ಸೋಮ್ಯ ನದ್ಯಃ ಪುರಸ್ತಾತ್ ಪ್ರಾಚ್ಯಃ ಸ್ಯಂದಂತೇ ಪಶ್ಚಾತ್ ಪ್ರತೀಚ್ಯಃ । ತಾಃ ಸಮುದ್ರಾತ್ ಸಮುದ್ರಮೇವ ಅಪಿಯಂತಿ । ಸಮುದ್ರ ಏವ ಭವತಿ । ತಾ ಯಥಾ ತತ್ರ ನ ವಿದುಃ ಇಯಮಹಮಸ್ಮಿ, ಇಯಮಹಮಸ್ಮಿ ಇತಿ । ಏವಮೇವ ಖಲು ಸೋಮ್ಯ ಇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹೇ ಇತಿ । ತೇ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ ಭವಂತಿ ತತ್ತದಾ ಭವಂತಿ ।

ವೃಕ್ಷ ದೃಷ್ಟಾಂತಃ

೪೪. (೪) ಸ ಏಷ ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನೋ ಮೋದಮಾನಃ ತಿಷ್ಠತಿ । ಅಸ್ಯ ಯದಾ ಏಕಾಂ ಶಾಖಾಂ ಜೀವೋ ಜಹಾತಿ ಅಥ ಸಾ ಶುಷ್ಯತಿ ।

ನ್ಯಗ್ರೋಧಫಲ ದೃಷ್ಟಾಂತಃ

(೫) ನ್ಯಗ್ರೋಧಫಲಮತ ಆಹರೇತಿ, ಇದಂ ಭಗವ ಇತಿ, ಭಿಂಧೀತಿ, ಭಿನ್ನಂ ಭಗವ ಇತಿ, ಕಿಮತ್ರ ಪಶ್ಯಸೀತಿ, ಅಣ್ವ್ಯಃ ಇವ ಇಮಾ ಧಾನಾ ಭಗವ ಇತಿ,

ಆಸಾಂ ಅಂಗ ಏಕಾಂ ಭಿಂಧೀತಿ, ಭಿನ್ನಾ ಭಗವ ಇತಿ, ಕಿಮತ್ರ ಪಶ್ಯಸೀತಿ, ನ ಕಿಂಚನ ಭಗವ ಇತಿ । ತಂ ಹ ಉವಾಚ ಯಂ ವೈ ಸೋಮ್ಯ ಏತಂ ಅಣಿಮಾನಂ ನ ನಿಭಾಲಯಸೇ ಅಸ್ಯ ಸೋಮ್ಯ ಅಣಿಮ್ನಃ ಏವಂ ಮಹಾನ್ ನ್ಯಗ್ರೋಧಃ ತಿಷ್ಠತಿ ।

ಲವಣೋದಕ ದೃಷ್ಟಾಂತಃ

45 (೬) ಲವಣಮೇತದುದಕೇ ಅವಧಾಯ ಅಥ ಮಾ ಪ್ರಾತರುಪಸೀದಥಾ ಇತಿ, ತದ್ಧ ತಥಾ ಚಕಾರ, ತಂ ಹ ಉವಾಚ, ಯದ್ದೋಷಾ ಲವಣಮೇತದುಕೇऽವಧಾ ಅಂಗ ತದಾಹರೇತಿ, ತದ್ಧ ಅವಮೃಶ್ಯ ನ ವಿವೇದ ಯಥಾ ವಿಲೀನಮೇವ, ಅಂಗ ಅಸ್ಯ ಅಂತಾದಾಚಾಮೇತಿ, ಕಥಮಿತಿ, ಲವಣಮಿತಿ, ಮಧ್ಯಾದಾಚಾಮೇತಿ, ಕಥಮಿತಿ, ಲವಣಮಿತಿ, ಅಂತ್ಯಾದಾಚಾಮೇತಿ, ಕಥಮಿತಿ, ಲವಣಮಿತಿ, ಅಭಿಪ್ರಾಸ್ಯ ಏತದಥ ಮಾ ಉಪಸೀದಥಾ ಇತಿ, ತದ್ಧ ತಥಾ ಚಕಾರ ತತ್ ಶಶ್ವತ್ ಸಂವರ್ತತೇ । ತಂ ಹ ಉವಾಚ ಅತ್ರ ವಾವ ಕಿಲ ಸತ್‌ಸೋಮ್ಯ ನ ನಿಭಾಲಯಸೇ ಅತ್ರೈವ ಕಿಲೇತಿ ।

ಗಾಂಧಾರಪುರುಷ ದೃಷ್ಟಾಂತಃ

(೭) ಯಥಾ ಸೋಮ್ಯ ಪುರುಷಂ ಗಂಧಾರೇಭ್ಯೋ ಅಭಿನದ್ಧಾಕ್ಷಂ ಆನೀಯ ತತಃ ಅತಿಜನೇ ವಿಸೃಜೇತ್ ।

ಆಸನ್ನಮರಣ ದೃಷ್ಟಾಂತಃ

46. (೮) ಅಥ ಯದಾ ಅಸ್ಯ ವಾಙ್ ಮನಸಿ ಸಂಪದ್ಯತೇ, ಮನಃ ಪ್ರಾಣೇ, ಪ್ರಾಣಃ ತೇಜಸಿ, ತೇಜಃ ಪರಸ್ಯಾಂ ದೇವತಾಯಾಂ, ತಾವತ್ ನ ಜಾನಾತಿ ।

ಸ್ತೇನ ದೃಷ್ಟಾಂತಃ

(೯) ಪುರುಷಂ ಸೋಮ್ಯ ಉತ ಹಸ್ತಗೃಹೀತಮಾನಯಂತಿ ಅಪಹಾರ್ಷೀತ್ ಸ್ತೇನಮಕಾರ್ಷೀತ್ ಪರಶುಮಸ್ಮೈ ತಪತೇತಿ । ಸ ಯದಿ ತಸ್ಯ ಕರ್ತಾ ಭವತಿ ತತ ಏವ ಆತ್ಮಾನಂ ಅನೃತಂ ಕುರುತೇ ಸ ಅನೃತಾಭಿಸಂಧಃ ಅನೃತೇನ ಆತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇ ಅಥ ಹನ್ಯತೇ । ಅಥ ಯದಿ ಸ ತಸ್ಯ ಅಕರ್ತಾ ಭವತಿ ತತ ಏವ ಸತ್ಯಂ ಆತ್ಮಾನಂ ಕುರುತೇ ಸ ಸತ್ಯಾಭಿಸಂಧಃ ಸತ್ಯೇನ ಆತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇ ಅಥ ಮುಚ್ಯತೇ ।

ಏವಮೇವ ಖಲು ಆಚಾರ್ಯವಾನ್ ಪುರುಷೋ ವೇದ ಇತಿ ಸ್ಥಾನನವಕೇऽಪಿ ಭೇದ ಏವ ದೃಷ್ಟಾಂತಾಭಿಧಾನಾತ್ ॥

ಸ್ಥಾನನವಕೇಽಪಿ ಭೇದೇ ಏವ ದೃಷ್ಟಾಂತಾಃ

47. ನ ಹಿ ಶಕುನಿಸೂತ್ರಯೋಃ, ನಾನಾವೃಕ್ಷರಸಾನಾಮ್, ನದೀಸಮುದ್ರಯೋಃ, ಜೀವವೃಕ್ಷಯೋಃ, ಅಣಿಮಧಾನಯೋಃ, ಲವಣೋದಕಯೋಃ, ಗಂಧಾರಪುರುಷಯೋಃ, ಅಜ್ಞಪ್ರಾಜ್ಞಾದಿನಿಯಾಮಕಯೋಃ, ಸ್ತೇನಾಪಹಾರ್ಯ-ಯೋಶ್ಚ ಐಕ್ಯಮ್ ।

'ಸತಿ ಸಂಪದ್ಯ ನ ವಿದುಃ ಸತಿ ಸಂಪತ್ಸ್ಯಾಮಹೇ ಇತಿ ತೇ ಇಹ ವ್ಯಾಘ್ರೋ ವಾ ಸಿಂಹೋ ವಾ' ಇತಿ 'ಸತ ಆಗಮ್ಯ ನ ವಿದುಃ ಸತಃ ಆಗಚ್ಛಾಮಹೇ ಇತಿ ತೇ ಇಹ ವ್ಯಾಘ್ರೋ ವಾ ಸಿಂಹೋ ವಾ' ಇತಿ ಭೇದಾಪರಿಜ್ಞಾನೇನ ಅನರ್ಥವಚನಾಚ್ಚ। ನ ಹಿ ಗೃಹಾದಾಗತಸ್ಯ ಗೃಹೇ ಪ್ರವಿಷ್ಟಸ್ಯ ತದೈಕ್ಯಮ್ ।

'ತಾಃ ಸಮುದ್ರಾತ್ ಸಮುದ್ರಮೇವ ಅಪಿಯಂತಿ ಸ ಸಮುದ್ರ ಏವ ಭವತಿ' ಇತ್ಯತ್ರಾಪಿ ಭೇದ ಏವ ಉಚ್ಯತೇ । ಅನ್ಯಥಾ ತಾಃ ಸಮುದ್ರ ಏವ ಭವಂತೀತಿ ವ್ಯಪದೇಶಃ ಸ್ಯಾತ್ । ಅತಃ ನದ್ಯಃ ಸಮುದ್ರಾದಾಗಚ್ಛಂತಿ ತಂ ಪ್ರವಿಶಂತಿ ಚ । ಸಮುದ್ರಸ್ತು ಸ ಏವ ನ ಏತಾಸಾಂ ಸಮುದ್ರತ್ವಂ ಭವತಿ ಇತ್ಯರ್ಥಃ । ನ ಹಿ ಭಿನ್ನಾನಾಂ ನದೀಜಲಪರಮಾಣೂನಾಂ ಸಮುದ್ರಾಣುಭಿಃ ಐಕ್ಯಂ ಯುಜ್ಯತೇ । ತಥಾ ಸತಿ ಮಹಾಜನಸಮಿತೌ ಪ್ರವಿಷ್ಟಾನಾಂ ದ್ವಿತ್ರಾಣಾಂ ತದೈಕ್ಯಂ ಸ್ಯಾತ್ । ನ ಚ ತದ್ಯುಜ್ಯತೇ ಭೇದೇನ ಅನುಭವಾತ್ ।

'ಸ್ವ' 'ಮನಃ' 'ಪ್ರಾಣ' ಶಬ್ದಾನಾಮ್ ಅರ್ಥಃ

48. 'ಸ್ವಂಹಿ ಅಪೀತೋ ಭವತಿ' ಇತ್ಯತ್ರಾಪಿ ಸ್ವ ಇತಿ ಪರಮಾತ್ಮನಃ ಅಭಿಧಾನಮ್ । 'ಸ್ವಾತ್ಮನಾ ಚ ಉತ್ತರಯೋಃ' ಇತಿ ಸೂತ್ರಾತ್ ।

ಸ್ವಾತಂತ್ರ್ಯಾತ್ ಸ್ವ ಇತಿ ಪ್ರೋಕ್ತಃ ಆತ್ಮಾಯಂ ಚಾತತತ್ವತಃ ।
ಬ್ರಹ್ಮಾಯಂ ಗುಣಪೂರ್ಣತ್ವಾತ್ ಭಗವಾನ್ ವಿಷ್ಣುರವ್ಯಯಃ ॥
ಇತಿ ಪರಮೋಪನಿಷದಿ.

ಅಪೀತ ಇತ್ಯಪಿ ಪ್ರವೇಶಮಾತ್ರಂ ಸ್ವಮಿತಿ ದ್ವಿತೀಯಾನಿರ್ದೇಶಾತ್ । ಏಕೀ-ಭಾವವಿವಕ್ಷಾಯಾಂ 'ಸ್ವೇನ' ಇತಿ ನಿರ್ದೇಶಃ ಸ್ಯಾತ್ ।

ಸ್ವಂ ಕುಲಾಯಂ ಯಥಾಪೀತಃ ಪಕ್ಷೀ ಸ್ಯಾದೇವಮೀಶ್ವರಮ್ ।
ಅಪ್ಯೇತಿ ಜೀವಃ ಪ್ರಸ್ವಾಪೇ ಮುಕ್ತೌ ಚಾನ್ಯೋಽಪಿ ಸನ್ ಸದಾ ॥ ಇತಿ ಚ.

'ಏವಮೇವ ಖಲು ಸೋಮ್ಯ ಏತನ್ಮನಃ ದಿಶಂ ದಿಶಂ ಪತಿತ್ವಾ ಅನ್ಯತ್ರಾ-ಯತನಮಲಬ್ಧ್ವಾ ಪ್ರಾಣಮೇವೋಪಾಶ್ರಯತೇ' ಇತ್ಯತ್ರಾಪಿ ಮನಃ ಇತಿ

ಜೀವಃ, ಪ್ರಾಣಃ ಇತಿ ಪರಮಾತ್ಮಾ । 'ಯತ್ರಾಯಂ ಪುರುಷಃ ಸ್ವಪಿತಿ ನಾಮ' ಇತಿ ತಯೋರೇವ ಪ್ರಸ್ತುತತ್ವಾತ್ ।

ಮನನಾನ್ಮನ ಉದ್ದಿಷ್ಟಃ ಪುದ್ಗಲೋ ನಿರಯಂ ಗಿರನ್ ।
ಕರ್ಮಾನುಶಯನಾಚ್ಚೈವ ಸಂಸಾರ್ಯನುಶಯೀ ಸ್ಮೃತಃ ॥ ಇತಿ ಚ.
ಪ್ರಾಣಃ ಪ್ರಣಯನಾದೇಷಃ ಸಾಧುತ್ವಾತ್ ಸನ್ ಹರಿಃ ಸ್ಮೃತಃ ॥ ಇತಿ ಚ.

'ಸನ್ಮೂಲಾಃ ಸೋಮ್ಯ ಇಮಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ' ಇತ್ಯತ್ರಾಪಿ ಭೇದ ಏವ ಪ್ರತೀಯತೇ ।

ಸ್ರಷ್ಟೃತ್ವಾದಾಶ್ರಯತ್ವಾಚ್ಚ ಮುಕ್ತಾನಾಂ ಚ ಪ್ರತಿಪ್ರತಿ ।
ಸ್ಥಾಪನಾಚ್ಚ ವಿಭುರ್ವಿಷ್ಣುಃ ಅನ್ಯಃ ಸಂಸಾರಿಣೋ ಮತಃ ॥ ಇತಿ ಚ.

ಜೀವಶಬ್ದೇನ ಪರಮಾತ್ಮಾ ಉಚ್ಯತೇ

**49.** 'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' ಇತಿ—'ಸ ಏಷ ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೋದಮಾನಃ ತಿಷ್ಠತಿ' ಇತ್ಯತ್ರಾಪಿ ಜೀವಶಬ್ದೇನ ಪರಮಾತ್ಮಾ ಅಭಿಹಿತಃ । 'ಜೀವ ಇತಿ–ಭಗವತಃ ಅನಿರುದ್ಧಸ್ಯ ಆಖ್ಯಾ' ಇತಿ ಶ್ರುತೇಃ ।

ವಿಷ್ಣುರ್ಜೀವ ಇತಿ ಪ್ರೋಕ್ತಃ ಸತತಂ ಪ್ರಾಣಧಾರಣಾತ್ ।
ಸ ಪ್ರವಿಶ್ಯ ಶರೀರಂ ಚ ಸ್ಥಾವರಂ ಜಂಗಮಂ ತಥಾ ॥
ಮಹಾಭೂತಾನಿ ಚ ವಿಭುಃ ತ್ರಿವೃತ್ಕರಣಪೂರ್ವಕಮ್ ।
ಸಂಸಾರಿಣಂ ಭ್ರಾಮಯತಿ ಸದೈವಾನ್ಯತ್ವಲಕ್ಷಣಮ್ ॥
ತೇನಾಯಂ ಮೋದತೇ ನಿತ್ಯಂ ವೃಕ್ಷಾವಸ್ಥಾಂ ಗತೋಽಪಿ ಸನ್ । ಇತಿ ಚ.

'ತತ್ತೇಜ ಐಕ್ಷತ, ತಾ ಆಪಃ ಐಕ್ಷಂತ, ಇಮಾಃ ತಿಸ್ರಃ ದೇವತಾಃ' ಇತಿ ಪೂರ್ವಮೇವ ಚೇತನತ್ವಸಿದ್ಧೇಃ 'ಅನೇನ ಜೀವೇನ ಆತ್ಮನಾ' ಇತಿ ಸಂಸಾರಿಣಃ ಪುನಃ ಪ್ರವೇಶಃ ನ ಯುಕ್ತಃ । ಅತಃ ತತ್ರ ಜೀವಶಬ್ದೇನ ಪರಮಾತ್ಮೈವ ಅಭಿಹಿತಃ । 'ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೋದಮಾನಃ ತಿಷ್ಠತಿ' ಇತ್ಯತ್ರಾಪಿ ಜೀವಶಬ್ದೋದಿತಃ ಪರ ಏವ । ಪೇಪೀಯಮಾನಃ ಮೋದಮಾನಸ್ತು ಸಂಸಾರೀ । ನ ಹಿ ಚೇತನಾದನ್ಯಸ್ಯ ಮೋದ ಭೋಗಾದಿಕಂ ಯುಜ್ಯತೇ । ಸುಖಸ್ಯ ಚಾಪ್ಯಾಯತನಂ ಶರೀರಂ ದುಃಖಸ್ಯ ಚಾಪ್ಯಾಯತನಂ ಶರೀರಮ್ ।

ಅಚೇತನಂ ಪ್ರಾಕೃತಮೇತದಾಹುಃ ಭೋಕ್ತಾ ತಯೋಃ
ಚೇತನಕಃ ಶರೀರೇ । ಇತಿ ಭಾರತೇ.

'ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತೇ' ಇತ್ಯತ್ರಾಪಿ ಜೀವಶಬ್ದಃ ಪರೇ। ನ ಹಿ ಸಂಸಾರಿಣೋ ಮುಖ್ಯತಃ ಪ್ರಾಣಧಾರಕತ್ವಂ ಯುಜ್ಯತೇ।

'ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ' ಇತಿ ಚ.

'ಅಣಿಮಾ' 'ಆತ್ಮಾ' ಶಬ್ದಯೋಃ ಅರ್ಥಃ

50. ಯಂ ವೈ ಸೋಮ್ಯ ಏತಂ ಅಣಿಮಾನಂ ನ ನಿಭಾಲಯಸೇ ಅಸ್ಯ ಸೋಮ್ಯ ಏಷಃ ಅಣಿಮ್ನಃ ಏವಂ ಮಹಾನ್ ನ್ಯಗ್ರೋಧಃ ತಿಷ್ಠತಿ ಇತ್ಯತ್ರಾಪಿ 'ಅಣಿಮ' ಶಬ್ದೇನ ಪರ ಏವ ಅಭಿಹಿತಃ। 'ಸ ಏಷೋಽಣಿಮಾ ಐತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ ಸ ಆತ್ಮಾ ಅತತ್ ತ್ವಮಸಿ ಶ್ವೇತಕೇತೋ' ಇತ್ಯುಕ್ತತ್ವಾಚ್ಚ। ಧಾನಾಸು ತು ಅಣ್ವ್ಯ ಇವ ಇಮಾ ಧಾನಾ ಇತಿ ಸ್ತ್ರೀಲಿಂಗಪ್ರಯೋಗಾತ್ ಇವಶಬ್ದ-ಪ್ರಯೋಗಾಚ್ಚ ನ ಅಣಿಮತ್ವಮ್। ನ ಚ ತಾ ನ ನಿಭಾಲಯಸೇ। ಐತದಾತ್ಮ್ಯ-ಮಿತ್ಯೇತದೀಯಮ್। ಸ ಆತ್ಮೇತಿ ಆತ್ಮಶಬ್ದಸ್ತು ಪರ ಏವ। 'ದ್ಯುಭ್ವಾದ್ಯಾಯ-ತನಂ ಸ್ವಶಬ್ದಾತ್' 'ನಾನುಮಾನಮತಚ್ಛಬ್ದಾತ್' 'ಪ್ರಾಣಭೃಚ್ಚ' ಇತ್ಯತ್ರ 'ತಮೇವ ಏಕಂ ಜಾನಥ ಆತ್ಮಾನಂ' ಇತಿ ಸ್ವಶಬ್ದಪರ್ಯಾಯಾತ್ಮಶಬ್ದಾತ್ ನ ಪ್ರಕೃತಿಜೀವೌ ಅಭಿಧೀಯೇತೇ ಕಿಂತು ಪರ ಏವೇತಿ ಭಗವತಾ ವ್ಯಾಸೇನ ಅಭಿಹಿತಮ್। ಅತಃ ಆತ್ಮಶಬ್ದಸ್ತು ಅಸ್ಮಿನ್ನೇವ ಮುಖ್ಯಃ।

ಆತತತ್ವಾಚ್ಚ ಮಾತೃತ್ವಾದಾತ್ಮೇತಿ ಪರಮೋ ಹರಿಃ।
ಆತ್ಮಾಭಾಸಾಃ ತದನ್ಯೇ ಯೇ ನಹಿ ಏತೇಷಾಂ ತತಾಃ ಗುಣಾಃ॥

ಇತಿ ಪರಮೋಪನಿಷದಿ.

51. 'ತೇಜಃ ಪರಸ್ಯಾಂ ದೇವತಾಯಾಂ ತಾವನ್ನ ಜಾನಾತಿ' ಇತ್ಯತ್ರ ಚ ಯದಾ ಅಸ್ಯ ಪ್ರಾಣಾದೀನ್ ಪರೋ ಗ್ರಸತಿ ತದಾ ನ ಜಾನಾತಿ, ಯದಾ ದದಾತಿ ತದಾ ಜಾನಾತೀತಿ ತದ್ವಶತ್ವಮೇವ ಉಕ್ತಮ್।

ಯದಾ ಪ್ರಾಣಾನ್ ದದಾತೀಶಃ ತದಾ ಚೇತನಕೋಽಖಿಲಮ್।
ಜಾನಾತಿ ಗ್ರಸ್ತಕರಣಃ ತೇನ ವೇತ್ತಿ ನ ಕಿಂಚನ॥ ಇತಿ ಚ.

'ಅಪಹಾರ್ಷೀತ್ ಸ್ತೇಯಮಕಾರ್ಷೀತ್' ಇತ್ಯತ್ರ ಚ ಅನ್ಯಾಭಿಮತಸ್ಯೈವ ವಸ್ತುನಃ ಅಪಹಾರ್ಯತ್ವಾತ್ ಭೇದ ಏವಾಯಂ ದೃಷ್ಟಾಂತಃ। ಅನ್ಯಂ ಸಂತಂ ಪರಮಾತ್ಮಾನಂ ಸ್ವಯಮಿತಿ ಮನ್ಯಮಾನಃ ಸ್ತೇನ ಏವೇತಿ। ನ ಹಿ ಸ್ವಕೀಯಂ ಪರಿತ್ಯಜನ್ ಸ್ತೇನೋ ಭವತಿ।

ಐಕಾತ್ಮ್ಯ ನಿಂದಾ

ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ ।
ಶಾಸ್ತ್ರತತ್ತ್ವಮವಿಜ್ಞಾಯ ತಥಾ ವಾದಬಲಾಜ್ಜನಾಃ ॥
ಕಾಮಕ್ರೋಧಾಭಿಭೂತತ್ವಾದಹಂಕಾರವಶಂ ಗತಾಃ ।
ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ ॥
ಬ್ರಹ್ಮಸ್ತೇನಾ ನಿರಾನಂದಾಃ ಅಪಕ್ವಮನಸೋಽಶಿವಾಃ ।
ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ ॥
ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಮ್ ।
ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ ॥
ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತಃ । ಇತಿ ಮೋಕ್ಷಧರ್ಮೇ.

ಜೀವೇಶ್ವರಭೇದೇ ಪ್ರಮಾಣವಚನಾನಿ

52. ಯಥಾ ಪಕ್ಷೀ ಚ ಸೂತ್ರಂ ಚ ನಾನಾವೃಕ್ಷರಸಾ ಯಥಾ ।
ಯಥಾ ನದ್ಯಃ ಸಮುದ್ರಶ್ಚ ಶುದ್ಧೋದಲವಣೇ ಯಥಾ ॥
ಯಥಾ ಚೋರಾಪಹಾರ್ಯೌ ಚ ಯಥಾ ಪುಂವಿಷಯಾವಪಿ ।
ಯಥಾ ಜೀವೇಶ್ವರೌ ಭಿನ್ನೌ ಸರ್ವದೈವ ವಿಲಕ್ಷಣೌ ॥
ತಥಾಪಿ ಸೂಕ್ಷ್ಮರೂಪತ್ವಾನ್ನ ಜೀವಾತ್ ಪರಮೋ ಹರಿಃ ।
ಭೇದೇನ ಮಂದದೃಷ್ಟೀನಾಂ ದೃಶ್ಯತೇ ಪ್ರೇರಕೋಽಪಿ ಸನ್ ॥
ವೈಲಕ್ಷಣ್ಯಂ ತಯೋಃ ಜ್ಞಾತ್ವಾ ಮುಚ್ಯತೇ ಬಧ್ಯತೇಽನ್ಯಥಾ ।
ಇತಿ ಪರಮೋಪನಿಷದಿ.

53. ಪ್ರೇರಕಃ ಸರ್ವಜೀವಾನಾಂ ಪ್ರಾಣಧೀಚೋದಿತಾ ಚ ಸಃ ।
ವಿಷ್ಣುಃ ಸಂಸಾರಿಣೋಽನ್ಯೋ ಯಸ್ತಮವಿಜ್ಞಾಯ ಮೂಢಧೀಃ ॥
ದೇಹೇಂದ್ರಿಯಪ್ರಾಣಬುದ್ಧಿನೇತೃತ್ವಂ ಮನ್ಯತೇತ್ಮನಃ ।
ಅತಃ ಸಂಸಾರಪದವೀಂ ಯಾತಿ ಜೀವೇಶಯೋಃ ಸದಾ ॥
ವೈಲಕ್ಷಣ್ಯಂ ಪರಂ ಜ್ಞಾತ್ವಾ ಮುಚ್ಯತೇ ಬಧ್ಯತೇಽನ್ಯಥಾ । ಇತಿ ಚ.

ಏಕವಿಜ್ಞಾನೇನ ಸರ್ವವಿಜ್ಞಾನಂ ಪ್ರಾಧಾನ್ಯಾತ್ ಸಾದೃಶ್ಯಾತ್ ಕಾರಣತ್ವಾತ್

54. ತದ್ವಶತ್ವಜ್ಞಾಪನಾರ್ಥಂ ಚ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಸೃಷ್ಟಿಕಥನಮ್ । ಏಕವಿಜ್ಞಾನೇನ ಸರ್ವವಿಜ್ಞಾನಂ ಚ ಪ್ರಾಧಾನ್ಯಾತ್,

ಕಿಂಚಿತ್ ಸಾದೃಶ್ಯಾತ್, ಕಾರಣತ್ವಾಚ್ಚ । ನ ತು ತದನ್ಯಸ್ಯ ಮಿಥ್ಯಾತ್ವಾತ್ । ನ ಹಿ ಸತ್ಯಜ್ಞಾನೇನ ಮಿಥ್ಯಾಜ್ಞಾನಂ ಭವತಿ ।

55. ನಹಿ ಶುಕ್ತಿಜ್ಞಃ ರಜತಜ್ಞ ಇತ್ಯುಚ್ಯತೇ । ವಿರೋಧಾತ್ ತಯೋಃ ಜ್ಞಾನಯೋಃ 'ನೇದಂ ರಜತಮ್' ಇತಿ ಅರಜತಜ್ಞೋ ಹಿ ಶುಕ್ತಿಜ್ಞೋ ಭವತಿ । ರಜತಜ್ಞಶ್ಚೇತ್ ನ ಶುಕ್ತಿಜ್ಞಃ । ನ ಹಿ ತಜ್ಞಃ ತದಭಾವಜ್ಞೋ ಭವತಿ । ತದಭಾವಸ್ಯ ತಜ್ಜ್ಞಾನಪೂರ್ವಕತ್ವಂ ಚ ಅನ್ಯತ್ರ ತಸ್ಯ ಸತ್ತ್ವಾದೇವ ದೃಷ್ಟಮ್ । ತದಸಂಗೀಕಾರೇ ತದೇವ ನ ಯುಜ್ಯತೇ ।

56. ಪ್ರಧಾನಜ್ಞಾನಾತ್ ಅಪ್ರಧಾನಸ್ಯ ಜ್ಞಾನವತ್ ವ್ಯಪದೇಶಃ ಅಸ್ತ್ಯೇವ । ಯಥಾ ಪ್ರಧಾನಪುರುಷಾಣಾಂ ಜ್ಞಾನಾಹ್ವಾನನಾಶನೈಃ ಗ್ರಾಮಃ ಜ್ಞಾತಃ ಆಹೂತಃ ನಾಶಿತಃ ಇತಿ ವ್ಯಪದೇಶಃ । ಕಾರಣೇ ಚ ಪಿತರಿ ಜ್ಞಾತೇ ಪುತ್ರೋ ಜ್ಞಾತಃ ಇತಿ ಜಾನಾಮಿ ಏನಮಸ್ಯ ಪುತ್ರಃ ಅಯಮಿತಿ ವ್ಯಪದೇಶಃ ಇತಿ । ಏವಮತ್ರಾಪಿ ಏತತ್ಸ್ಪಷ್ಟಂ ಸರ್ವಮಿತ್ಯಾದಿ । ಸಾದೃಶ್ಯಾಚ್ಚ ಏಕಸ್ತ್ರೀಜ್ಞಾನಾದನ್ಯ-ಸ್ತ್ರೀಜ್ಞಾನಮಿತಿ ।

57. ತದೇವ ಸಾದೃಶ್ಯಮತ್ರಾಪಿ ವಿವಕ್ಷಿತಮ್ 'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ ಇತ್ಯಾದಿನಾ । ಅನ್ಯಥಾ ಏಕಶಬ್ದಃ ಪಿಂಡಶಬ್ದಶ್ಚ ವ್ಯರ್ಥಃ ಸ್ಯಾತ್ । ಮೃದಾ ವಿಜ್ಞಾತಯಾ ಇತ್ಯೇತಾವತಾ ಪೂರ್ಣತ್ವಾತ್ । ನ ಹಿ ಏಕಮೃತ್ಪಿಂಡಾತ್ಮಕಾನಿ ಅನ್ಯಮೃನ್ಮಯಾನಿ । ಸಾದೃಶ್ಯ-ಮೇವ ತೇಷಾಮ್ ।

'ಯಥಾ ಸೋಮ್ಯ ಏಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್, ಯಥಾ ಸೋಮ್ಯ ಏಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್' ಇತ್ಯಾದಿಕಮಪಿ ವ್ಯರ್ಥಂ ಸ್ಯಾತ್ । ನ ಹಿ ಏಕಮಣ್ಯಾತ್ಮಕಮನ್ಯಲ್ಲೋಹಮಯಮ್ । ನ ಚ ಏಕನಖನಿಕೃಂತನಾತ್ಮಕಂ ಸರ್ವಂ ಕಾರ್ಷ್ಣಾಯಸಮ್ ।

ವಾಚಾರಂಭಣಶ್ರುತ್ಯರ್ಥಃ

58. 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್' ಇತ್ಯತ್ರ ಚ ವಾಚಾ ನಾಮ್ನಾಮ್ ಆರಂಭಣಂ ವಿಕಾರಃ, ಅವಿಕೃತಂ ನಿತ್ಯಂ ನಾಮಧೇಯಂ ಮೃತ್ತಿಕೇತ್ಯೇವ ಇತ್ಯೇತದ್ವಚನಂ ಸತ್ಯಮಿತಿ ಶ್ರುತ್ಯರ್ಥಃ ।

ನ ಚ ವಾಚಾರಂಭಣಶಬ್ದೋಽಪಿ ಮಿಥ್ಯಾತ್ವೇ ಪ್ರಸಿದ್ಧಃ । ವಾಚಾರಂಭಣಮಾತ್ರಮಿತಿ ಚ ಅಶ್ರುತಕಲ್ಪನಮ್ । ತಸ್ಮಿನ್ ಪಕ್ಷೇ ನಾಮಧೇಯಶಬ್ದಃ ಇತಿಶಬ್ದಶ್ಚ ವ್ಯರ್ಥಃ ಸ್ಯಾತ್ । ಅತೋ ನ ಕುತ್ರಾಪಿ ಜಗತೋ ಮಿಥ್ಯಾತ್ವಮುಚ್ಯತೇ ॥

ಜಗತ್ಸತ್ಯತ್ವೇ ಪ್ರಮಾಣವಚನಾನಿ

59. ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ ।

ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ । ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಮ್ । ಪ್ರಥಾನ್ವಸ್ಯ ಮಹತೋ ಮಹಾನಿ ಸತ್ಯಾಸತ್ಯಸ್ಯ ಕರಣಾನಿ ವೋಚಮ್

ಅನಾದ್ಯನಂತಂ ಜಗದೇತದೀದೃಕ್ ಪ್ರವರ್ತತೇ ನಾತ್ರ ವಿಚಾರ್ಯಮಸ್ತಿ ।
ತದನ್ಯಥಾ ಕ್ವಾಪಿ ಚ ಕಸ್ಯಚೇದಮಭೂತ್ ಪುರಾ ನಾಪಿ ತಥಾ ಭವಿಷ್ಯತ್ ॥
ಅಸತ್ಯಮಾಹುಃ ಜಗದೇತದಜ್ಞಾಃ ಶಕ್ತಿಂ ಹರೇಃ ಯೇ ನ ವಿದುಃ ಪರಾಂ ಹಿ ।
ಯಃ ಸತ್ಯರೂಪಂ ಜಗದೇತದೀದೃಕ್ ಸೃಷ್ಟ್ವಾತ್ತ್ವಭೂತ್
ಸೃಷ್ಟಿಕರ್ಮಾ ಮಹಾತ್ಮಾ ॥

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥
ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ಇತ್ಯಾದೇಶ್ಚ

'ಮಾಯಾಮಯಮ್' 'ಅನೃತಮ್' ಶಬ್ದಯೋಃ ಅರ್ಥಃ

60. ಅನಿತ್ಯತ್ವ-ವಿಕಾರಿತ್ವ-ಪಾರತಂತ್ರ್ಯಾದಿರೂಪತಃ ।
ಸ್ವಪ್ನಾದಿಸಾಮ್ಯಂ ಜಗತಃ ನ ತು ಬೋಧನಿವರ್ತ್ಯತಾ ॥
ಸರ್ವಜ್ಞಸ್ಯ ಯತೋ ವಿಷ್ಣೋಃ ಸರ್ವದೈವ ಪ್ರತೀಯತೇ ।
ಬೋಧಾಸಹಂ ತತೋ ನೈತತ್ ಕಿಂತ್ವಾಜ್ಞಾವಶಮಸ್ಯ ಹಿ ॥
ಇತಿ ಪರಮೋಪನಿಷದಿ

ಪ್ರಜ್ಞಾವಿನಿರ್ಮಿತಂ ಯಸ್ಮಾದತೋ ಮಾಯಾಮಯಂ ಜಗತ್ ।
ಅನೇನಾನುಗತಂ ಯಸ್ಮಾದನೃತಂ ತೇನ ಕಥ್ಯತೇ ॥
ಬೋಧಾನಿವರ್ತ್ಯಮಪಿ ತು ನಿತ್ಯಮೇವ ಪ್ರವಾಹತಃ ।
ಅ ಇತ್ಯುಕ್ತಃ ಪರೋ ದೇವಃ ತೇನ ಸತ್ಯಮಿದಂ ಜಗತ್ ॥

ತದಧೀನಸ್ವರೂಪತ್ವಾತ್ ಅಸತ್ಯಂ ತೇನ ಕಥ್ಯತೇ ।
ಸತ್ಯಸ್ಯ ಸತ್ಯಃ ಸ ವಿಭುರಿಂದ್ರಚಾಪಸ್ಯ ಸೂರ್ಯವತ್ ॥
ತಸ್ಯೋಪನಿಷತ್ ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮಿತಿ ಚ ।
ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।
ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾಽನಂತ ಕಥ್ಯತೇ ॥
ಪ್ರಕೃತಿಃ ಪ್ರಕೃಷ್ಟಕರಣಾದ್ ವಾಸನಾ ವಾಸಯೇದ್ಯತಃ ।
ಅ ಇತ್ಯುಕ್ತೋ ಹರಿಸ್ತಸ್ಯ ವಿದ್ಯಾಽವಿದ್ಯೇತಿ ಸಂಜ್ಞಿತಾ ॥
ಮಾಯೇತ್ಯುಕ್ತಾ ಪ್ರಕೃಷ್ಟತ್ವಾತ್ ಪ್ರಕೃಷ್ಟಂ ಚ ಮಯಾಭಿದಮ್ ।
ವಿಷ್ಣೋಃ ಪ್ರಜ್ಞಪ್ತಿರೇವೈಕಾ ಶಬ್ದೈರೇತೈರುದೀರ್ಯತೇ ॥
ಪ್ರಜ್ಞಪ್ತಿರೂಪೋ ಹಿ ಹರಿಃ ಸಾ ಚ ಸ್ವಾನಂದಲಕ್ಷಣಾ । ಇತಿ ಚ

**ನೇತಿ-ನೇತ್ಯಾದಿ ಶ್ರುತ್ಯರ್ಥಃ**

61. ಸರ್ವೇ ವೇದಾಃ ಹರೇರ್ಭೇದಂ ಸರ್ವಸ್ಮಾತ್ ಜ್ಞಾಪಯಂತಿ ಹಿ ।
ಭೇದಃ ಸ್ವಾತಂತ್ರ್ಯ ಸಾರ್ವಜ್ಞ್ಯ ಸರ್ವೈಶ್ವರ್ಯಾದಿಕಶ್ಚ ಸಃ ॥
ಸ್ವರೂಪಮೇವ ಭೇದೋಽಯಂ ವ್ಯಾವೃತ್ತಿಶ್ಚ ಸ್ವರೂಪತಾ ।
ಸರ್ವವ್ಯಾವೃತ್ತಯೇ ಯಸ್ಮಾತ್ ಸ್ವಶಬ್ದೋಽಯಂ ಪ್ರಯುಜ್ಯತೇ ॥
ಸರ್ವವ್ಯಾವೃತ್ತತಾಮೇವ ನೇತಿನೇತ್ಯಾದಿಕಾ ಶ್ರುತಿಃ ।
ವಿಷ್ಣೋರತೋ ವದೇದನ್ಯಾ ಅಪಿ ಸರ್ವಾ ನ ಸಂಶಯಃ ॥
ಇತಿ ನಾರಾಯಣಶ್ರುತಿಃ

**'ಅಹಂ ಬ್ರಹ್ಮಾಸ್ಮಿ' ಶ್ರುತ್ಯರ್ಥಃ**

62. 'ಅಹಂ ಬ್ರಹ್ಮಾಸ್ಮಿ' 'ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್' 'ಯೋಽಸಾವಾದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ' ಇತ್ಯಾದಿ ತು ಅಂತರ್ಯಾಮ್ಯಪೇಕ್ಷಯಾ । 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ' 'ಅ ಇತಿ ಬ್ರಹ್ಮ ತತ್ರಾಗತಮಹಮಿತಿ ತಸ್ಯೋಪನಿಷದಹಮ್' ಇತಿ

ಅಹಂ ನಾಮಾ ಹರಿರ್ನಿತ್ಯಮಹೇಯತ್ವಾತ್ ಪ್ರಕೀರ್ತಿತಃ ।
ತ್ವಂ ಚಾಸೌ ಪ್ರತಿಯೋಗಿತ್ವಾತ್ ಪರೋಕ್ಷತ್ವಾತ್ ಸ ಇತ್ಯಪಿ ॥
ಸರ್ವಾಂತರ್ಯಾಮಿಣಿ ಹರೌ ಅಸ್ಮಚ್ಛಬ್ದವಿಭಕ್ತಯಃ ।
ಯುಷ್ಮಚ್ಛಬ್ದಗತಾಶ್ಚೈವ ಸರ್ವಾಃ ತಚ್ಛಬ್ದಗಾ ಅಪಿ ॥

ಸರ್ವಶಬ್ದಗತಾಶ್ಚೈವ ವಚನಾನ್ಯಖಿಲಾನ್ಯಪಿ ।
ಸ್ವತಂತ್ರತ್ವಾತ್ ಪ್ರವರ್ತಂತೇ ವ್ಯಾವೃತ್ತ್ಯೇಽಪ್ಯಖಿಲಾತ್ ಸದಾ ॥
ತತ್ಸಂಬಂಧಾತ್ತು ಜೀವೇಷು ತತ್ಸಂಬಂಧಾದಚಿತ್ಸ್ವಪಿ ।
ವರ್ತಂತ ಉಪಚಾರೇಣ ತಿಙ್ಪದಾನ್ಯಖಿಲಾನ್ಯಪಿ ॥
ತಸ್ಮಾತ್ ಸರ್ವಗತೋ ವಿಷ್ಣುರೇಕೋ ಭಿಕ್ಷ್ವ ತತೋ ಬಹುಃ ।

ಇತಿ ನಾರಾಯಣಶ್ರುತಿಃ

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಮ್ ॥

ಇತಿ ಭಗವದ್ವಚನಮ್ ।

ಭೇದಸತ್ಯತ್ವೇ ಪ್ರಮಾಣವಚನಾನಿ

63. ನ ಚ ಅಸತ್ಯೋ ಭೇದಃ । 'ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ', 'ಸತ್ಯಃ ಸೋಽಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ', 'ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ । ಮೈವಾರುವಣ್ಯೋ ಮೈವಾರುವಣ್ಯೋ ಮೈವಾರುವಣ್ಯಃ', 'ಆತ್ಮಾ ಹಿ ಪರಮಸ್ವತಂತ್ರಃ ಸರ್ವವಿತ್ ಸರ್ವಶಕ್ತಿಃ ಪರಮಸುಖಃ ಪರಮಃ, ಜೀವಸ್ತು ತದ್ವಶಃ ಅಲ್ಪಜ್ಞಃ ಅಲ್ಪಶಕ್ತಿಃ ಆರ್ತಃ ಅಲ್ಪಕಃ' ಇತ್ಯಾದಿಶ್ರುತಿಭ್ಯಃ ।

ಜೀವೇಶ್ವರ ಭೇದಃ ನ ವ್ಯಾವಹಾರಿಕಃ

64. ನ ಚ ಅವಾಂತರಸತ್ಯತ್ವಮಿದಂ ।
ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ।
ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ
ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ ಇಮಾನ್ ಲೋಕಾನ್
ಕಾಮಾನ್ನೀ ಕಾಮರೂಪೀ ಅನುಸಂಚರನ್ ಏತತ್ ಸಾಮಗಾಯನ್ನಾಸ್ತೇ
ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್
ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಮ್
ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ॥
ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿ-
ನಿಷ್ಪದ್ಯತೇ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್
ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ಅಜ್ಞಾತಿಭಿರ್ವಾ

‘ಯತ್ರ ತು ಅಸ್ಯ ಆತ್ಮೈವ ಅಭೂತ್’ ಇತಿ ಶ್ರುತ್ಯರ್ಥಃ

‘ಯತ್ರ ತು ಅಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ತತ್ ಕೇನ ಕಂ ಜಿಘ್ರೇತ್ ತತ್ ಕೇನ ಕಂ ವಿಜಾನೀಯಾತ್, ಯೇನೇದಂ ಸರ್ವಂ ವಿಜಾನಾತಿ ತಂ ಚ ಕೇನ ವಿಜಾನೀಯಾತ್ ವಿಜ್ಞಾತಾರಮರೇ ಕೇನ ವಿಜಾನೀಯಾತ್’

‘ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ’

‘ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ’

‘ಅಮೃತಸ್ಯೈಷ ಸೇತುಃ’

ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ ।
ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ
ಈಶಮಾಶ್ರಿತ್ಯ ತಿಷ್ಠಂತಿ ಮುಕ್ತಾಃ ಸಂಸಾರಸಾಗರಾತ್ ।
ಯಥೇಷ್ಟಭೋಗಭೋಕ್ತಾರಃ ಬ್ರಹ್ಮಾಂತಾ ಉತ್ತರೋತ್ತರಮ್ ॥
ಇತಿ ಮೋಕ್ಷಾನಂತರಂ ಭೇದಶ್ರುತಿಭ್ಯಃ ।
ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।

ಇತಿ ಭಗವದ್ವಚನಮ್ ।

ಓಂ ಜಗದ್ವ್ಯಾಪಾರವರ್ಜ್ಯಮ್ ಓಂ, ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ ಇತ್ಯಾದಿ ಚ ।

65. ‘ಅವಿನಾಶೀ ವಾ ಅರೇಽಯಮಾತ್ಮಾಽನುಚ್ಛಿತ್ತಿಧರ್ಮಾ’ ಇತಿ ತದ್ಧರ್ಮಾಣಾಮಪಿ ಅನುಚ್ಛಿತ್ತೇಃ ಪ್ರಸ್ತುತತ್ವಾತ್ ।

‘ಅತ್ರೈವ ಮಾ ಭಗವಾನ್ ಮೋಹಾಂತಮಾಪಿಪತ್ ನ ಪ್ರೇತ್ಯ ಸಂಜ್ಞಾಸ್ತಿ’ ಇತಿ ಸಂಜ್ಞಾನಾಶಸ್ಯ ದೋಷತ್ವೇನೋಕ್ತತ್ವಾತ್ ।

‘ಯತ್ರ ತು ಅಸ್ಯ ಸರ್ವಮಾತ್ಮೈವಾಭೂತ್ ತತ್‌ಕೇನ ಕಂ ಪಶ್ಯೇತ್’ ಇತಿ ಹಿ ಆಕ್ಷೇಪ ಏವ । ನ ಹಿ ಭೋಗಾಭಾವಃ, ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ವಿಜ್ಞಾತುಃ ಅವಿಜ್ಞಾನಂ ಚ ಅಪೇಕ್ಷಿತಮ್ ।

ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ ।
ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ॥

ಇತಿ ಪರಮಶ್ರುತಿಃ ।

ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್ ।

ಇತಿ ಮೋಕ್ಷಧರ್ಮೇ ।

'ಯದ್ವೈತಂ ನ ಪಶ್ಯತಿ' 'ಕರ್ಮಾಣಿ ವಿಜ್ಞಾನಮಯಶ್ಚ' ಇತ್ಯಾದಿ ಶ್ರುತ್ಯರ್ಥಃ

66. 'ನತು ತದ್ದ್ವಿತೀಯಮಸ್ತಿ' ಇತಿ ಚ ಯತ್ ತದ್ ಬ್ರಹ್ಮ ದ್ವೈತತ್ವೇನ ನ ಪಶ್ಯತಿ ತದೇವ ದ್ವಿತೀಯಂ ನೇತ್ಯಾಹ । 'ಯತ್ರ ತೋಽನ್ಯದ್ವಿಭಕ್ತತ್ವೇನೈವ ಪಶ್ಯೇತ್' ಇತಿ ವಾಕ್ಯಶೇಷಾತ್ । ನ ಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪೋ ವಿದ್ಯತೇ ಇತಿ ಹೇತೋಶ್ಚ.

'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯತ್ರಾಪಿ ಏಕೀಭಾವೋ ಮತ್ಯೈಕ್ಯಮ್, ಕ್ಷೀರಃ ಬ್ಧ್ಯಾದಿಸ್ಥಿತ ತತ್ತದ್ರೂಪಾಪೇಕ್ಷಯಾ ಸ್ಥಾನೈಕ್ಯಂ ವಾ । 'ಕಾಮೇನ ಮೇ ಕಾಮ ಆಗಾದ್ ಹೃದಯಂ ಹೃತ್ಯೋಃ । ಯದಮುಷಾಮದಃ ಪ್ರಿಯಂ ತದೈತೂಪಮಾನುಭಿ' 'ಬ್ರಹ್ಮಮತ್ಯನುಕೂಲಾ ಮೇ ಗತಿರ್ಮುಕ್ತೌ ಭವಿಷ್ಯತಿ । ಅತಃ ಪ್ರಯೋಽನುಕೂಲತ್ವಮಿದಾನೀಮಪಿ ಮೇ ಸ್ಥಿತಮ್' 'ಯೇನ ಆಕ್ರಮಂತಿ ಋಷಯೋ ಹಿ ಅಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್' 'ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ' ಇತ್ಯಾದಿಶ್ರುತಿಭ್ಯಃ ।

ಸ್ವರೂಪೈಕ್ಯಾಭಿಪ್ರಾಯೇ 'ಕರ್ಮಾಣಿ ವಿಜ್ಞಾನಮಯಶ್ಚೇ'ತಿ ನ ಯುಜ್ಯತೇ । ನ ಹಿ ತತ್ಪಕ್ಷೇಽಪಿ ಕರ್ಮಣಾ ಬ್ರಹ್ಮೈಕ್ಯಂ ಮುಕ್ತೌ ಅಸ್ತಿ । ನಿವೃತ್ತ್ಯಭಿಪ್ರಾಯೇ ಚ ಪಂಚದಶಕಲಾನಾಮಪಿ ಸಮತ್ವಾತ್ 'ಗತಾಃ ಕಲಾಃ ಪಂಚದಶಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು' ಇತ್ಯನ್ಯಾಸಾಂ ಕಲಾನಾಂ ಗಮನಮುಕ್ತ್ವಾ ಕರ್ಮಣಾಂ ವಿಜ್ಞಾನಾತ್ಮನಶ್ಚ ಏಕೀಭಾವಕಥನಂ ವ್ಯರ್ಥಂ ಸ್ಯಾತ್ । ವಿಶೇಷಾಭಾವಾತ್ ।

'ಏಕೀಭವಂತಿ' ಇತ್ಯಸ್ಯ ಸ್ವರೂಪೈಕ್ಯಪ್ರಾಪ್ತಿಃ ನ ಅರ್ಥಃ

67 ನ ಚ ಜ್ಞಾನನಿವೃತ್ತಸ್ಯ ರಜತಸ್ಯ ಶುಕ್ತ್ಯೈಕೀಭಾವವ್ಯವಹಾರೋಽಸ್ತಿ । 'ಪರೇಽವ್ಯಯೇ' ಇತ್ಯಧಿಕರಣತ್ವಕಥನಂ ಚ ಭೇದಜ್ಞಾಪಕಮ್ । ಅನ್ಯಥಾ ಪರ ಏವ ಭವಂತೀತಿ ನಿರ್ದೇಶಃ ಸ್ಯಾತ್ ।

ಜೀವಸ್ಯ ಪರಮೈಕ್ಯಂ ತು ಬುದ್ಧಿಸಾರೂಪ್ಯಮೇವ ತು ।
ಏಕಸ್ಥಾನನಿವಾಸೋ ವಾ ವ್ಯಕ್ತಿಸ್ಥಾನಮಪೇಕ್ಷ್ಯ ಸಃ ॥
ನ ಸ್ವರೂಪೈಕ್ಯತಾ ತಸ್ಯ ಮುಕ್ತಸ್ಯಾಪಿ ವಿರೂಪತಃ ।
ಸ್ವಾತಂತ್ರ್ಯಪೂರ್ಣತೇಽಲ್ಪತ್ವಪಾರತಂತ್ರ್ಯೇ ವಿರೂಪತೇ ।

ಇತಿ ಪರಮಶ್ರುತಿಃ ।

'ಬ್ರಹ್ಮವಿದ್ ಬ್ರಹ್ಮೈವ ಭವತಿ' ಇತಿ ಶ್ರುತ್ಯರ್ಥಃ

68. 'ಬ್ರಹ್ಮ ವೇದ ಬ್ರಹ್ಮೈವ ಭವತಿ' ಇತ್ಯಾದಿ ಚ 'ಸಂಪೂಜ್ಯ ಬ್ರಾಹ್ಮಣಂ ಭಕ್ತ್ಯಾ ಶೂದ್ರೋಽಪಿ ಬ್ರಾಹ್ಮಣೋ ಭವೇತ್' । ಇತಿವತ್ ಬೃಂಹಿತೋ ಭವತೀತ್ಯರ್ಥಃ । ನಹಿ ಬ್ರಾಹ್ಮಣಪೂಜಕಃ ಸ ಏವ ಬ್ರಾಹ್ಮಣೋ ಭವತಿ ।

ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಣಿ ಮುಕ್ತಿಗಾಃ ।
ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ ॥
ತಸ್ಮಾತ್ ನ ಮುಕ್ತಾಃ ನ ಚ ಸಾ ನ ಕ್ವಚಿದ್ ವಿಷ್ಣುವೈಭವಮ್
ಪ್ರಾಪ್ನುವಂತಿ ಸ ಏವೈಕಃ ಸ್ವತಂತ್ರಃ ಪೂರ್ಣಷಡ್ಗುಣಃ । ಇತಿ ಪರಮಶ್ರುತಿಃ
'ಪರೋ ಮ[illegible]ತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ'
ಬ್ರಹ್ಮೇಶಾನಾದಿಭಿಃ ದೇವೈಃ ಯತ್ಪ್ರಾಪ್ತುಂ ನೈವ ಶಕ್ಯತೇ ।
ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇಃ ॥ ಇತಿ ಚ
ಯಥಾಽಪಿಯಂತಿ ತೇಜಾಂಸಿ ಮಹಾತೇಜಸಿ ಭಾಸ್ವರೇ ।
ಪೃಥಕ್ ಪೃಥಕ್ ಸ್ಥಿತಾನ್ಯಸ್ಮಿನ್ ಸ್ವರೂಪೈರಪಿ ಸರ್ವಶಃ ॥
ಪರೇ ಬ್ರಹ್ಮಣಿ ಜೀವಾಖ್ಯಬ್ರಹ್ಮಾಣ್ಯಪ್ಯಪಿಯಂತಿ ಹಿ ।
ಮುಕ್ತೌ ಪೃಥಕ್ ಸ್ಥಿತಾನ್ಯೇವ ತದನ್ಯೇಷಾಮದರ್ಶನಮ್ ॥
ಅಪ್ಯಯೋಽಯಂ ಸಮುದ್ದಿಷ್ಟೋ ನ ಸ್ವರೂಪೈಕತಾ ಕ್ವಚಿತ್ ।
ಇತಿ ನಾರಾಯಣಶ್ರುತಿಃ

ಅತಃ ಸರ್ವಾಗಮವಿರುದ್ಧಮೇವ ಜೀವೇಶ್ವರೈಕ್ಯಮ್ ।

ಏಕಜೀವವಾದನಿರಾಸಃ

69. ತಥೈವ ಸರ್ವಯುಕ್ತಿವಿರುದ್ಧಂ ಚ । ನ ತಾವದೇಕಜೀವವಾದೋ ಯುಜ್ಯತೇ । ಏಕಾಜ್ಞಾನಪರಿಕಲ್ಪಿತತ್ವೇ ಚ ಸರ್ವಸ್ಯ ಸರ್ವಮಿದಂ ಪರಿಕಲ್ಪಿತಮಿತಿ ಜಾನತಃ ಪುನಃ ಶಿಷ್ಯಾದಿಬೋಧನಂ ನ ಯುಜ್ಯತೇ । ನ ಹಿ ಸ್ವಪ್ನೋಽಯಮಿತಿ ನಿಶ್ಚಿತ್ಯ ಸ್ವಾಪ್ನಪುತ್ರದಾರಾರ್ಥಂ ಯತತೇ । ಸ್ವಪ್ನೇ ತು ಸ್ವಾಪ್ನತ್ವಾಜ್ಞಾನಾದೇವ ಯತತೇ । ನ ಚ ಬಹೂನಾಂ ದೃಶ್ಯಮಾನತ್ವಾತ್ ಅಸ್ಯ ಅಜ್ಞಾನಪರಿಕಲ್ಪಿತಮಿದ-ಮಿತಿ ನಿಶ್ಚಯೋ ಯುಜ್ಯತೇ । ಸ್ವಪ್ನೇ ತು ಪ್ರಬೋಧಾನಂತರಮೇಕಸ್ಯ ಅವಶಿಷ್ಟ-ತ್ವಾತ್ ನಿಶ್ಚಯಃ । ನ ಚಾತ್ರ ತಥಾಸ್ತಿ । ತಸ್ಯ ತಸ್ಯ ತಥಾ ಪ್ರತಿಪತ್ತವ್ಯಮಿತ್ಯಂಗೀ-ಕಾರೇ ವಸ್ತುನಿ ವಿಕಲ್ಪಾಸಂಭವಾತ್ ಅಕಲ್ಪಿತಮಿತ್ಯೇವ ಸ್ಯಾತ್ । ನ ಚ ತಥಾ ಪ್ರತಿಪತ್ತವ್ಯಮಿತ್ಯತ್ರ ಪ್ರಮಾಣಮಸ್ತಿ ।

70. ಶಿಷ್ಯಾಜ್ಞಾನಪರಿಕಲ್ಪಿತಮಿತ್ಯಂಗೀಕಾರೇ ತಸ್ಯೈವ ಆಚಾರ್ಯಭಾವೇ ಸ್ವಯಮೇವ ಕಲ್ಪಿತೋ ಭವತೀತಿ ಸಮ್ಯಗ್ ಗ್ರಂಥಾಧಿಗಮಸ್ಯೈವ ಅನರ್ಥ-ಹೇತುತ್ವಂ ಸ್ಯಾತ್ । ನ ಚ ಕಸ್ಯಚಿತ್ ಮುಕ್ತಿಃ । ಗ್ರಂಥಾಧಿಗಮೇ ತಸ್ಯೈವ ಶಿಷ್ಯಾಜ್ಞಾನಪರಿಕಲ್ಪಿತತ್ವಪ್ರಾಪ್ತೇಃ ।

ಸ ಚ ಏಕಜೀವೋ ಯದಿ ಭೇದವಾದೀ ಭವತಿ ತಸ್ಯ ತತ್ರೈವ ದಾರ್ಢ್ಯಾತ್ ನ ಕದಾಚಿತ್ ಭೇದನಿವೃತ್ತಿರಿತಿ ನ ಕಸ್ಯಾಪಿ ಮುಕ್ತಿಃ ಸ್ಯಾತ್ । ತೇನ ಯಥಾ ಕಲ್ಪಿತಂ ತಥೈವ ಭವತೀತಿ ತೇನ ಏಕಜೀವವಾದಿನಾಂ ನಿತ್ಯನಿರಯಕಲ್ಪನೇ ಸ ಏವ ಸ್ಯಾತ್ । ನ ಚ ಏಕಜೀವಾಜ್ಞಾನಪರಿಕಲ್ಪಿತಂ ಸಮಸ್ತಂ ಇತ್ಯತ್ರ ಕಿಂಚಿತ್ ಮಾನಮ್ ।

'ಪ್ರಪಂಚೋ ಯದಿ ವಿದ್ಯೇತ' ಇತ್ಯಾದಿ ಶ್ರುತ್ಯರ್ಥಃ

71. ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।
ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥

ಇತ್ಯಸ್ಯ ಚ ಅಯಮರ್ಥಃ–ಪ್ರಪಂಚೋ ಯದಿ ವಿದ್ಯೇತ ಭವೇತ ಉತ್ಪದ್ಯೇತ ತರ್ಹಿ ನಿವರ್ತೇತ, ನ ಚ ನಿವರ್ತತೇ, ತಸ್ಮಾತ್ ಅನಾದಿರೇವಾಯಮ್ । ಪ್ರಕೃಷ್ಟಃ ಪಂಚವಿಧಃ ಭೇದಃ ಪ್ರಪಂಚಃ । ನ ಚ ಅವಿದ್ಯಮಾನೋಽಯಂ ಮಾಯಾಮಾತ್ರ-ತ್ವಾತ್। ಮಾಯೇತಿ ಭಗವತ್ಪ್ರಜ್ಞಾ ಸೈವ ಮಾನತ್ರಾಣಕರ್ತ್ರೀ ಯಸ್ಯ ತನ್ಮಾಯಾ-ಮಾತ್ರಮ್ । ಪರಮೇಶ್ವರೇಣ ಜ್ಞಾತತ್ವಾತ್ ರಕ್ಷಿತತ್ವಾಚ್ಚ ನ ದ್ವೈತಂ ಭ್ರಾಂತಿ-ಕಲ್ಪಿತಮಿತ್ಯರ್ಥಃ । ನ ಹಿ ಈಶ್ವರಸ್ಯ ಭ್ರಾಂತಿಃ । ತರ್ಹಿ ಅದ್ವೈತಃ ಸರ್ವಭಾವಾನಾ-ಮಿತಿ ವ್ಯಪದೇಶಃ ಕಥಮಿತ್ಯತಃ ಆಹ 'ಅದ್ವೈತಂ ಪರಮಾರ್ಥತಃ' ಇತಿ । ಪರಮಾರ್ಥಾಪೇಕ್ಷಯಾ ಹಿ ಅದ್ವೈತಂ ಸರ್ವಸ್ಮಾದುತ್ತಮೋಽರ್ಥಃ ಸ ಏಕ ಏವೇತ್ಯರ್ಥಃ । ಅನ್ಯಥಾ ಹಿ 'ಅದ್ವೈತಃ ಸರ್ವಭಾವಾನಾಮಿ'ತಿ ವ್ಯರ್ಥಂ ಸ್ಯಾತ್ । ಸರ್ವಭಾವಾನಾಂ ಮಧ್ಯೇ ತಸ್ಯ ಏಕಸ್ಯೈವ ಅದ್ವೈತತ್ವಮಿತ್ಯುಕ್ತೇ ಸಮಾಧಿಕ-ರಾಹಿತ್ಯಮೇವ ಉಕ್ತಂ ಸ್ಯಾತ್ । ಅನ್ಯೇಷಾಂ ಸರ್ವಭಾವಾನಾಂ ಚ ಸಮಾಧಿಕ-ಭಾವಃ ॥

72. 'ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್' ಇತಿವಾಕ್ಯ-ಶೇಷಾಚ್ಚ ನ ಕಲ್ಪಿತತ್ವಮಸ್ಯೇತಿ ಜ್ಞಾಯತೇ । ನಿವರ್ತತೇ ಇತ್ಯಂಗೀಕಾರೇ 'ನಿವರ್ತೇತ' 'ವಿದ್ಯೇತ' ಇತಿ ಚ ಪ್ರಸಂಗರೂಪೇಣ ಕಥನಂ ಯದಿ ಶಬ್ದಾ ಚ ನ ಯುಜ್ಯಂತೇ । 'ವಿದ್ಯೇತ' ಇತ್ಯಸ್ಯ ಚ ಉತ್ಪತ್ತ್ಯರ್ಥಾನಂಗೀಕಾರೇ ಯದ್ಯದಸ್ತಿ ತತ್ತನ್ನಿವರ್ತತೇ ಇತಿ ವ್ಯಾಪ್ತ್ಯಭಾವಾನ್ನಿವರ್ತೇತ ಇತಿ ನ ಯುಜ್ಯತೇ । ಅತಃ

ಪ್ರಪಂಚಸ್ಯ ಅನಾದಿಸತ್ಯತ್ವಪರಮಿದಂ ವಾಕ್ಯಮ್ । ಅತಃ 'ಉಪದೇಶಾದಯಂ ವಾದೋ ಅಜ್ಞಾತೇ ದ್ವೈತಂ ನ ವಿದ್ಯತೇ' ಇತ್ಯಾಹ । ಅಜ್ಞಾತ ಏವ ದ್ವೈತಂ ನ ವಿದ್ಯತೇ । ಅಜ್ಞಾನಿನಾಂ ಪಕ್ಷ ಏವ ದ್ವೈತಂ ನ ವಿದ್ಯತೇ ಇತ್ಯರ್ಥಃ ।

ಪಂಚಭೇದನಿರೂಪಣಮ್

ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ ।
ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ ॥
ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ ।
ಸೋಽಯಂ ಸತ್ಯೋ ಹಿ ಅನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ ॥
ನ ಚ ನಾಶಂ ಪ್ರಯಾತ್ಯೇಷ ನ ಚಾಸೌ ಭ್ರಾಂತಿಕಲ್ಪಿತಃ ।
ಕಲ್ಪಿತಶ್ಚೇನ್ನಿವರ್ತೇತ ನ ಚಾಸೌ ವಿನಿವರ್ತತೇ ॥
ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತಮ್ ।
ಮತಂ ಹಿ ಜ್ಞಾನಿನಾಮೇತನ್ಮಿತಂ ತ್ರಾತಂ ಚ ವಿಷ್ಣುನಾ ॥
ತಸ್ಮಾತ್ ಸತ್ಯಮಿತಿ ಪ್ರೋಕ್ತಂ ಪರಮೋ ಹರಿರೇವ ತು । ಇತಿ ಪರಮಶ್ರುತಿಃ

ನೈರಾತ್ಮ್ಯವಾದನಿರಾಸಃ

73. ಮೈತ್ರೇಯೀಶಾಖಾಯಾಂ ಚ 'ಅಥ ಜ್ಞಾನೋಪಸರ್ಗಾಃ' ಇತ್ಯುಕ್ತ್ವಾ 'ಅಥ ಯೇಽಚ ಅನ್ಯೇ ಮಿಥ್ಯಾ ತರ್ಕೈಃ ದೃಷ್ಟಾಂತೈಃ ಕುಹಕೇಂದ್ರಜಾಲೈಃ ವೈದಿಕೇಷು ಪರಿಸ್ಥಾತುಮಿಚ್ಛಂತಿ ತೈಃ ಸಹ ನ ಸಂವಸೇತ್ ಪ್ರಾಕಾಶ್ಯಾ ಹಿ ಏತೇ ತಸ್ಕರಾಃ ಅಸ್ವರ್ಗ್ಯಾ' ಇತ್ಯಾಹ

ನೈರಾತ್ಮ್ಯವಾದಕುಹಕೈಃ ಮಿಥ್ಯಾದೃಷ್ಟಾಂತಹೇತುಭಿಃ ।
ಭ್ರಾಮ್ಯನ್ ಲೋಕೋ ನ ಜಾನಾತಿ ವೇದವಿದ್ಯಾಂತರಂ ತು ಯತ್ ॥ ಇತಿ
ಆತ್ಮಸಂಬಂಧಿ ಕಿಮಪಿ ನಾಸ್ತೀತಿ ವಾದಃ ನೈರಾತ್ಮ್ಯವಾದಃ ।

ಅಧಿಷ್ಠಾನಪ್ರಧಾನೇ ವಿನಾ ನ ಭ್ರಾಂತಿಃ ಸಂಭವತಿ

74. ಭ್ರಾಂತಿಕಲ್ಪಿತತ್ವೇ ಚ ಜಗತಃ ಸತ್ಯಂ ಜಗದ್ದ್ವಯಮಪೇಕ್ಷಿತಮ್ । ನ ಹಿ ಸತ್ಯಶುಕ್ತೇಃ, ಸತ್ಯರಜತಸ್ಯ, ತಯೋಃ ಸಾದೃಶ್ಯಸ್ಯ ಚ ಅಭಾವೇ ಭ್ರಾಂತಿರ್ಭವತಿ।

ಸ್ವಪ್ನೇಽಪಿ ವಾಸನಾರೂಪಂ ಸತ್ಯಮೇವ ಜಗತ್ ಮನಸಿ ಸ್ಥಿತಂ ಬಹಿಷ್ಠತ್ವೇನ ದೃಶ್ಯತೇ । ದೇಹಾತ್ಮನೋರಪಿ ಏಕದೇಶಸ್ಥತ್ವಾದಿ ಸಾದೃಶ್ಯಮಸ್ತ್ಯೇವ । 'ಶಂಖಃ ಪೀತಃ' 'ನಭೋ ನೀಲಮ್' ಇತ್ಯಾದಿಷ್ವಪಿ ಪೀತಾದಯೋ ಅನ್ಯತ್ರ ವಿದ್ಯಂತ

ಏವ । ತತ್ಸಾದೃಶ್ಯಂ ಚ ದ್ರವತ್ವಾದಿಕಂ ಕಿಂಚಿತ್ ಶಂಖಾದೀನಾಂ ಚ ಅಸ್ತ್ಯೇವ । ಅತೋ ನ ಕುತ್ರಾಪಿ ಸದೃಶಸತ್ಯವಸ್ತುದ್ವಯಂ ವಿನಾ ಭ್ರಮಃ ।

75. ನ ಚ ಆತ್ಮನಿ ಅನಾತ್ಮಭ್ರಮಃ ಕ್ವಾಪಿ ದೃಷ್ಟಃ । ನ ಹಿ ಕಶ್ಚಿದ್ 'ಅಹಂ ಅಹಂ ನ ಭವಾಮಿ' ಇತಿ ಭ್ರಾಂತೋ ದೃಶ್ಯತೇ । ಆತ್ಮನಿ ಅನಾತ್ಮಭ್ರಮ ಏವಾಯಂ ಪ್ರಪಂಚ ಇತಿ ತೈರುಚ್ಯತೇ । ತಂ ವಿನೈವ ಅನಾತ್ಮನಿ ಆತ್ಮಭ್ರಮ-ಕಲ್ಪನೇ ಅನಾತ್ಮನಃ ಸತ್ಯತ್ವಂ ಸ್ಯಾತ್ । ತದಾ ಚ ಅದ್ವಿತೀಯತ್ವಕಲ್ಪನೇ ಅನಾತ್ಮೈವ ಅಸ್ತಿ ನ ಆತ್ಮೇತಿ ಭವತಿ

ಆತ್ಮಾಜ್ಞಾನಾತ್ಮಕತ್ವೇ ಚ ಜಗತಃ ಆತ್ಮನೋ ಭಿನ್ನತ್ವೇನ ನ ದೃಶ್ಯೇತ । ನ ಹಿ ಶುಕ್ತೇಃ ಭೇದೇನ ರಜತಂ ದೃಶ್ಯತೇ ಭ್ರಾಂತೌ । ನ ಚ ಏಕಮೇವ ಯುಗಪದ್ ಬಹುಧಾ ದೃಶ್ಯತೇ ಭ್ರಾಂತೌ । ನ ಚ ಆತ್ಮನಿ ಭೇದಭ್ರಮಃ ಕ್ವಾಪಿ ದೃಷ್ಟಃ ।

ನ ಚ ಕುತ್ರಾಪಿ ಮಿಥ್ಯೋಪಾಧಿಕೃತೋ ಭೇದೋ ದೃಷ್ಟಃ । ನ ಚ ಜ್ಞಾನಾಜ್ಞಾನಯೋರಪಿ ಮಿಥ್ಯಾಕಲ್ಪಿತತ್ವಂ ದೃಷ್ಟಮ್ । ತದ್ವಿಷಯಸ್ಯೈವ ಅನ್ಯಥಾತ್ವಂ ಭ್ರಾಂತೌ । ಏವಮಾದ್ಯನಂತಯುಕ್ತಿವಿರುದ್ಧೋऽಯಂ ಪಕ್ಷಃ । ಗ್ರಂಥಬಹುತ್ವಂ ಸ್ಯಾದಿತ್ಯೇವೋಪರಮ್ಯತೇ ॥

ಬಹುಜೀವವಾದೇಽಪಿ ಏತೇ ದೋಷಾಃ

76. ನ ಚ ಸತ್ಯತ್ವಾಂಗೀಕಾರೇ ಕಶ್ಚಿದ್ ದೋಷಃ । ಬಹುಜೀವವಾದಿ-ಪಕ್ಷೇऽಪಿ ಭೇದಸ್ಯ ಮಿಥ್ಯಾತ್ವಾಂಗೀಕಾರೇ ಏತೇ ದೋಷಾಃ ಭವಂತ್ಯೇವ । ಮಿಥ್ಯೋಪಾಧಿಕೃತಂ ಹಿ ತೇಷಾಮಪಿ ಬಹುತ್ವಮ್ । ನ ಚ ಮಿಥ್ಯೋಪಾಧಿ-ಕೃತೋ ಭೇದಃ ಕ್ವಾಪಿ ದೃಷ್ಟಃ । ಆತ್ಮನಿ ಅನಾತ್ಮಕಲ್ಪನಾರೂಪತ್ವಾತ್ ಮಿಥ್ಯೋ-ಪಾಧಿರೇವ ನ ಯುಜ್ಯತೇ ।

ಮಾಯಾಮಯೀ ಸೃಷ್ಟಿರಪಿ ತತ್ಸದೃಶಸ್ಯ ಅನ್ಯಸ್ಯ ವಿದ್ಯಮಾನತ್ವ ಏವ ದೃಷ್ಟಾ । ದ್ರವ್ಯತ್ವಾದಿಸಾದೃಶ್ಯಯುತಂ ಕಿಂಚಿದಧಿಷ್ಠಾನಮಾಶ್ರಿತ್ಯೈವ ಚ ।

ಅಧಿಷ್ಠಾನಂ ಚ ಸದೃಶಂ ತಥ್ಯವಸ್ತುದ್ವಯಂ ವಿನಾ ।
ನ ಭ್ರಾಂತಿರ್ಭವತಿ ಕ್ವಾಪಿ ಸ್ವಪ್ನಮಾಯಾದಿಕೇಷ್ವಪಿ ॥
ಮಾನಸ್ಯಾಂ ವಾಸನಾಯಾಂ ತು ಬಹಿರ್ವಸ್ತುತ್ವಕಲ್ಪನಮ್ ।
ಸ್ವಾಪ್ನೇ ಭ್ರಮಶ್ಚ ಮಾಯಾಯಾಂ ಕರ್ತೃದೇಹಾದಿವಸ್ತುಷು ॥
ಚತುರಂಗಬಲತ್ವಾದಿಕಲ್ಪನಂ ಭ್ರಮ ಇಷ್ಯತೇ ।
ನ ಭ್ರಾಂತಿಕಲ್ಪಿತಂ ವಿಶ್ವಮತೋ ವಿಷ್ಣುಬಲಾಶ್ರಯಮ್ ॥

ಇತಿ ಬ್ರಹ್ಮವೈವರ್ತೇ

ನ ಚ ಮಾಯಾವಿನಾ ಮಾಯಾ ದೃಶ್ಯತೇ ವಿಶ್ವಮೀಶ್ವರಃ ।
ಸದಾ ಪಶ್ಯತಿ ತೇನೇದಂ ನ ಮಾಯೇತ್ಯವಧಾರ್ಯತಾಮ್ ॥
ಅಪರೋಕ್ಷದೃಶೋ ಮಿಥ್ಯಾದರ್ಶನಂ ನ ಕ್ವಚಿದ್ಭವೇತ್ ।
ಸರ್ವಾಪರೋಕ್ಷವದ್ವಿಷ್ಣುಃ ವಿಶ್ವದೃಕ್ ತನ್ನ ತನ್ಮೃಷಾ ॥

'ಬ್ರಹ್ಮಣಃ ಸತ್ಯೋಪಾಧಿಸಂಬಂಧೇನ ಬಹುಜೀವಭಾವಃ' ಇತಿ ಮತನಿರಾಸಃ

77. ಯದಿ ಚ ಏಕಮೇವ ಬ್ರಹ್ಮ ಉಪಾಧಿಭೇದಾತ್ ಸಂಸರತಿ ಮುಚ್ಯತೇ ಚ ತದಾ ಸಂಸಾರಿಣಾಂ ಸರ್ವದಾ ವಿದ್ಯಮಾನತ್ವಾತ್ ಸರ್ವದಾ ಸಂಸಾರೀ ಏವ ಬ್ರಹ್ಮ ಅತಃ ತದ್ಪ್ರಾಪ್ತ್ಯೋಽಪಿ ನ ಮುಕ್ತಿಃ ಸರ್ವದಾ ಉಪಾಧಿಸಂಬಂಧತ್ವಾತ್ ತಸ್ಯ। ನ ಚ ಶುದ್ಧಸ್ಯ ನ ಉಪಾಧಿಸಂಬಂಧಃ ಇತಿ ವಾಚ್ಯಮ್ । ಉಪಾಧಿಸಂಬಂಧಸ್ಯ ಉಪಾಧಿಸಂಬಂಧಕಲ್ಪನೇ ಅನವಸ್ಥಾಪ್ರಸಂಗಾತ್ । ನ ಚ ತೇನೈವ ಸಂಬಂಧೇನ ಸಂಬದ್ಧಸ್ಯ ಆತ್ಮಾಶ್ರಯಪ್ರಸಂಗಾತ್ ।

'ಬ್ರಹ್ಮಣಃ ಮಿಥ್ಯೋಪಾಧಿಸಂಬಂಧೇನ ಬಹುಜೀವಭಾವಃ' ಇತಿ ವಾದನಿರಾಸಃ

ಇತಶ್ಚ ಮಿಥ್ಯೋಪಾಧಿಃ ನ ಯುಜ್ಯತೇ । ಅಜ್ಞಾನಸಿದ್ಧ್ಯಾ ಮಿಥ್ಯೋಪಾಧಿಸಿದ್ಧಿಃ ಅಜ್ಞಾನಂ ವಿನಾ ಮಿಥ್ಯಾತ್ವಾಸಿದ್ಧೇಃ । ನ ಚ ಮಿಥ್ಯೋಪಾಧಿಂ ವಿನಾ ಅಜ್ಞಾನಸಿದ್ಧಿಃ ಮಿಥ್ಯೋಪಾಧಿಭಿನ್ನಸ್ಯೈವ ಅಜ್ಞತ್ವಾತ್ ।

78. ಶುದ್ಧಸ್ಯೈವ ಅಜ್ಞತ್ವೇ ಮುಕ್ತಸ್ಯಾಪಿ ಅಜ್ಞತ್ವಪ್ರಸಕ್ತೇಃ । ಸ್ವಾಭಾವಿಕತ್ವಾತ್ ಸತ್ಯತ್ವಾತ್ ಸದ್ವಿತೀಯತ್ವಪ್ರಸಕ್ತೇಶ್ಚ । ಸ್ವಾಭಾವಿಕಸ್ಯ ಅನಿವೃತ್ತ್ಯಂಗೀಕಾರಾತ್ ಅನಿವೃತ್ತಿಪ್ರಸಕ್ತೇಶ್ಚ । ಸತ್ಯಸ್ಯ ಚ ಅನಿವೃತ್ತಿರಿತಿ ಹಿ ತತ್ಪಕ್ಷಃ । ಅತಶ್ಚ ಅನ್ಯೋನ್ಯಾಶ್ರಯತಾ ।

ಅಜ್ಞಾನಸಿದ್ಧ್ಯಾ ಮಿಥ್ಯೋಪಾಧಿಸಿದ್ಧಿಃ ಮಿಥ್ಯೋಪಾಧಿಸಿದ್ಧ್ಯಾ ಜೀವಸಿದ್ಧಿಃ ಜೀವಸಿದ್ಧ್ಯಾ ತದಾಶ್ರಯಾಜ್ಞಾನಸಿದ್ಧಿರಿತಿ ಚಕ್ರಕಂ ವಾ ।

ನ ಚ ಶುದ್ಧಮೇವ ಭ್ರಾಂತ್ಯಾ ಅಜ್ಞಮಿತಿ ಯುಕ್ತಮ್ । ಅಜ್ಞಾನಸಿದ್ಧ್ಯಾ ಭ್ರಮಸಿದ್ಧಿಃ ತತ್ಸಿದ್ಧ್ಯಾ ಅಜ್ಞಾನಸಿದ್ಧಿರಿತಿ ಅನ್ಯೋನ್ಯಾಶ್ರಯತ್ವಾತ್ ।

ಅನಂತಾಃ ಜೀವರಾಶಯಃ

79. ಅನಾಗತಾಃ ಅತೀತಾಶ್ಚ ಯಾವಂತಃ ಸಹಿತಾಃ ಕ್ಷಣಾಃ ।
ಅತೀತಾನಾಗತಾಶ್ಚೈವ ಯಾವಂತಃ ಪರಮಾಣವಃ ॥
ತತೋಽಪ್ಯನಂತಗುಣಿತಾಃ ಜೀವಾನಾಂ ರಾಶಯಃ ಪೃಥಕ್ ।

ಇತಿ ಪತ್ಸಶ್ರುತೇಃ ನ ಸಂಸಾರಿಣಾಂ ಪರಿಸಮಾಪ್ತಿಃ

ಅಸ್ಮತ್ಪಕ್ಷೇ ।

ಪರಮಾಣುಪ್ರದೇಶೇऽಪಿ ಅನಂತಾ ಹಿ ಪ್ರಾಣಿರಾಶಯಃ ।
ಸೂಕ್ಷ್ಮತ್ವಾದೀಶಶಕ್ತ್ಯೈವ ಸ್ಥೂಲಾ ಅಪಿ ಹಿ ಸಂಸ್ಥಿತಾಃ ॥
ಸಹಸ್ರಯೋಜನಸಭಾಂ ಪ್ರಭಾವಾತ್ ವಿಶ್ವಕರ್ಮಣಃ ।
ಅನಂತಾ ರಾಶಯೋऽನಂತಾಃ ಪ್ರಜಾನಾಮಧಿಸಂಸ್ಥಿತಾಃ । ಇತಿ ಸ್ಕಾಂದೇ

ದೃಷ್ಟಸ್ಯ ವಸ್ತುನಃ ಮಿಥ್ಯಾತ್ವಕಲ್ಪನಂ ನ ಯುಕ್ತಮ್

80. ನ ಚ ಮಿಥ್ಯಾವಸ್ತುನಃ ದುರ್ಘಟಿತ್ವಮೇವ ಭೂಷಣಮ್ । ದೃಷ್ಟಸ್ಯ ವಸ್ತುನಃ ಮಿಥ್ಯಾತ್ವಕಲ್ಪನಸ್ಯ ದೃಷ್ಟಿಸಕಾಶಾತ್ ಬಲವತ್ಪ್ರಮಾಣಯುಕ್ತ್ಯಪೇಕ್ಷತ್ವಾತ್ । ತದಭಾವೇ ಸತ್ಯತ್ವಂ ದೃಷ್ಟ್ಯೈವ ಸಿದ್ಧ್ಯತಿ । ನ ಹಿ ಅನ್ನಾದಿಕಂ ಭೋಗ್ಯಂ ದೃಷ್ಟ್ವಾ ಭೋಕ್ತುಂ ಸತ್ಯತ್ವೇ ಪ್ರಮಾಣಾಂತರಮಪೇಕ್ಷತೇ । ಕಿಂತು ನೇದಮನ್ನಮಿತಿ ಕೇನಚಿದುಕ್ತೇ ಕಥಮಿದಮನ್ನತ್ವೇನ ದೃಶ್ಯಮಾನಮನ್ನಂ ನ ಭವತೀತಿ ಪ್ರಮಾಣಾಂತರಮಪೇಕ್ಷತೇ ।

ನ ಚ ಪ್ರತ್ಯಕ್ಷದೃಷ್ಟಸ್ಯ ತತೋ ಬಲವತ್ಪ್ರತ್ಯಕ್ಷಂ ಆಗಮಂ ವಿನಾ ಅನುಮಾನಾದಿನೈವ ಬಾಧೋ ದೃಷ್ಟಃ । ದೂರಸ್ಥವೃಕ್ಷಹ್ರಸ್ವತ್ವಾದೌ ಪ್ರತ್ಯಕ್ಷಾಪಟುತ್ವಸ್ಯ ನಿಶ್ಚಿತತ್ವಾತ್ ಯುಕ್ತ್ಯಾ ತತ್ರ ದೀರ್ಘತ್ವನಿಶ್ಚಯಃ । ಪ್ರತ್ಯಕ್ಷಸ್ಯ ಹಿ ದೂರೇ ಮಂದಗ್ರಾಹಿತ್ವಂ ಪರಿಮಾಣಾದೌ ಅನ್ಯಥಾತ್ವಂ ಚ ತತೋ ಬಲವತ್ಪ್ರತ್ಯಕ್ಷೇಣೈವ ನಿಶ್ಚಿತಮ್ ।

ನ ಚ ಜಗತ್ಪ್ರತ್ಯಕ್ಷಸ್ಯ ಮಿಥ್ಯಾತ್ವಂ ಕೇನಾಪಿ ಪ್ರಮಾಣೇನ ನಿಶ್ಚಿತಮ್ । ವಿಶೇಷತಶ್ಚ ಜ್ಞಾನಾಜ್ಞಾನ ಸುಖದುಃಖಾತ್ಮ ಭೇದಾದಿ ವಿಷಯಸ್ಯ ಅನುಭವಸ್ಯ ನ ಮಿಥ್ಯಾತ್ವಂ ದೃಷ್ಟಮ್। ಅತಶ್ಚ ಸಂಸಾರಸ್ಯ ಸತ್ಯತ್ವಾತ್ ಸತ್ಯಸ್ಯ ಚ ಅನಿವೃತ್ತ್ಯಂಗೀಕಾರಾತ್ ನ ಮೋಕ್ಷಃ ಸ್ಯಾತ್ ।

81. ಅನುಭವಸಿದ್ಧಸ್ಯ ಬಲವದನುಭವಂ ವಿನಾ ಯುಕ್ತಿತಃ ಏವ ಮಿಥ್ಯಾತ್ವಾಂಗೀಕಾರೇ ಆತ್ಮನೋऽಪಿ ಮಿಥ್ಯಾತ್ವಂ ಸ್ಯಾತ್ । ಯುಕ್ತಿಶ್ಚ ಸರ್ವಸ್ಯ ಅನ್ಯಸ್ಯ ಮಿಥ್ಯಾತ್ವಾಂಗೀಕಾರಾತ್ । ದ್ವಿಧಾಕಲ್ಪನೇ ಕಲ್ಪನಾಗೌರವಮಿತಿ । ಆತ್ಮಾಧಿಷ್ಠಾನಭ್ರಮಸ್ಯೈವ ಅದೃಷ್ಟೇಃ ತಸ್ಯ ಅಧಿಷ್ಠಾನತ್ವಮಪಿ ನ ಯುಜ್ಯತೇ । ದುರ್ಘಟಿತತ್ವಸ್ಯ ಭೂಷಣತ್ವೇ ದುರ್ಘಟಮಪಿ ಆತ್ಮಮಿಥ್ಯಾತ್ವಂ ಸ್ಯಾದೇವ । ಪ್ರತೀತೇರಪಿ ಅವಿದ್ಯಾಕಾರ್ಯತ್ವಾಂಗೀಕಾರಾತ್ । ತಸ್ಯಾಶ್ಚ ದುರ್ಘಟಿತತ್ವಸ್ಯ ಭೂಷಣತ್ವಾತ್ । ಸತ್ಯಸ್ಯ ಚ ಯುಕ್ತ್ಯಪೇಕ್ಷತ್ವಾತ್ । ಘಟಾದೀನಾಂ ದ್ರಷ್ಟೃತ್ವಂ, ಆತ್ಮನಶ್ಚ ಜಡತ್ವಂ,

ದ್ರಷ್ಟುಃ ಅಭಾವೇ ಚ ಪ್ರತೀತಿಃ, ಅಧಿಷ್ಠಾನಂ ವಿನೈವ ಭ್ರಮಃ ಇತ್ಯಾದಿ ವಿರುದ್ಧಂ ಸರ್ವಮಪಿ ಸ್ಯಾತ್ ।

ಭೇದಸ್ಯ ಉಪಾಧಿ ಕೃತತ್ವನಿರಾಸಃ

82 ಉಪಾಧಿಭೇದಾಂಗೀಕಾರೇ ಹಸ್ತಪಾದಾದ್ಯುಪಾಧಿಭೇದೇಽಪಿ ತದ್ಗತ-ಸುಖದುಃಖಾದಿಭೋಕ್ತುಃ ಯಥಾ ಭೇದೋ ನ ಪ್ರತೀಯತೇ ಏವಮೇವ ಶರೀರಾದಿಭೇದೇಽಪಿ ಭೋಕ್ತುಃ ಭೇದೋ ನ ದೃಶ್ಯೇತ । ಸರ್ವದೇಹಗತಸುಖ-ದುಃಖಾದಿಕಮೇಕೇನೈವ ಭುಜ್ಯೇತ.

ಯಥಾ ಚ ಏಕಾಂಗುಲ್ಯಾದ್ಯಪಗಮೇಽಪಿ ನ ಮುಕ್ತಿಃ ಏವಮೇಕೋಪಾಧ್ಯ-ಪಗಮೇಽಪಿ ತಸ್ಯೈವ ಅನಂತೋಪಾಧಿಸಂಬದ್ಧತ್ವಾತ್ ನ ಮುಕ್ತಿಃ ಸ್ಯಾತ್ ।

ಉದ್ಯತಾಯುಧದೋರ್ದಂಡಾಃ ಪತಿತಸ್ವಶಿರೋಕ್ಷಿಭಿಃ ।
ಪಶ್ಯಂತಃ ಪಾತಯಂತಿ ಸ್ಮ ಕಬಂಧಾ ಅಪ್ಯರೀನ್ ಯುಧಿ ॥
ಇತಿ ಭಾರತವಚನಾತ್ ನ ವಿಶ್ಲೇಷಾದ್ ವಿಶೇಷಃ ।

83. ಕಿಂಚ ಉಪಾಧಿಃ ಆತ್ಮನಃ ಏಕದೇಶಂ ಗ್ರಸತಿ ಉತ ಸರ್ವಮಾತ್ಮಾನಮ್ । ಏಕದೇಶಾಂಗೀಕಾರೇ ಸಾವಯವತ್ವಮ್ । ಸಾವಯವಸ್ಯ ಚ ಅನಿತ್ಯತ್ವಂ ತೈರಂಗೀ-ಕೃತಮ್ । ಸರ್ವಗ್ರಾಸೇ ಚ ನ ಉಪಾಧಿಃ ಭೇದಕಃ ಸ್ಯಾತ್ । ಉಪಾಧಿಕೃತಾಂಶ-ಕಲ್ಪನೇ ತದುಪಾಧಿಕೃತತ್ವೇ ಆತ್ಮಾಶ್ರಯತ್ವಮ್ । ಉಪಾಧ್ಯಂತರಕಲ್ಪನೇ ಅನವಸ್ಥಾ ।

ನ ಚ ಈಶ್ವರಸ್ಯ ಸರ್ವಗತತ್ವಾತ್ ಔಪಾಧಿಕಭೇದೋ ಬ್ರಹ್ಮಣಾ ಭವತಿ । ನ ಹಿ ದೇಶತಃ ಕಾಲತಃ ಅಪರಿಚ್ಛಿನ್ನಯೋಃ ಔಪಾಧಿಕಭೇದಃ ದೃಷ್ಟಃ । ಸರ್ವೋಪಾಧಿ-ಗತತ್ವಾಚ್ಚ ಏಕಸ್ಯೈವ ಈಶ್ವರಸ್ಯ ಭೇದಸ್ಯ ಮಿಥ್ಯಾತ್ವಾತ್ ಹಸ್ತಪಾದಾದಿ-ಭೇದೇಽಪಿ ಭೋಕ್ತುಃ ಏಕತ್ವಂ ಸರ್ವಸುಖದುಃಖಾದಿ ಭೋಕ್ತೃತ್ವಮೀಶ್ವರಸ್ಯೈವ ಸ್ಯಾತ್ ।

ದೇಶತಃ ಕಾಲತಶ್ಚ ಅಪರಿಚ್ಛಿನ್ನಯೋಃ ಔಪಾಧಿಕಭೇದಾಭಾವಾದೇವ ದುಃಖಿನಃ ಅನ್ಯತ್ ಶುದ್ಧಂ ಬ್ರಹ್ಮ ನ ಸಿದ್ಧ್ಯತಿ । ಅತಃ ಸ್ವಾಭಾವಿಕಃ ಸಂಸಾರಃ ಇತಿ ಅನಿವೃತ್ತಿರೇವ ಸ್ಯಾತ್ ।

84. ಕಿಂಚ ವಿಶಿಷ್ಟಸ್ಯ ಶುದ್ಧಸ್ಯ ವಾ ಸಂಸಾರಃ । ಶುದ್ಧಸ್ಯ ಸಂಸಾರಃ ಇತ್ಯುಕ್ತೇ ಸ್ವವ್ಯಾಹತಿಃ । ವಿಶಿಷ್ಟಸ್ಯ ಇತ್ಯುಕ್ತೇ ವಿಶಿಷ್ಟಃ ಅನ್ಯಃ ಸ ಏವ ವಾ । ಸ ಏವ ಚೇತ್ ಉಕ್ತಃ ದೋಷಃ । ಅನ್ಯಶ್ಚೇತ್ ನಿತ್ಯಃ ಅನಿತ್ಯೋ ವಾ । ಅನಿತ್ಯಶ್ಚೇತ್ ನಾಶ ಏವ

ತಸ್ಯ ನ ಮೋಕ್ಷಃ । ನಿತ್ಯತ್ವೇಚ ಭೇದಸ್ಯ ಸತ್ಯತ್ವಂ ಮೋಕ್ಷೇಽಪಿ ತಸ್ಯ ಭಾವಾತ್ । ಸ್ವರೂಪಮಾತ್ರಸ್ಯ ಅಭೇದಃ ಉಪಾಧಿಭಿನ್ನ ಏವ ಇತ್ಯಂಗೀಕಾರೇ ಸ್ವರೂಪಮೇವ ಉಪಾಧಿಸಂಬದ್ಧಮಿತಿ ನ ತಸ್ಯ ಶುದ್ಧತ್ವಮ್ । ಅಶುದ್ಧಸ್ವಭಾವಸ್ಯ ನ ಕದಾಚಿತ್ ಶುದ್ಧತ್ವಮಿತಿ ತತ್ಪಕ್ಷಃ । ಉಪಾಧಿಮಿಥ್ಯಾತ್ವಾಂಗೀಕಾರೇ ಚ ಅನ್ಯೋನ್ಯಾಶ್ರಯ-ತ್ವಾದಿ ದೋಷಾಃ ಉಕ್ತಾಃ । ನ ಚ ಅನಾದಿಕರ್ಮಭೇದಾತ್ ಭೇದಃ । ಔಪಾಧಿಕ-ಭೇದಸಿದ್ಧೌ ಕರ್ಮಭೇದಸಿದ್ಧಿಃ ತತ್ಸಿದ್ಧೌ ಚ ತತ್ಸಿದ್ಧಿಃ ಇತಿ ಅನ್ಯೋನ್ಯಾಶ್ರಯ-ತ್ವಾತ್ । ಅತ ಅನಂತದೋಷದುಷ್ಟತ್ವಾತ್ ಗ್ರಂಥಬಹುತ್ವಂ ಸ್ಯಾದಿತ್ಯುಪರಮ್ಯತೇ । ಅತಃ ಸರ್ವಪ್ರಮಾಣವಿರುದ್ಧತ್ವಾತ್ ನ ಅಭೇದೇ ಶ್ರುತಿತಾತ್ಪರ್ಯಮ್ ।

ಶೂನ್ಯವಾದ ಮಾಯಾವಾದಯೋಃ ನ ವಿಶೇಷಃ

85. ಸರ್ವಶಬ್ದಾವಾಚ್ಯಸ್ಯ ಲಕ್ಷಣಾಪಿ ನ ದೃಷ್ಟಾ ಇತಿ ನ ತಸ್ಯ ಶಾಸ್ತ್ರ-ಗಮ್ಯತ್ವಮ್ । ಅತೋ ಅವಾಚ್ಯತ್ವಾತ್ ಅಜ್ಞೇಯತ್ವಾತ್ ಶೂನ್ಯಮೇವ ತದಿತಿ ಪ್ರಾಪ್ತಮ್ । ನ ಚ ಸ್ವೇನಾಪಿ ಜ್ಞೇಯತ್ವಂ ತೈಃ ಉಚ್ಯತೇ । ಕರ್ತೃಕರ್ಮವಿರೋಧ ಇತಿ ಹಿ ತೇ ವದಂತಿ । ನ ಚ ಸ್ವರೂಪಂ ಅನ್ಯದ್ವಾ ಜ್ಞೇಯಂ ಜ್ಞಾತಾರಂ ಚ ವಿನಾ ಜ್ಞಾನಂ ದೃಷ್ಟಮ್ । ಅತೋ ಜ್ಞಾತೃಜ್ಞೇಯಾಭಾವಾತ್ ಜ್ಞಾನಸ್ಯಾಪಿ ಶೂನ್ಯತ್ವೈವ । ಅತಃ ಶೂನ್ಯವಾದಾತ್ ನ ಕಶ್ಚಿದ್ ವಿಶೇಷಃ । ನ ಚ ಜ್ಞಾತೃಜ್ಞೇಯ-ರಹಿತಂ ಜ್ಞಾನಂ ಕ್ವಾಪಿ ದೃಷ್ಟಮ್ । ಅಪ್ರಾಪ್ತತ್ವಾಚ್ಚ ಈಶ್ವರಭೇದಸ್ಯ ನ ಅಭೇದೇ ಶ್ರುತಿತಾತ್ಪರ್ಯಂ ಯುಜ್ಯತೇ ।

ಸರ್ವೋತ್ತಮಂ ಸರ್ವದೋಷವ್ಯಪೇತಂ
ಗುಣೈರಶೇಷೈಃ ಪೂರ್ಣಮನ್ಯಂ ಸಮಂತಾತ್ ।
ವೈಲಕ್ಷಣ್ಯಾತ್ ಜ್ಞಾಪಯಿತುಂ ಪ್ರವೃತ್ತಾಃ
ಸರ್ವೇ ವೇದಾ ಮುಖ್ಯತೋ ನೈವ ಚಾನ್ಯತ್ । ಇತಿ ಮಹೋಪನಿಷದಿ

ಅತಃ ಸರ್ವಾಗಮೈರೇವ ಸರ್ವಸ್ಮಾತ್ ಭಿನ್ನತ್ವೇನ ಸರ್ವಸ್ಮಾತ್ ವಿಶಿಷ್ಟತ್ವೇನ ಚ ವಿಜ್ಞೇಯೋ ಭಗವಾನ್ ನಾರಾಯಣಃ ಇತಿ ಸಿದ್ಧಮ್ ॥

ಇತಿ ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ
ಶ್ರೀವಿಷ್ಣುತತ್ತ್ವವಿನಿರ್ಣಯೇ ಪ್ರಥಮಃ ಪರಿಚ್ಛೇದಃ

## ದ್ವಿತೀಯಃ ಪರಿಚ್ಛೇದಃ

**ನಾರಾಯಣಃ ಸಮತೀತ ಕ್ಷರಾಕ್ಷರಃ**

86. ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ ।
ಲಕ್ಷ್ಮೀಃ ಅಕ್ಷರದೇಹತ್ವಾತ್ ಅಕ್ಷರಾ ತತ್ಪರೋ ಹರಿಃ ॥
ಸ್ವಾತಂತ್ರ್ಯಶಕ್ತಿವಿಜ್ಞಾನಸುಖಾದ್ಯೈಃ ಅಖಿಲೈಃ ಗುಣೈಃ ।
ನಿಸ್ಸೀಮತ್ವೇನ ತೇ ಸರ್ವೇ ತದ್ವಶಾಃ ಸರ್ವದೈವ ಚ ॥
ಸರ್ಗಸ್ಥಿತಿಕ್ಷಯಯತಿಪ್ರಕಾಶಾವೃತಿಬಂಧನಮ್ ।
ಸರ್ವಕ್ಷರಾಣಾಮೇಕಃ ಸ ಕುರ್ಯಾತ್ ಸಾತ್ತ್ವಿಕಮೋಕ್ಷಣಮ್ ॥
ಸರ್ಗಸ್ಥಿತಿಯತಿಜ್ಯೋತಿರ್ನಿತ್ಯಾನಂದಪ್ರದೋಽಕ್ಷರೇ ।
ಚೇಷ್ಟಾಪ್ರದಶ್ಚ ಸರ್ವೇಷಾಮೇಕ ಏವ ಪರೋ ಹರಿಃ ॥
ತಸ್ಯ ನಾನ್ಯೋಽಸ್ತಿ ಸರ್ಗಾದಿಕರ್ತಾ ನಿರ್ದೋಷಕಶ್ಚ ಸಃ ॥

ಇತಿ ಪರಮಶ್ರುತಿಃ

ಬ್ರಹ್ಮಶೇಷಸುಪರ್ಣೇಶಶಕ್ರಸೂರ್ಯಗುಹಾದಯಃ ।
ಸರ್ವೇಕ್ಷರಾ ಅಕ್ಷರಾ ತು ಶ್ರೀರೇಕಾ ತತ್ಪರೋ ಹರಿಃ ॥ ಇತಿ ಸ್ಕಾಂದೇ

ಯಂ ಕಾಮಯೇ ತಂ ತಂ ಉಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ । ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತ ವಾ ಉ । ಅಹಂ ಜನಾಯ ಸಮದಂ ಕೃಣೋಮಿ ಅಹಂ ದ್ಯಾವಾ ಪೃಥಿವೀ ಆವಿವೇಶ । ಅಹಂ ಸುವೇ ಪಿತರಮಸ್ಯ ಮೂರ್ಧನ್ ಮಮ ಯೋನಿಃ ಅಪ್ಸು ಅಂತಃಸಮುದ್ರೇ ।

ಯಮಂತಃ ಸಮುದ್ರೇ ಕವಯೋ ವಯಂತಿ ಯದಕ್ಷರೇ ಪರಮೇ ಪ್ರಜಾಃ । ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಮ್ ।

ಯದೋಷಧೀಭಿಃ ಪುರುಷಾನ್ ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ । ಅತಃ ಪರಂ ನಾನ್ಯದಣೀಯಾಂಸಂ ಹಿ ಪರಾತ್ ಪರಂ ಯನ್ಮಹತೋ ಮಹಾಂತಮ್ । ಯದೇಹಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ।

ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ ಪರಮಂ ಕವೀನಾಂ ।

ಅಸ್ಯ ದೇವಸ್ಯ ಮೀಳ್ಹುಷಃ ವಯಾ ವಿಷ್ಣೋರೇಷಸ್ಯ ಪ್ರಭೃತೇ ಹವಿರ್ಭಿಃ । ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾ ವಿರಾವತ್ ।

87. ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಈಶಾನಃ ನ ಅಗ್ನೀ-
ಷೋಮೌ ನ ಇಮೇ ದ್ಯಾವಾಪೃಥಿವೀ। ಏಕೋ ನಾರಾಯಣ ಆಸೀತ್ ನ ಬ್ರಹ್ಮಾ
ನ ಚ ಶಂಕರಃ । ಸ ಮುನಿಃ ಭೂತ್ವಾ ಸಮಚಿಂತಯತ್ ತತ ಏತೇ ವ್ಯಜಾಯಂತ।
ವಿಶ್ವೋ ಹಿರಣ್ಯಗರ್ಭೋ ಅಗ್ನಿಃ ಯಮೋ ವರುಣ ರುದ್ರೇಂದ್ರಾಃ ಇತಿ ।

ವಾಸುದೇವೋ ವಾ ಇದಮಗ್ರ ಆಸೀತ್ ನ ಬ್ರಹ್ಮಾ ನ ಚ ಶಂಕರಃ ।
ನೇಂದ್ರಸೂರ್ಯೌ ನ ಚ ಗುಹೋ ನ ಸೋಮೋ ನ ವಿನಾಯಕಃ ।

ಇತ್ಯಾದಿ ಶ್ರುತಿಭ್ಯಶ್ಚ ।

ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್ ಇತ್ಯತ್ರಾಪಿ ಅಪರಮಸ್ತೀ-
ತ್ಯೇವಾರ್ಥಃ । ಅನ್ಯಥಾ ತೇನೇದಂ ಪೂರ್ಣಂ ತತೋ ಯದುತ್ತರಂ ತದರೂಪಮ-
ನಾಮಯಮಿತಿ ವಾಕ್ಯಶೇಷವಿರೋಧಾತ್ । ತೇನೇದಮಿತ್ಯುಕ್ತಮೇವ ತತ ಇತಿ
ಪರಾಮೃಶ್ಯತೇ । ಅನ್ಯಥಾ ಯಸ್ಮಾತ್ ಪರಂ ನೇತಿ ಯುಕ್ತಿವಿರೋಧಾತ್ ।

ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ
ಪರಮಮುದಾಹರಂತಿ ।

ಅಸ್ಯೈವ ಸರ್ವನಾಮಾನಿ ವ್ಯತಿರಿಕ್ತಸ್ಯ ಸರ್ವತಃ ।
ಯತಃ ಸ್ವತಂತ್ರಃ ಸದೈವೇಕಃ ಸ ವಿಷ್ಣುಃ ಪರಮೋ ಮತಃ ।

ಇತ್ಯಾದಿಶ್ರುತಿಭ್ಯಃ ಅನ್ಯನಾಮಾನಿ ಅಸ್ಯೈವೇತಿ ನಾನ್ಯೇಷಾಂ ಸರ್ವೇಶ್ವರ-
ತ್ವಾದಿಕಮುಚ್ಯತೇ ।

ಸರ್ವವೇದೇಷ್ವಪಿ ಅಸ್ಯ ಅದೋಷವಚನಾತ್ ಆದೌ ಅಭಾವಾವಚನಾಚ್ಚ,
ತದ್ವಚನಾಚ್ಚ ಅನ್ಯೇಷಾಂ ಸರ್ವೇಷು ವೇದೇಷು । ತೇಷಾಂ ಸರ್ವನಾಮತ್ವಾನು-
ಕ್ತೇಶ್ಚ ।

ಉತ್ಪತ್ತಿರ್ವಾಸುದೇವಸ್ಯ ಪ್ರಾದುರ್ಭಾವೋ ನ ಚಾಪರಃ ।
ದೇಹೋತ್ಪತ್ತಿಃ ತದನ್ಯೇಷಾಂ ಬ್ರಹ್ಮಾದೀನಾಂ ತದೀರಣಾತ್ ।
ದೇಹೋsನಾದಿರ್ಹರೇಃ ನಿತ್ಯೋ ಬ್ರಹ್ಮಾದೀನಾಮನಿತ್ಯಕಃ ।
ಮುಖ್ಯೋತ್ಪತ್ತಿಃ ತದನ್ಯೇಷಾಂ ಪ್ರಾದುರ್ಭಾವೋ ಹರೇರ್ಜನಿಃ ।

ಇತಿ ಪರಮಶ್ರುತೇಃ

ಇತಿ ಶ್ರೀ ಆನಂದತೀರ್ಥಭಗವತ್ಪಾದಾಚಾರ್ಯವಿರಚಿತ ಶ್ರೀವಿಷ್ಣುತತ್ತ್ವವಿನಿರ್ಣಯೇ
ದ್ವಿತೀಯಃ ಪರಿಚ್ಛೇದಃ ಸಮಾಪ್ತಃ

# ತೃತೀಯಃ ಪರಿಚ್ಛೇದಃ

ನಾರಾಯಣಃ ನಿರ್ದೋಷಾಶೇಷಸದ್ಗುಣಃ

88. ವರ್ಜಿತಃ ಸರ್ವದೋಷೈರ್ಯಃ ಗುಣಸರ್ವಸ್ವಮೂರ್ತಿಮಾನ್ ।
ಸ್ವತಂತ್ರೋ ಯದ್ವಶಾಃ ಸರ್ವೇ ಸ ವಿಷ್ಣುಃ ಪರಮೋ ಮತಃ ॥
ಇತಿ ಪರಮೋಪನಿಷದಿ

ನಿತ್ಯಪೂರ್ಣಾಖಿಲಗುಣೋ ನಿರ್ದೋಷಃ ಸರ್ವದೈವ ಯಃ ।
ಯಃ ಸ್ವತಂತ್ರಃ ಪರೋ ವಿಷ್ಣುಃ ಜನ್ಮಮೃತ್ಯಾದಿವರ್ಜಿತಃ ॥

ನಾರದ ಉವಾಚ—

ನಿರ್ದೋಷಶ್ಚೇತ್ ಕಥಂ ವಿಷ್ಣುಃ ಮಾನುಷೇಷು ಉದಪದ್ಯತ ।
ಚಿಂತಾಶ್ರಮವ್ರಣಾಜ್ಞಾನದುಃಖಯುಗ್ ದೃಶ್ಯತೇ ಕಥಮ್ ॥
ಏಷ ಮೇ ಸಂಶಯೋ ಬ್ರಹ್ಮನ್ ಹೃದಿ ಶಲ್ಯ ಇವಾರ್ಪಿತಃ ।
ಅನುದ್ಧಾರ್ಯೋಽಪರೈರ್ಮರ್ತ್ಯೈಃ ಸೂಕ್ತಿಶಕ್ತ್ಯಾ ತಮುದ್ಧರ ॥

ಬ್ರಹ್ಮಾ ಉವಾಚ—

ಸ್ತ್ರೀಪುಂಮಲಾಭಿಯೋಗಾತ್ಮಾ ದೇಹೋ ವಿಷ್ಣೋರ್ನ ಜಾಯತೇ ।
ಕಿಂತು ನಿರ್ದೋಷಚೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಮ್ ॥
ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋರ್ನ ಚಾಪರಾ ।
ತಥಾಪ್ಯಸುರಮೋಹಾಯ ಪರೇಷಾಂ ಚ ಕ್ವಚಿತ್ ಕ್ವಚಿತ್ ॥
ದುಃಖಾಜ್ಞಾನಶ್ರಮಾದೀನ್ ಸ ದರ್ಶಯೇತ್ ಶುದ್ಧಸದ್ಗುಣಃ ।
ಕ್ವ ವ್ರಣಾದಿ ಕ್ವ ಚಾಜ್ಞಾನಂ ಸ್ವತಂತ್ರಾಚಿಂತ್ಯಸದ್ಗುಣೇ ॥
ದೌರ್ಲಭ್ಯಾಯೈವ ಮೋಕ್ಷಸ್ಯ ದರ್ಶಯೇತ್ ತಾನ್ಯಜೋ ಹರಿಃ ।
ಮಿಥ್ಯಾದರ್ಶನದೋಷೇಣ ತೇನ ಮುಕ್ತಿಂ ನ ಯಾಂತಿ ಚ ॥
ತಮೋ ಯಾಂತಿ ಚ ತೇನೈವ ತಸ್ಮಾದ್ ದೋಷವಿವರ್ಜಿತಮ್ ।
ಪ್ರಾದುರ್ಭಾವಗತಂ ಚೈವ ಜಾನೀಯಾದ್ ವಿಷ್ಣುಮಂಜಸಾ ॥
ಇತಿ ಬ್ರಹ್ಮಾಂಡೇ

89. ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ ।
ಅತೋ ಮಿಥೋಽಪಿ ಭೇದೋ ನ ತೇಷಾಂ ಕಶ್ಚಿತ್ ಕದಾಚನ ॥
ಸ್ವರೂಪೇಽಪಿ ವಿಶೇಷೋಽಸ್ತಿ ಸ್ವರೂಪತ್ವವದೇವ ತು ।
ಭೇದಾಭಾವೇಽಪಿ ತೇನೈವ ವ್ಯವಹಾರಶ್ಚ ಸರ್ವತಃ ॥ ಇತಿ ಪರಮೋಪನಿಷದಿ

ಅಭಿನ್ನತ್ವಮಭೇದಶ್ಚ ಯಥಾ ಭೇದವಿವರ್ಜಿತಮ್ ।
ವ್ಯವಹಾರ್ಯರ್ಥಂ ಪೃಥಕ್ ಚ ಸ್ಯಾದೇವಂ ಸರ್ವೇ ಗುಣಾ ಹರೇಃ ॥

ಅಭೇದಾಭಿನ್ನಯೋರ್ಭೇದೋ ಯದಿ ವಾ ಭೇದಭಿನ್ನಯೋಃ ।
ಅನವಸ್ಥಿತಿರೇವ ಸ್ಯಾತ್ ನ ವಿಶೇಷಣತಾ ಮತಿಃ ॥

ಮೂಲಸಂಬಂಧಮಜ್ಞಾತ್ವಾ ತಸ್ಮಾದೇಕಮನಂತಧಾ ।
ವ್ಯವಹಾರ್ಯರ್ಥಂ ವಿಶೇಷೇಣ ದುಸ್ತರ್ಕಬಲತೋ ಹರೇಃ ।
ವಿಶೇಷೋಽಪಿ ಸ್ವರೂಪಂ ಸ ಸ್ವನಿರ್ವಾಹಕತಾಽಸ್ಯ ಚ । ಇತಿ ಬ್ರಹ್ಮತರ್ಕೇ

ಏಕಮೇವಾದ್ವಿತೀಯಂ ತತ್, ನೇಹ ನಾನಾಸ್ತಿ ಕಿಂಚನ ।
ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥

ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ ।

ಇತ್ಯಾದಿಶ್ರುತೇಶ್ಚ ।

ದೇಶಃ ಸರ್ವತ್ರ ಪುರುಷಃ ಸ್ವತಂತ್ರಃ ಕಾಲನಿತ್ಯತಾ ।
ಇತ್ಯಾದಿಷು ಸ್ವಸಂಬಂಧಾತ್ ಯಥೈವ ಗುಣರೂಪಿಣಃ ।
ಗುಣಿತ್ವಂ ಗುಣಭೋಕ್ತೃತ್ವಂ ಸ್ಯಾದ್ ವಿಷ್ಣೋಃ ತಚ್ಚ ಸ ಸ್ವಯಮ್ ॥

ಇತಿ ಬ್ರಹ್ಮತರ್ಕೇ

90. ವಿಷ್ಣುಂ ಸರ್ವಗುಣೈಃ ಪೂರ್ಣಂ ಜ್ಞಾತ್ವಾ ಸಂಸಾರವರ್ಜಿತಃ ।
ನಿರ್ದುಃಖಾನಂದಭುಕ್ ನಿತ್ಯಂ ತತ್ಸಮೀಪೇ ಸ ಮೋದತೇ ॥

ಮುಕ್ತಾನಾಂ ಚಾಶ್ರಯೋ ವಿಷ್ಣುರಧಿಕೋಽಧಿಪತಿಸ್ತಥಾ ।
ತದ್ವಶಾ ಏವ ತೇ ಸರ್ವೇ ಸರ್ವದೈವ ಸ ಈಶ್ವರಃ ॥ ಇತಿ ಪರಮಶ್ರುತಿಃ

ಅಮೃತಸ್ಯೈಷ ಸೇತುಃ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ಇತ್ಯಾದಿ ಚ ।

ನೃಪಾದ್ಯಾಃ ಶತಧೃತ್ಯಂತಾಃ ಮುಕ್ತಿಗಾಃ ಉತ್ತರೋತ್ತರಮ್ ।
ಗುಣೈಃ ಸರ್ವೈಃ ಶತಗುಣಾ ಮೋದಂತೇ ಇತಿ ಹಿ ಶ್ರುತಿಃ ॥ ಇತಿ ಪಾದ್ಮೇ

ಅತೋ ನಿಶ್ಶೇಷದೋಷವರ್ಜಿತಃ
ಪೂರ್ಣೋಽನಂತಗುಣಃ ನಾರಾಯಣ ಇತಿ ಸಿದ್ಧಮ್ ।

91. ಯಸ್ಯ ತ್ರೀಣಿ ಉದಿತಾನಿ ವೇದವಚನೇ ರೂಪಾಣಿ ದಿವ್ಯಾನಿ ಅಲಮ್ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋ ನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ।

ಸ್ವತಂತ್ರಾಯಾಖಿಲೇಶಾಯ ನಿರ್ದೋಷಗುಣರೂಪಿಣೇ ।
ಪ್ರೇಯಸೇ ಮೇ ಸುಪೂರ್ಣಾಯ ನಮೋ ನಾರಾಯಣಾಯ ತೇ ॥

ಇತಿ ಶ್ರೀ ಆನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀವಿಷ್ಣುತತ್ತ್ವವಿನಿರ್ಣಯೇ ತೃತೀಯಃ ಪರಿಚ್ಛೇದಃ ಸಮಾಪ್ತಃ ।

॥ ಸಮಾಪ್ತಶ್ಚ ಅಯಂ ಗ್ರಂಥಃ ॥

|| ಶ್ರೀ ವೇದವ್ಯಾಸಾಯ ನಮಃ ||

## ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತಃ

# ಶ್ರೀ ವಿಷ್ಣುತತ್ತ್ವವಿನಿರ್ಣಯಃ

ಮಂಗಲಶ್ಲೋಕ

**1. ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಮ್ ।**
**ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಮ್ ॥**

ಅನುವಾದ — ಸದಾಗಮಗಳಿಂದ ಮಾತ್ರ ತಿಳಿದುಬರುವ, ಕ್ಷರ ಅಂದರೆ ಚತುರ್ಮುಖ ಬ್ರಹ್ಮಾದಿ ಸಕಲಜೀವರುಗಳೂ, ಅಕ್ಷರ ಅಂದರೆ ಲಕ್ಷ್ಮೀದೇವಿಯೂ (ಮತ್ತು ಈ ಎರಡೂ ಪದಗಳಿಂದಲೂ ಲಕ್ಷಣಾದಿಂದ ಸೂಚಿತವಾದ ಜಡಪದಾರ್ಥಗಳೂ) ಇವುಗಳಿಗಿಂತ ಅತ್ಯಂತ ವಿಲಕ್ಷಣನೂ ಉತ್ತಮನೂ ಆದ, ಪಾರತಂತ್ರ್ಯಾದಿ ಸಕಲದೋಷರಹಿತನಾದ, ಅನಂತಸದ್ಗುಣಗಳಿಂದ ಯುಕ್ತನಾದ ಶ್ರೀಮನ್ನಾರಾಯಣನನ್ನು ಸದಾಕಾಲದಲ್ಲಿಯೂ ವಂದಿಸುವೆನು

### ಗ್ರಂಥದ ಹೆಸರಿನ ವಿವರಣೆ.

'ವಿಷ್ಣುತತ್ತ್ವವಿನಿರ್ಣಯ' ಎಂಬ ಈ ಗ್ರಂಥದ ಹೆಸರನ್ನು ಜ್ಞಾನಿಗಳಾದ ಟಿಪ್ಪಣಿಕಾರರು ಅನೇಕ ರೀತಿಯಿಂದ ವಿವರಿಸಿರುವರು. ೧. ವಿಷ್ಣು ಎಂಬ ತತ್ತ್ವದ ಸರ್ವೋತ್ತಮತ್ವಾದಿ ಸ್ವರೂಪವನ್ನು ನಿರ್ಣಯಿಸುವ ಗ್ರಂಥ, ಅಥವಾ ವಿಷ್ಣು, ಚಿತ್‌ಪ್ರಕೃತಿ, ಅಚಿತ್‌ಪ್ರಕೃತಿ ಇತ್ಯಾದಿ ಸರ್ವತತ್ತ್ವಗಳ ಸ್ವರೂಪವನ್ನು ನಿರ್ಣಯಿಸುವ ಗ್ರಂಥ (ರಾ.ಟಿ) ೨ ವಿಷ್ಣುವಿನ ತತ್ತ್ವದ ನಿರ್ಣಯವು ಯಾವದರಿಂದ ಆಗುವದೋ ಅಂಥ ಗ್ರಂಥವು 'ವಿಷ್ಣುತತ್ತ್ವಸ್ಯ ನಿರ್ಣಯಃ ಯಸ್ಮಾತ್ ಸಃ' ಎಂಬ ವ್ಯಧಿಕರಣ ಬಹುವ್ರೀಹಿಯು (ಶ್ರೀ ಟಿ) ೩. ವಿಷ್ಣುತತ್ತ್ವದ ವಿನಿರ್ಣಯ ಎಂಬ ಷಷ್ಠೀಸಮಾಸವೆಂದು ಕೆಲವರ ಅಭಿಪ್ರಾಯ ಇದಕ್ಕೆ ಬಾಧಕವೇನೂ ಇಲ್ಲ. ವ್ಯಧಿಕರಣ ಬಹುವ್ರೀಹಿ ಎಂದೂ ಕೆಲವರ ಅಭಿಪ್ರಾಯ ವಸ್ತುತಃ 'ಅಶೇಷದರ್ಶನ' ಎಂಬಲ್ಲಿಯಂತೆ 'ವಿಷ್ಣುತತ್ತ್ವಂ ನಿರ್ಣಯಃ ಯಸ್ಮಾತ್ ಸಃ' ವಿಷ್ಣುತತ್ತ್ವರೂಪವಾದ ನಿರ್ಣಯವು ಯಾವದರಿಂದಲೋ ಅದು ಎಂಬ ಸಮಾನಾಧಿಕರಣ ಬಹುವ್ರೀಹಿಯೇ ಆಗಿರುವದು (ಪಾಂ. ಟಿ). ೪. ನಿರ್ಣಯ ಅಂದರೆ ಗ್ರಂಥ 'ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತವ್' ಎಂಬಲ್ಲಿ ಈ ಅರ್ಥ ಬಂದಿದೆ. 'ವಿಷ್ಣುತತ್ತ್ವಸ್ಯ ವಿನಿರ್ಣಯಃ' ಎಂದು ಷಷ್ಠೀಸಮಾಸವು. ಕೆಲವರು ಸಮಾನಾಧಿಕರಣ ಬಹುವ್ರೀಹಿಯನ್ನೂ ಇನ್ನು ಕೆಲವರು ವ್ಯಧಿಕರಣ ಬಹುವ್ರೀಹಿಯನ್ನೂ ಹೇಳುವರು

(ವ್ಯಾ. ಟಿ). ಹೀಗೆ ಪರಸ್ಪರ ಉಲ್ಲೇಖ ಮಾಡಿ ಟಿಪ್ಪಣಿಕಾರರು ಮೂರು ರೀತಿಯ ಸಮಾಸಗಳನ್ನು ಹೇಳಿ ಗ್ರಂಥದ ಹೆಸರಿನ ಅರ್ಥವನ್ನು ವಿವರಿಸಿರುವರು ಒಟ್ಟು ತಾತ್ಪರ್ಯವು ವಿಷ್ಣುತತ್ವದ ಸ್ವರೂಪವನ್ನು ನಿರ್ಣಯಿಸುವ ಗ್ರಂಥ ಎಂಬುದೇ ಆಗಿದೆ. ಇತರ ತತ್ವಗಳ ಸ್ವರೂಪದ ನಿರ್ಣಯವೂ ಇದಕ್ಕೆ ಅಂಗವಾಗಿ ಬಂದಿದೆ ಎಂಬುದು ಶ್ರೀ ರಾಘವೇಂದ್ರತೀರ್ಥರ ವಿವರಣೆಯಲ್ಲಿ ಸ್ಪಷ್ಟವಾಗಿದೆ

ಗ್ರಂಥದ ಈ ಹೆಸರು ಅನ್ವರ್ಥಕವಾಗಿದ್ದು ಇದರಿಂದ ವಿಷಯಪ್ರಯೋಜನಸಂಬಂಧಗಳು ಪ್ರತಿಪಾದಿಸಲ್ಪಟ್ಟಿವೆ (ಪಾಂ ಟಿ)

**ಮಂಗಳಶ್ಲೋಕ ರಚನೆಯ ಉದ್ದೇಶ ಮತ್ತು ಅದರಲ್ಲಿ ಸೂಚಿತವಾದ ಲಕ್ಷಣ, ಪ್ರಮಾಣಗಳು.**

ಶ್ರೀ ಆನಂದತೀರ್ಥರಿಗೆ ವಿಘ್ನಗಳಿಲ್ಲ ಆದುದರಿಂದ ವಿಘ್ನವಿಘಾತಾದಿಗಳೇ ಪ್ರಯೋಜನವಾಗಿರುವ ಮಂಗಲವನ್ನು ಅವರು ಮಾಡುವ ಅಗತ್ಯವಿಲ್ಲ ಆದರೂ ಶಿಷ್ಯರಿಗೆ ವಿಘ್ನಗಳಿರುವುದರಿಂದ ಅವರು ಮಾಡಬೇಕು ಎಂಬುದನ್ನು ತಿಳಿಸಿಕೊಡಲು ಅವರು ಈ ಮಂಗಲಶ್ಲೋಕವನ್ನು ಗ್ರಂಥದ ಆದಿಯಲ್ಲಿ ರಚಿಸಿದ್ದಾರೆ ಈ ಮಂಗಲಶ್ಲೋಕದಲ್ಲಿ 'ನಿರ್ದೋಷಾಶೇಷಸದ್ಗುಣಮ್' ಎಂಬ ವಿಶೇಷಣದಿಂದ ನಾರಾಯಣನ ಲಕ್ಷಣಗಳನ್ನು ಹೇಳಿದ್ದಾರೆ. 'ಸದಾಗಮೈಕವಿಜ್ಞೇಯಮ್' ಎಂಬುದರಿಂದ ಪ್ರಮಾಣವನ್ನು ಹೇಳಿದ್ದಾರೆ. 'ಸಮತೀತಕ್ಷರಾಕ್ಷರಮ್' ಎಂಬುದರಿಂದ ಅಸಂಭಾವನಾದೋಷವನ್ನು ಪರಿಹರಿಸಿದ್ದಾರೆ ಪಾರತಂತ್ರ್ಯಾದಿದೋಷರಹಿತತ್ವ, ಪರಿಪೂರ್ಣಾನಂದಾದಿಗುಣವಿಶಿಷ್ಟತ್ವ ಇವು ಲಕ್ಷಣಗಳು. ಸದಾಗಮಗಳು ಮಾತ್ರ ಪರಮಾತ್ಮನನ್ನು ತಿಳಿಸಿಕೊಡುವ ಪ್ರಮಾಣಗಳು. ದುರಾಗಮ, ಪ್ರತ್ಯಕ್ಷ, ಅನುಮಾನ ಇತ್ಯಾದಿಗಳು ಅವನ ವಿಷಯದಲ್ಲಿ ಪ್ರಮಾಣವಲ್ಲ ಪರಮಾತ್ಮನು ಕ್ಷರ ಮತ್ತು ಅಕ್ಷರ ಇವುಗಳಿಗಿಂತ ವಿಲಕ್ಷಣನೂ ಉತ್ತಮನೂ ಆಗಿದ್ದು ಪರಸ್ಪರ ವಿರುದ್ಧವೆನಿಸುವ ಅಣುತ್ವ, ಮಹತ್ವ ಇತ್ಯಾದಿ ಗುಣಗಳುಳ್ಳವನಾಗಿರಬಲ್ಲನು ಇದು ಅವನಲ್ಲಿ ಅಸಂಭಾವಿತವಲ್ಲ ಕ್ಷರ ಮತ್ತು ಅಕ್ಷರ ಪದಗಳಿಂದ ಲಕ್ಷಣಾದಿಂದ ಜಡವನ್ನೂ ತೆಗೆದುಕೊಳ್ಳಬೇಕು ಪರಮಾತ್ಮನು ಸಕಲ ಜಡ, ಸಕಲ ಜೀವ ಮತ್ತು ಅಕ್ಷರ ಅಂದರೆ ಕೂಟಸ್ಥಳೆನಿಸಿದ ಲಕ್ಷ್ಮೀಗಿಂತಲೂ ವಿಲಕ್ಷಣನೂ ಉತ್ತಮನೂ ಆಗಿರುವನು

**ಗ್ರಂಥದ ವಿಷಯ ಪ್ರಯೋಜನಗಳು.**

**2.** **ವಿಶೇಷಣಾನಿ ಯಾನೀಹ ಕಥಿತಾನಿ ಸದುಕ್ತಿಭಿಃ ।**
**ಸಾಧಯಿಷ್ಯಾಮಿ ತಾನ್ಯೇವ ಕ್ರಮಾತ್ ಸಜ್ಜನಸಂವಿದೇ ॥**

**ಅನುವಾದ**—ಈ ಮಂಗಲಶ್ಲೋಕದಲ್ಲಿ ಹೇಳಿದ ವಿಶೇಷಣಗಳನ್ನೇ ಸದಾಗಮಗಳಿಂದಲೂ ಆಗಮಾನುಗೃಹೀತವಾದ ಯುಕ್ತಿಗಳಿಂದಲೂ ಸಜ್ಜನರಿಗೆ ಪರಮಾತ್ಮನ ಜ್ಞಾನವನ್ನೂ ಜ್ಞಾನದ್ವಾರಾ ಮುಕ್ತಿಯನ್ನೂ ಒದಗಿಸಿಕೊಡಲು ಕ್ರಮವಾಗಿ ವಿವರಿಸುವೆವು.

**ವಿವರಣೆ**—ಈ ಗ್ರಂಥದ ವಿಷಯ, ಪ್ರಯೋಜನ ಮತ್ತು ಸಂಬಂಧಗಳನ್ನು ತಿಳಿಸಿ ಕೊಡುವ, ನಾರಾಯಣನ ಲಕ್ಷಣ-ಪ್ರಮಾಣಗಳನ್ನು ವಿವರಿಸುವ ಮಂಗಲಶ್ಲೋಕದಲ್ಲಿಯ ನಾರಾಯಣನ ವಿಶೇಷಣಗಳನ್ನು ಕ್ರಮವಾಗಿ ವಿವರಿಸುವದೇ ಈ ಗ್ರಂಥದ ವಿಷಯವಿನ್ಯಾಸ ವೆಂದು ತಿಳಿಸುವರು ಇಲ್ಲಿ ಹೇಳಿದ ವಿಶೇಷಣವಿಶಿಷ್ಟನಾದ ನಾರಾಯಣನೇ ವಿಷಯನು ಅವನ ಜ್ಞಾನ ಮತ್ತು ಆದರ ದ್ವಾರಾ ಮೋಕ್ಷವೇ ಪ್ರಯೋಜನವು ಪ್ರತಿಪಾದ್ಯ-ಪ್ರತಿಪಾದಕಭಾವವು ಸಂಬಂಧವು ಈ ವಿಶೇಷಣಗಳಲ್ಲಿ ನಿರೂಪಿಸಿದ ಅಂಶಗಳನ್ನು ಸದುಕ್ತಿ ಅಂದರೆ ಸದಾಗಮಗಳಿಂದ ಮತ್ತು ಸದಾಗಮಾನುಗೃಹೀತ ಯುಕ್ತಿಗಳಿಂದ ಸಮರ್ಥಿಸುವ ದಾಗಿ ಹೇಳುವರು ಸಂವಿತ್ ಅಂದರೆ ಜ್ಞಾನ ಪರಮಯೋಗ್ಯರಾದ ಸಜ್ಜನರಿಗೆ ಪರಮಾತ್ಮನ ಜ್ಞಾನವೇ ಪ್ರಯೋಜನವು ಇದನ್ನು 'ಸಜ್ಜನಸಂವಿದೇ' ಎಂದು ಸೂಚಿಸು ವರು ಕರ್ಮವು ಮೋಕ್ಷಸಾಧನವಲ್ಲ, ಜ್ಞಾನವೇ ಮೋಕ್ಷಸಾಧನವೆಂಬುದನ್ನೂ ಇದರಿಂದ ಸೂಚಿಸಿರುವರು ಹೀಗೆ ಈ ಗ್ರಂಥದ ವಿಷಯ ಪ್ರಯೋಜನ ಸಂಬಂಧಗಳನ್ನು ವಿವರಿಸಿ ಗ್ರಂಥದ ಆರಂಭಣೀಯತ್ವವನ್ನು ಸಮರ್ಥಿಸಿರುವರು

**ಸದಾಗಮಗಳು.**

3. **ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ ।**
**ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಮ್ ॥**
**ಯೇ ಚಾನುಯಾಯಿನಸ್ತ್ವೇಷಾಂ ಸರ್ವೇ ತೇ ಚ ಸದಾಗಮಾಃ ।**
**ದುರಾಗಮಾಃ ತದನ್ಯೇ ಯೇ ತೈರ್ನ ಜ್ಞೇಯೋ ಜನಾರ್ದನಃ ॥**
**ಜ್ಞೇಯ ಏತೈಃ ಸದಾ ಯುಕ್ತೈಃ ಭಕ್ತಿಮದ್ಭಿಃ ಸುನಿಷ್ಠಿತೈಃ ।**
**ನ ಚ ಕೇವಲತರ್ಕೇಣ ನಾಕ್ಷಜೇನ ನ ಕೇನಚಿತ್ ॥**
**ಕೇವಲಾಗಮವಿಜ್ಞೇಯೋ ಭಕ್ತೈರೇವ ನ ಚಾನ್ಯಥಾ ॥**

**ಇತಿ ಬ್ರಹ್ಮಾಂಡೇ ॥**

**ಅನುವಾದ**—ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ನಾಲ್ಕು ವೇದಗಳು, ಸಮಗ್ರವಾದ ಪಂಚರಾತ್ರ, ಮೂಲರಾಮಾಯಣ, ಇವುಗಳಿಗೆ ಅನುಗುಣವಾದ ಪುರಾಣಗಳು ಮತ್ತು ಮಾನವಧರ್ಮ ಶಾಸ್ತ್ರಾದಿಗಳು ಇವೆಲ್ಲ ಸದಾಗಮ ಗಳು ಇವುಗಳಿಗೆ ವಿರುದ್ಧವಾದವುಗಳೂ ಉದಾಸೀನವಾದವುಗಳೂ ದುರಾಗಮಗಳು. ಹೀಗೆ ವಿರುದ್ಧವಾದವುಗಳಿಂದ ಜನಾರ್ದನನ ಜ್ಞಾನವಾಗುವದಿಲ್ಲ. ವೇದಾದಿಸದಾಗಮ ಗಳಲ್ಲಿ ಯಾವಾಗಲೂ ಆದರದಿಂದ ನಿರತರಾದವರೂ ಸುದೃಢವಾದ ಭಕ್ತಿಯುಳ್ಳವರೂ ಈ ಸದಾಗಮಗಳಿಂದ ಪರಮಾತ್ಮನ ಜ್ಞಾನವನ್ನು ಪಡೆಯುವರು ವೇದಾದಿಗಳಿಗೆ ಅನುಕೂಲವಿಲ್ಲದ ಕೇವಲ ತರ್ಕದಿಂದಾಗಲೀ ಪ್ರತ್ಯಕ್ಷದಿಂದಾಗಲೀ ಅರ್ಥಾಪತ್ತ್ಯಾದಿ ಇನ್ನಿತರ ಪ್ರಮಾಣಗಳಿಂದಾಗಲೀ ಪರಮಾತ್ಮನ ಜ್ಞಾನ ದೊರೆಯುವದಿಲ್ಲ. ಕೇವಲ

ಸದಾಗಮಗಳಿಂದಲೇ ಅವನ ಜ್ಞಾನವಾಗುವದು ಅಭ್ಯಾಸ, ನಿಷ್ಠೆ ಮತ್ತು ಭಕ್ತಿಯುಳ್ಳವರಿಗೇ ಆಗುವದು. ಇವಿಲ್ಲದವರಿಗೆ ಆಗುವದಿಲ್ಲ ಬೇರೆ ಪ್ರಮಾಣಗಳಿಂದಲೂ ಆಗುವದಿಲ್ಲ—ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ

**ವಿವರಣೆ**—ಪಂಚರಾತ್ರದಲ್ಲಿ ಬಂದ 'ವಾಸುದೇವಾತ್ ಸಂಕರ್ಷಣೋ ನಾಮ ಜೀವೋ ಜಾಯತೇ । ಸಂಕರ್ಷಣಾತ್ ಪ್ರದ್ಯುಮ್ನಸಂಜ್ಞಕಂ ಮನೋ ಜಾಯತೇ' ಇತ್ಯಾದಿ ವಾಕ್ಯಗಳು ಅಪ್ರಮಾಣವೆಂದು ಕೆಲವರು ಹೇಳುವರು ಇದನ್ನು ನಿರಾಕರಿಸಲು ಅಖಿಲ ಪಂಚರಾತ್ರವೂ ಪ್ರಮಾಣ ಎಂದು ಹೇಳಲಾಗಿದ ಈ ವಾಕ್ಯಗಳ ಪ್ರಾಮಾಣ್ಯವನ್ನು 'ಜೀವಾಭಿಮಾನಿಶೇಷಸ್ಯ ನಾಮ್ನಾ ಸಂಕರ್ಷಣಸ್ಯ ತು' ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಸಮರ್ಥಿಸಲಾಗಿದೆ (ಶ್ರೀ ಟಿ). ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನವಾದ ಮೂಲ ರಾಮಾಯಣವೊಂದಿದೆ ಎಂಬುದಕ್ಕೆ 'ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಮ್' ಇತ್ಯಾದಿಯಾದ ವಾಲ್ಮೀಕಿ ರಾಮಾಯಣದ ವಚನವೇ ಪ್ರಮಾಣವು (ವ್ಯಾ ಟಿ). ವೇದಗಳನ್ನು ಆದರದಿಂದ ಅಭ್ಯಾಸಮಾಡದವರು ವೈಶೇಷಿಕರು ಅಭ್ಯಾಸ ಮಾಡಿದರೂ ಭಕ್ತಿಯಿಲ್ಲದವರು ಮೀಮಾಂಸಕರು

**ಕೇವಲ ತರ್ಕ, ಪ್ರತ್ಯಕ್ಷಾದಿಗಳು ಪರಮಾತ್ಮನನ್ನು ತಿಳಿಸಿಕೊಡಲಾರವು ಎಂಬುದಕ್ಕೆ ಪ್ರಮಾಣ ವಚನಗಳು.**

**4. ನಾವೇದವಿನ್ಮನುತೇ ತಂ ಬೃಹಂತಂ ಸರ್ವಾನುಭೂಮಾತ್ಮಾನಂ**
**ಸಾಂಪರಾಯೇ—ಇತಿ ತೈತ್ತಿರೀಯಶ್ರುತಿಃ ।**
**ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾ ಅನ್ಯೇನೈವ**
**ಸುಜ್ಞಾನಾಯ ಪ್ರೇಷ್ಠ—ಇತಿ ಕಾಠಕಶ್ರುತಿಃ ।**
**ನೇಂದ್ರಿಯಾಣಿ ನಾನುಮಾನಂ ವೇದಾ ಹಿ ಏವ ಏನಂ ವೇದಯಂತಿ**
**ತಸ್ಮಾದಾಹುಃ ವೇದಾಃ—ಇತಿ ಪಿಪ್ಪಲಾದಶ್ರುತಿಃ ।**

**ಅನುವಾದ**—"ವೇದಾದಿ ಸದಾಗಮಗಳನ್ನು ತಿಳಿಯದೇ ಇರುವವನು ಗುಣಪರಿಪೂರ್ಣನೂ ಸರ್ವಜ್ಞನೂ ಆದ ಪರಮಾತ್ಮನನ್ನು ತಿಳಿದುಕೊಳ್ಳಲಾರನು. ಶ್ರುತಿಯು ಮೋಕ್ಷಪ್ರಾಪ್ತಿಗಾಗಿ ಪರಮಾತ್ಮನ ಜ್ಞಾನವನ್ನು ಉಪದೇಶಿಸುವದು" ಎಂದು ತೈತ್ತಿರೀಯ ಶ್ರುತಿಯು ಹೇಳುವದು.

"ಪರಮಾತ್ಮವಿಷಯಕವಾದ ಜ್ಞಾನವು ಶುಷ್ಕತರ್ಕದಿಂದ ಬರುವದೂ ಇಲ್ಲ, ಹೋಗುವದೂ ಇಲ್ಲ ಜೀವೇಶ್ವರಾದಿ ಭೇದಜ್ಞಾನವುಳ್ಳ, ಭಗವದ್ಭಕ್ತ್ಯಾದಿಗಳುಳ್ಳ ಆಚಾರ್ಯರಿಂದ ವೇದಪ್ರವಚನಾದಿಗಳ ಮೂಲಕ ದೊರೆತ ಜ್ಞಾನವೇ ಪರಮಾತ್ಮನ ಸಾಕ್ಷಾತ್ಕಾರವನ್ನು ಒದಗಿಸುವದು" ಎಂದು ಕಾಠಕಶ್ರುತಿಯಲ್ಲಿ ಹೇಳಿದೆ.

" ಇಂದ್ರಿಯಗಳಾಗಲೀ ಅನುಮಾನವಾಗಲೀ ಪರಮಾತ್ಮನನ್ನು ತಿಳಿಸಿಕೊಡುವದಿಲ್ಲ. ವೇದಗಳೇ ಅವನನ್ನು ತಿಳಿಸಿಕೊಡುವವು ಆದುದರಿಂದಲೇ ಅವುಗಳನ್ನು ವೇದಗಳು ಎಂದು ಕರೆಯುವರು " ಎಂದು ಪಿಪ್ಪಲಾದಶ್ರುತಿಯಲ್ಲಿ ಹೇಳಿದೆ

ವಿವರಣೆ—ವೇದಶಬ್ದದಿಂದ ಎಲ್ಲ ಸದಾಗಮಗಳನ್ನೂ ತೆಗೆದುಕೊಳ್ಳಬೇಕು. ಸಾಂಪರಾಯ ಅಂದರೆ ಮೋಕ್ಷವು 'ಆಪನೇಯಾ' ಎಂಬಲ್ಲಿ ಬಂದ 'ಆ' 'ಅಪ' ಎಂಬ ಉಪಸರ್ಗಗಳನ್ನು 'ಆನೇಯಾ' 'ಅಪನೇಯಾ' ಎಂದು ಜೋಡಿಸಿಕೊಂಡು, ಬರುವದೂ ಇಲ್ಲ, ಹೋಗುವದೂ ಇಲ್ಲ ಎಂದು ಎರಡು ರೀತಿಯಾಗಿ ವಾಕ್ಯಾರ್ಥವನ್ನು ಹೊಂದಿಸಿಕೊಳ್ಳಬೇಕು 'ಅನ್ಯ' ಅಂದರೆ ಜ್ಞಾನಿಯೂ ಭಗವದ್ಭಕ್ತನೂ ಆದ ಆಚಾರ್ಯನು, ಜೀವೇಶ್ವರ ಭೇದಜ್ಞಾನವುಳ್ಳವನು

**ವೇದೇತಿಹಾಸಗಳು ಪ್ರಮಾಣಭೂತವಾದವು.**

**5. ನ ಚ ಏತೇಷಾಂ ವಚನಾನಾಮೇವ ಅಪ್ರಾಮಾಣ್ಯಾತ್ । ಅಪೌರುಷೇಯತ್ವಾದ್ ವೇದಸ್ಯ । ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಇತಿ ತದ್ಗೃಹೀತತ್ವಾಚ್ಚ ।**

ಅನುವಾದ—ವೇದಾದಿಸದಾಗಮಗಳೇ ಪರಮಾತ್ಮನನ್ನು ತಿಳಿಸಿಕೊಡುವವು, ಶುಷ್ಕತರ್ಕ ಮತ್ತು ಪ್ರತ್ಯಕ್ಷಾದಿ ಪ್ರಮಾಣಗಳು ತಿಳಿಸಿಕೊಡಲಾರವು ಎಂಬುದನ್ನು ಸಮರ್ಥಿಸಲು ನೀವು ಕೊಟ್ಟ ವಚನಗಳೇ ಅಪ್ರಮಾಣ ಎಂದು ಹೇಳುವದು ಸರಿಯಲ್ಲ. ಯಾಕಂದರೆ ವೇದಗಳು ಅಪೌರುಷೇಯವಾಗಿರುವವು ಇತಿಹಾಸ–ಪುರಾಣಗಳೂ ಐದನೆಯ ವೇದ ಎಂದು ವೇದಗಳಿಗ ಸಮಾನವೆಂದು ಪರಿಗಣಿಸಲ್ಪಟ್ಟಿರುವವು.

ವಿವರಣೆ—ಅನೃತತ್ವ, ಸ್ವವ್ಯಾಹತಿ, ಪುನರುಕ್ತಿ, ನಿರರ್ಥಕತ್ವ, ಸಂವಾದರಹಿತತ್ವ ಇತ್ಯಾದಿ ದೋಷಗಳಿದ್ದ ವಾಕ್ಯಗಳು ಅಪ್ರಮಾಣವೆನಿಸುವವು ಆದರೆ ಈ ಯಾವ ದೋಷಗಳೂ ವೇದಗಳಲ್ಲಿ ಇಲ್ಲ (ಟೀಕಾದಲ್ಲಿ ಈ ದೋಷಗಳು ವೇದದಲ್ಲಿ ಇರುವವು ಎಂದು ಪೂರ್ವಪಕ್ಷ ಮಾಡಿ ಇವನ್ನು ವಿವರವಾಗಿ ನಿರಾಕರಿಸಿರುವರು ) ವೇದಗಳು ಅಪೌರುಷೇಯವಾದವುಗಳು. ಪುರುಷನು ಅಜ್ಞಾನ, ವಿಪರೀತಜ್ಞಾನ, ಪ್ರಮಾದ, ಇಂದ್ರಿಯಗಳು ಪಟುವಾಗಿ ಇಲ್ಲದೇ ಇರುವದು ಇತ್ಯಾದಿ ಕಾರಣದಿಂದ ಅನ್ವಯರಹಿತವಾದ ಅಥವಾ ವಿಪರೀತವಾದ ಅನ್ವಯವಿರುವ ವಾಕ್ಯಗಳನ್ನು ಪ್ರಯೋಗಿಸುವನು ಇದರಿಂದ ವಾಕ್ಯಾರ್ಥ ಬೋಧವೇ ಆಗುವದಿಲ್ಲ ಅಥವಾ ವಿಪರೀತಬೋಧವಾಗುವದು. ಅಪೌರುಷೇಯವಾದ ವೇದಗಳಿಗೆ ಈ ದೋಷಗಳ ಅವಕಾಶವಿಲ್ಲ. ಆದುದರಿಂದ ಅವು ಸರಿಯಾಗಿಯೇ ಬೋಧಿಸುವವು. ಇತಿಹಾಸ–ಪುರಾಣಗಳೂ ವೇದಕ್ಕೆ ಸಮಾನವೆಂದು ಪರಿಗಣಿಸಲ್ಪಟ್ಟಿರುವದರಿಂದ ಅವೂ ಪ್ರಮಾಣವಾಗಿವೆ. ವೇದಾನುಕೂಲವಾದ ಇತಿಹಾಸ–ಪುರಾಣಗಳು ಮಾತ್ರ ಇಲ್ಲಿ ಅಭಿಪ್ರೇತವಾಗಿವೆ. ವಿರುದ್ಧವಾದವು ಅಲ್ಲ.

ಧರ್ಮಾದಿಗಳ ಸಿದ್ಧಿಗಾಗಿ ಅಪೌರುಷೇಯ ವಾಕ್ಯವನ್ನು ಒಪ್ಪಬೇಕಾಗುವುದು.

**6 ನ ಚ ಅಪೌರುಷೇಯಂ ವಾಕ್ಯಮೇವ ನಾಸ್ತೀತಿ ವಾಚ್ಯಮ್ । ತದಭಾವೇ ಸರ್ವಸಮಯಾಭಿಮತಧರ್ಮಾದ್ಯಸಿದ್ಧೇಃ । ಯಸ್ಯ ತೌ ನ ಅಭಿಮತೌ ನ ಅಸೌ ಸಮಯೀ ಸಮಯಪ್ರಯೋಜನಾಭಾವಾತ್ । ನಚ ತೇನ ಲೋಕೋಪಕಾರಃ । ಧರ್ಮಾದ್ಯಭಾವಜ್ಞಾನೇ ಪರಸ್ಪರಹಿಂಸಾದಿನಾ ಅಪಕಾರಸ್ಯೈವ ಪ್ರಾಪ್ತೇಃ । ನ ಚ ಉಪಕಾರೇಣ ತಸ್ಯ ಪ್ರಯೋಜನಮ್ । ಅದೃಷ್ಟಾಭಾವಾತ್ । ಅತೋ ಧರ್ಮಾದ್ಯಭಾವಂ ವದತಾ ಸ್ವಸಮಯಸ್ಯಾ-ನರ್ಥಕ್ಯಮಂಗೀಕೃತಮೇವೇತಿ ನಾಸೌ ಸಮಯೀ ।**

**ಅನುವಾದ**—ಅಪೌರುಷೇಯವಾದ ವಾಕ್ಯವೇ ಇಲ್ಲವೆಂದು ಹೇಳುವದು ಸರಿಯಲ್ಲ. ಅಪೌರುಷೇಯವಾದ ವಾಕ್ಯಗಳಿರುವದನ್ನು ಅಂಗೀಕರಿಸದಿದ್ದರೆ ಎಲ್ಲ ದಾರ್ಶನಿಕರಿಗೂ ಒಪ್ಪಿಗೆಯಾದ ಧರ್ಮ, ಅಧರ್ಮ ಇತ್ಯಾದಿ ಅತೀಂದ್ರಿಯ ವಸ್ತುಗಳಿರುವದನ್ನೇ ಸಮರ್ಥಿಸಲು ಸಾಧ್ಯವಾಗುವದಿಲ್ಲ ಯಾರು ಧರ್ಮ, ಅಧರ್ಮ ಇತ್ಯಾದಿ ಅತೀಂದ್ರಿಯ ವಸ್ತುಗಳನ್ನೇ ಒಪ್ಪುವದಿಲ್ಲವೋ ಅವರು ದಾರ್ಶನಿಕರೇ ಅಲ್ಲ ಇಂಥ ದರ್ಶನಗಳಿಗೆ ಪ್ರತಿಪಾದ್ಯ ವಿಷಯವೂ ಪ್ರಯೋಜನವೂ ಇರುವದಿಲ್ಲ ಧರ್ಮ, ಅಧರ್ಮ ಇತ್ಯಾದಿಗಳು ಇಲ್ಲವೆಂದು ಪ್ರತಿಪಾದಿಸುವದೇ ವಿಷಯವೆಂದರೆ ಇಂಥ ವಿಷಯಗಳ ಪ್ರತಿಪಾದನೆಯಿಂದ ಲೋಕಕ್ಕೆ ಯಾವ ಉಪಕಾರವೂ ಆಗುವದಿಲ್ಲ ಪ್ರತ್ಯುತ ಧರ್ಮಾದಿಗಳು ಇಲ್ಲವೆಂದು ತಿಳಿದುಕೊಂಡು ಜನರು ಪರಸ್ಪರ ಹಿಂಸೆಯಲ್ಲಿ ತೊಡಗುವುದರಿಂದ ಲೋಕಕ್ಕೆ ಅಪಕಾರವೇ ಆಗುವದು. ಇಂಥ ಅನಿಷ್ಟ ಪರ್ಯವಸಾಯಿಯಾದ ಶಾಸ್ತ್ರರಚನಾರೂಪವಾದ ಉಪಕಾರದಿಂದ ಇಂಥ ಶಾಸ್ತ್ರವನ್ನು ಬರೆದವನಿಗೂ ಯಾವ ದೃಷ್ಟ ಪ್ರಯೋಜನವಿಲ್ಲ. ಅದೃಷ್ಟವನ್ನಂತೂ ಅವನು ಒಪ್ಪುವದಿಲ್ಲ. ಆದುದರಿಂದ ಧರ್ಮಾದಿಗಳೇ ಇಲ್ಲವೆಂದು ಹೇಳುವವನು ತನ್ನ ದರ್ಶನವು ನಿರರ್ಥಕವೆಂದು ಅಂಗೀಕಾರ ಮಾಡಲೇಬೇಕಾಗುವದರಿಂದ ಅಂಥವನು ದಾರ್ಶನಿಕನೇ ಅಲ್ಲ

**ವಿವರಣೆ**—ವಾಕ್ಯವಾಗಿರುವದು ಅಪೌರುಷೇಯವಾಗಿರಲಾರದು ಅಪೌರುಷೇಯವಾಗಿರುವದು ವಾಕ್ಯವಾಗಲಾರದು ವಾಕ್ಯತ್ವ, ಅಪೌರುಷೇಯತ್ವ ಈ ಎರಡೂ ಧರ್ಮಗಳೂ ಒಂದೇ ಕಡೆಗೆ ಇರಲಾರವು. ಇವು ಒಂದೇ ಕಡೆಗೆ ಇರುವದು ಅಸಂಭಾವಿತ. ಅಸಂಭಾವಿತವಾದದ್ದನ್ನು ಸಾಧನಮಾಡಲು ಹೊರಡುವದೇ ವ್ಯರ್ಥಪ್ರಯತ್ನ. ಆದ್ದರಿಂದ ವೇದಗಳ ಅಪೌರುಷೇಯತ್ವವನ್ನು ಹೇಳುವದು ಸರಿಯಲ್ಲ ಎಂಬ ಶಂಕೆಯನ್ನು ಇಲ್ಲಿ ಪರಿಹರಿಸಿರುವರು. ಎಲ್ಲ ದಾರ್ಶನಿಕರೂ ಧರ್ಮ, ಅಧರ್ಮ ಇತ್ಯಾದಿ ಅತೀಂದ್ರಿಯವಸ್ತುಗಳನ್ನು ಒಪ್ಪಿರುವದರಿಂದ ಮತ್ತು ಅವುಗಳನ್ನು ಪ್ರಮಾಣಾಂತರಗಳಿಂದ ನಿಶ್ಚಯಿಸಲು ಸಾಧ್ಯವಾಗುವದಿಲ್ಲವಾದ್ದರಿಂದ ಅಪೌರುಷೇಯ ವಾಕ್ಯವನ್ನು ಒಪ್ಪಲೇಬೇಕೆಂದು ಹೇಳಿರುವರು. ಇನ್ನು ಚಾರ್ವಾಕರು ಧರ್ಮ, ಅಧರ್ಮ ಇತ್ಯಾದಿ ಅತೀಂದ್ರಿಯವಸ್ತುಗಳನ್ನು ಒಪ್ಪುವದೇ ಇಲ್ಲ. ಹೀಗಿರುವದರಿಂದ ಅವರ ದರ್ಶನವು ದರ್ಶನವೇ ಅಲ್ಲ. ಸಮಯ

ಅಂದರೆ ದರ್ಶನ, ಸಮಯೀ ಅಂದರೆ ದಾರ್ಶನಿಕ ನ ಸಮಯೀ ದಾರ್ಶನಿಕನಲ್ಲ. ಅವರ ದರ್ಶನಕ್ಕೆ ವಿಷಯಪ್ರಯೋಜನಗಳೇ ಇಲ್ಲ ಪ್ರತ್ಯಕ್ಷವಾದ ವಸ್ತುಗಳಿಗೆ ಪ್ರತ್ಯಕ್ಷವೇ ಪ್ರಮಾಣ, ಶಾಸ್ತ್ರದ ಅಗತ್ಯವಿಲ್ಲ ಪ್ರತ್ಯಕ್ಷವಲ್ಲದ ವಿಷಯಗಳನ್ನು ಅವರು ಒಪ್ಪುವದೇ ಇಲ್ಲ. ಅಂದಮೇಲೆ ಅವರ ಶಾಸ್ತ್ರಕ್ಕೆ ವಿಷಯವೇ ಇಲ್ಲ ಅಂತೆಯೇ ಪ್ರಯೋಜನವೂ ಇಲ್ಲ ವೈದಿಕರು 'ಧರ್ಮ' ಎಂಬ ಭ್ರಾಂತಿಯನ್ನು ಹುಟ್ಟಿಸಿ ಜನರ ಕಾಮೋಪಭೋಗಗಳಿಗೆ ಅಡ್ಡಿಮಾಡುತ್ತಿರುವರು, ವ್ರತನಿಯಮಗಳ ಕಷ್ಟಕೊಡುತ್ತಿರುವರು, ಇದನ್ನು ತಡೆಯಲು ಧರ್ಮದ ಅಭಾವವನ್ನು ಪ್ರತಿಪಾದಿಸುವದೇ ಚಾರ್ವಾಕದರ್ಶನದ ವಿಷಯ ಎಂದು ಹೇಳುವದು ಸರಿಯಲ್ಲ ಧರ್ಮದ ನಿಯಂತ್ರಣದಿಂದ ಜನರು ಪರಸ್ಪರ ಹಿಂಸಾದಿಗಳನ್ನು ಬಿಟ್ಟಿರುವರು ಅಥವಾ ಕಡಿಮೆ ಮಾಡಿರುವರು ಅವರನ್ನು ಹೀಗೆ ನಿಯಂತ್ರಿಸುವ 'ಧರ್ಮ' ವಿಲ್ಲವೆಂದು ಉಪದೇಶಿಸಿದರೆ ಪರಸ್ಪರ ಹಿಂಸೆಯಲ್ಲಿ ಅತಿಯಾಗಿ ತೊಡಗುವರು ಇಂಥ ಶಾಸ್ತ್ರೋಪದೇಶಕರನ್ನೇ ದ್ವೇಷಿಸುವರು ಧರ್ಮವಿದ್ದರೂ ಅಲ್ಪಹಿಂಸಯಿದೆ ಎಂಬ ಕಾರಣ ದಿಂದ ಧರ್ಮವನ್ನೇ ಬಿಡಲು ಹೇಳಿದರೆ ಅದು ಮಹಾಹಿಂಸೆಯಲ್ಲಿ ಪರ್ಯವಸಾನವಾಗುವದು ಇದರಿಂದ ಲೋಕಕ್ಕೆ ಅಪಕಾರವೇ ಆಗುವದು ಇಂಥ ಶಾಸ್ತ್ರ ಬರೆದವರಿಗೂ ಯಾವ ದೃಷ್ಟಪ್ರಯೋಜನವಿಲ್ಲ ಪ್ರತ್ಯುತ ತಪ್ಪುದಾರಿಗೆಳೆದರೆಂದು ಜನರು ಇವರನ್ನು ದ್ವೇಷಿಸು ವರು ಆದುದರಿಂದ ಧರ್ಮ, ಅಧರ್ಮಾದಿ ಅತೀಂದ್ರಿಯವಸ್ತುಗಳನ್ನು ಒಪ್ಪದ ದರ್ಶನವು ದರ್ಶನವೇ ಅಲ್ಲ ಅವುಗಳನ್ನು ಒಪ್ಪುವವರು ಪ್ರಮಾಣಾಂತರದಿಂದ ಅವು ಸಿದ್ಧವಾಗದೇ ಇರುವದರಿಂದ ಅಪೌರುಷೇಯವಾಕ್ಯವನ್ನು ಒಪ್ಪಲೇಬೇಕು

**ಪೌರುಷೇಯ ವಾಕ್ಯಗಳಿಂದ ಧರ್ಮಾಧರ್ಮಗಳು ಸಿದ್ಧಿಸಲಾರವು.**

**7. ನ ಚ ಪೌರುಷೇಯೇಣ ವಾಕ್ಯೇನ ತತ್ಸಿದ್ಧಿಃ । ಅಜ್ಞಾನ-ವಿಪ್ರಲಂಭಯೋಃ ಪ್ರಾಪ್ತೇಃ । ನ ಚ ತದರ್ಥತ್ವೇನ ಸರ್ವಜ್ಞಃ ಕಲ್ಪ್ಯೇತ । ಅನ್ಯತ್ರ ಅದೃಷ್ಟಸ್ಯ ಸರ್ವಜ್ಞತ್ವಸ್ಯ ಕಲ್ಪನಂ ತಸ್ಯ ಅವಿಪ್ರಲಂಭಕತ್ವಕಲ್ಪನಂ ತಸ್ಯ ತತ್ಕೃತತ್ವಕಲ್ಪನಂ ಚೇತಿ ಕಲ್ಪನಾಗೌರವಪ್ರಾಪ್ತೇಃ । ಅಪೌರುಷೇಯ-ವಾಕ್ಯಾಂಗೀಕಾರೇ ನ ಕಿಂಚಿತ್ ಕಲ್ಪ್ಯಮ್ ।**

ಅನುವಾದ—ಪೌರುಷೇಯ ವಾಕ್ಯದಿಂದ ಧರ್ಮ, ಅಧರ್ಮ ಇತ್ಯಾದಿ ಅತೀಂದ್ರಿಯ ಪದಾರ್ಥಗಳು ಸಿದ್ಧವಾಗಲಾರವು ಯಾಕಂದರೆ ಪುರುಷರಲ್ಲಿ ಅಜ್ಞಾನ, ಮೋಸಮಾಡುವಿಕೆ ಇತ್ಯಾದಿ ದೋಷಗಳಿರುವ ಸಂಭವವಿರುತ್ತದೆ ಪೌರುಷೇಯ ವಾಕ್ಯಗಳಿಂದ ಧರ್ಮಾದಿಗಳ ಸಿದ್ಧಿಯನ್ನು ಉಪಪಾದಿಸಲು ಸರ್ವಜ್ಞನಾದ ಓರ್ವ ಪುರುಷನನ್ನು ಕಲ್ಪಿಸೋಣ (ಅಥವಾ ಅಜ್ಞಾನ, ಮೋಸಮಾಡುವಿಕೆ ಇತ್ಯಾದಿ ದೋಷಗಳು ಇಲ್ಲದಂತೆ ಮಾಡಲು ಸರ್ವಜ್ಞನಾದ ಓರ್ವ ಪುರುಷನನ್ನು ಕಲ್ಪಿಸೋಣ) ಎಂಬುದು ಸರಿಯಲ್ಲ. ಬೇರೆ ಯಾರಲ್ಲಿಯೂ ಕಂಡುಬರದ ಮತ್ತು ಯಾವ ಪ್ರಮಾಣವೂ ಇಲ್ಲದ ಸರ್ವಜ್ಞತ್ವವನ್ನು ಒಬ್ಬ ಪುರುಷನಿಗೆ ಕಲ್ಪಿಸುವದು, ಮತ್ತು ಅವನಿಗೆ ಪ್ರಮಾಣವಿಲ್ಲದೆ ಅವಿಪ್ರಲಂಬಕತ್ವವನ್ನು ಕಲ್ಪಿಸು

ವುದು, ಈ ಪುರುಷನು ಧರ್ಮಾಧರ್ಮಗಳನ್ನು ಬೋಧಿಸುವ ವಾಕ್ಯಗಳನ್ನು ರಚಿಸಿದನು ಎಂದು ಕಲ್ಪಿಸುವದು ಎಂದು ಕಲ್ಪನಾಗೌರವವು ಬರುವದು ಆದರೆ (ಧರ್ಮಾಧರ್ಮಗಳ ಸಿದ್ಧಿಗಾಗಿ) ಅಪೌರುಷೇಯ ವಾಕ್ಯವನ್ನು ಅಂಗೀಕರಿಸಿದರೆ ಬೇರೆ ಇನ್ನಾವುದನ್ನೂ ಕಲ್ಪಿಸುವ ಅಗತ್ಯವಿಲ್ಲ.

**ವಿವರಣೆ**—'ಅನ್ಯತ್ರ ಅದೃಷ್ಟಸ್ಯ' ಬೇರೆ ಯಾರಲ್ಲಿಯೂ ಕಂಡುಬರದ ಯಾವ ಪ್ರಮಾಣದಿಂದಲೂ ಸಿದ್ಧವಾಗದ ಎಂದು ಟೀಕಾದಲ್ಲಿ ಅರ್ಥಮಾಡಿದ್ದಾರೆ ಪ್ರತ್ಯಕ್ಷ, ಅನುಮಾನ, ಉಪಮಾನ, ಅರ್ಥಾಪತ್ತಿ, ಅಭಾವ ಈ ಯಾವ ಪ್ರಮಾಣವೂ ಓರ್ವ ಪುರುಷನ ಸರ್ವಜ್ಞತ್ವವನ್ನು ಸಾಧಿಸಲು ಹೇಗೆ ಸಹಾಯಕವಾಗುವದಿಲ್ಲ ಎಂಬುದನ್ನು ವಿವರವಾಗಿ ತೋರಿಸಿದ್ದಾರೆ. ಆರ್ಹತ, ಬೌದ್ಧ ಮತ್ತು ನ್ಯಾಯ ವೈಶೇಷಿಕರು ಓರ್ವ ಸರ್ವಜ್ಞನನ್ನು ಸಾಧಿಸುವ ರೀತಿಯನ್ನು ನಿರಾಕರಿಸಿದ್ದಾರೆ ಅಪೌರುಷೇಯ ವಾಕ್ಯವನ್ನು ಒಪ್ಪದವರು ಪೌರುಷೇಯಾಗಮದಿಂದ ಸರ್ವಜ್ಞನನ್ನು ಸಿದ್ಧಪಡಿಸಲು ಬರುವದಿಲ್ಲವೆಂಬುದನ್ನು ತೋರಿಸಿದ್ದಾರೆ. (ಸರ್ವಜ್ಞನು ಸಿದ್ಧನಾದಮೇಲೆ ಅವನು ರಚಿಸಿದ ಪೌರುಷೇಯ ಆಗಮದ ಪ್ರಾಮಾಣ್ಯವು ಸಿದ್ಧವಾಗುವದು. ಈ ಆಗಮದ ಪ್ರಾಮಾಣ್ಯ ಸಿದ್ಧವಾದರೆ ಅವನ ಸರ್ವಜ್ಞತ್ವ ಸಿದ್ಧವಾಗುವದು) ಹೀಗೆ ಯಾವ ಪ್ರಮಾಣದಿಂದಲೂ ಸರ್ವಜ್ಞನು ಸಿದ್ಧನಾಗದೇ ಇರುವದರಿಂದ ಅಂಥ ಸರ್ವಜ್ಞನಿಂದ ರಚಿತವಾದ ಪೌರುಷೇಯಾಗಮವು ಧರ್ಮಾಧರ್ಮಾದಿಗಳಿಗೆ ಪ್ರಮಾಣವೆಂದು ಹೇಳಲು ಶಕ್ಯವಾಗುವದಿಲ್ಲ ಆದುದರಿಂದ ಧರ್ಮಾಧರ್ಮಗಳ ಸಿದ್ಧಿಗಾಗಿ ಅಪೌರುಷೇಯ ವಾಕ್ಯವನ್ನು ಒಪ್ಪಲೇಬೇಕು ವೇದಗಳೇ ಇಂಥ ಅಪೌರುಷೇಯ ವಾಕ್ಯಗಳು

**ಅಪೌರುಷೇಯತ್ವದ ಸಮರ್ಥನೆ.**

8. ಅಪೌರುಷೇಯತ್ವಂ ಚ ಸ್ವತ ಏವ ಸಿದ್ಧಮ್ । ವೇದಕರ್ತುಃ ಅಪ್ರಸಿದ್ಧೇಃ । ಅಪ್ರಸಿದ್ಧೌ ಚ ಕರ್ತುಃ ತತ್ಕಲ್ಪನೇ ಕಲ್ಪನಾಗೌರವಮ್ । ಅಕಲ್ಪನೇ ಚ ಅಕರ್ತೃಕತ್ವಂ ಸಿದ್ಧಮೇವ । ನ ಚ ಲೌಕಿಕವಾಕ್ಯವತ್ ಸಕರ್ತೃಕತ್ವಮ್ । ತಸ್ಯ ಅಕರ್ತೃಕತ್ವಪ್ರಸಿದ್ಧ್ಯಭಾವಾತ್ । ನ ಚ ಕೇನಚಿತ್ ಕೃತ್ವಾ ವೇದ ಇತ್ಯುಕ್ತಂ ವೇದಸಮಂ ಪರಂಪರಾಭಾವಾತ್ । ನ ಚ ಸ್ವಯಂ ಪ್ರತಿಭಾತವೇದ್ಯೈಃ ದೃಷ್ಟಮವೇದವಾಕ್ಯಂ ಭವತಿ ಪರಂಪರಾಸಿದ್ಧವೇದ ವಾಕ್ಯಾನುಸಾರಿತ್ವಾತ್ । ವೇದದ್ರಷ್ಟೄಣಾಮುಕ್ತಗುಣವತ್ತ್ವಾಚ್ಚ ತೇಷಾಮ್ । ಉಕ್ತಂ ಚ ಬ್ರಹ್ಮಾಂಡೇ—

ವಿಂಶಲ್ಲಕ್ಷಣತೋಽನೂನಃ ತಪಸ್ವೀ ಬಹುವೇದವಿತ್ ।
ವೇದ ಇತ್ಯೇವ ಯಂ ಪಶ್ಯೇತ್ ಸ ವೇದೋ ಜ್ಞಾನದರ್ಶನಾತ್ ॥

ಇತಿ ॥

**ಅನುವಾದ**—(ಅಪೌರುಷೇಯವಾಕ್ಯವಿರುವದು ಅಸಂಭಾವಿತವಲ್ಲ ಎಂದು ಪ್ರತಿಪಾದಿಸಿ ಅಸಂಭಾವನಾಶಂಕೆಯನ್ನು ಈಗಾಗಲೇ ಮೇಲಿನ ಪಂಕ್ತಿಗಳಲ್ಲಿ ಪರಿಹರಿಸಿದ್ದರಿಂದ) ವೇದಗಳ ಅಪೌರುಷೇಯತ್ವವು ಅನಾಯಾಸವಾಗಿಯೇ ಸಿದ್ಧವಾಗುವದು ವೇದಗಳಿಗೆ ಕರ್ತೃವು ಇರುವದು ಅಪ್ರಸಿದ್ಧವಾದ್ದರಿಂದ ಅವು ಅಪೌರುಷೇಯವೆಂದು ಸಿದ್ಧವಾಗುವದು ಅಪ್ರಸಿದ್ಧವಾದರೂ ಕರ್ತೃವು ಇರುವದನ್ನು ಕಲ್ಪಿಸಿದರೆ ಕಲ್ಪನಾಗೌರವ ಬರುವದು (ಯಾವ ಪ್ರಮಾಣದ ಆಧಾರವೂ ಇಲ್ಲದೆ ಒಬ್ಬ ಕರ್ತ, ಅವನ ಸರ್ವಜ್ಞತ್ವಗಳನ್ನು ಕಲ್ಪಿಸುವ ಕಲ್ಪನಾಗೌರವ ಬರುವದು) ಈ ಗೌರವವನ್ನು ತಪ್ಪಿಸಲು ವೇದಗಳಿಗೆ ಕರ್ತೃವನ್ನು ಕಲ್ಪಿಸುವದನ್ನು ಬಿಡಬೇಕಾದ್ದರಿಂದ ಅವುಗಳಿಗೆ ಕರ್ತೃವಿಲ್ಲವೆಂಬುದು ಸಿದ್ಧವಾಗುವದು ಲೌಕಿಕವಾಕ್ಯಗಳಿಗೆ ಕರ್ತೃವು ಓರ್ವನು ಅವಶ್ಯವಾಗಿ ಇರುವಂತೆ ವೇದವಾಕ್ಯಗಳಿಗೂ ಇರಬೇಕೆಂದು ಹೇಳುವದು ಸರಿಯಲ್ಲ (ಇವೆರಡರಲ್ಲಿಯೂ ಒಂದು ಮುಖ್ಯವಾದ ವ್ಯತ್ಯಾಸವಿದೆ) ಲೌಕಿಕವಾಕ್ಯಗಳಿಗೆ ಅಕರ್ತೃಕತ್ವಪ್ರಸಿದ್ಧಿ ಇಲ್ಲದೇ ಇರುವದರಿಂದ ಅವು ಸಕರ್ತೃಕವಾಗಿವೆ (ವೈದಿಕವಾಕ್ಯಗಳಿಗೆ ಅಕರ್ತೃಕತ್ವಪ್ರಸಿದ್ಧಿ ಇರುವದರಿಂದ ಅವು ಅಕರ್ತೃಕವಾಗಿವೆ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಕರ್ತೃವು ಇರುವದು ತಿಳಿದುಬರದೇ ಇರುವದೇ ಅಕರ್ತೃಕತ್ವಪ್ರಸಿದ್ಧಿಯು ) ಇನ್ನು ಯಾರಾದರೂ ತಾವು ರಚಿಸಿ ಅವೂ ವೇದ ಎಂದು ಹೇಳಿ ಅಕರ್ತೃಕ ಎಂದು ಅಕರ್ತೃಕತ್ವದ ಪ್ರಚಾರಮಾಡಿದರೂ ಅವು ವೇದಗಳಿಗೆ ಸಮಾನವಾಗಲಾರವು. ಇಂಥವಕ್ಕೆ ಅವಿಚ್ಛಿನ್ನಪರಂಪರೆಯಿರುವದಿಲ್ಲ (ಇವನ್ನು ಯಾರಿಂದ ಯಾರು ಕಲಿತರು ಎಂದು ಹುಡುಕುತ್ತ ಹೋದರೆ ರಚಿಸಿದವರ ಕಾಲದವರೆಗೆ ಮಾತ್ರ ಪರಂಪರೆ ಸಿಗುವದು ನಂತರ ನಿಂತುಹೋಗುವದು ಇದರಿಂದ ಆ ಕಾಲದಲ್ಲಿ ಕರ್ತೃವಿನ ಅನುಮಾನ ಮಾಡಬಹುದು ವೇದಗಳಿಗೆ ಹಾಗಲ್ಲ ಅನಾದಿಯಾಗಿ ಅಧ್ಯೇತೃ–ಅಧ್ಯಾಪಕ ಪರಂಪರೆಯಿರುವದು ) ಇನ್ನು ವೇದಗಳಿಗೂ ದ್ರಷ್ಟೃಋಷಿಗಳವರೆಗೆ ಮಾತ್ರ ಪರಂಪರೆಯಿರುವದರಿಂದ (ಯಾರಿಗೆ ವೇದಗಳು ಸ್ವಯಂ ಪ್ರತಿಭಾತವಾಗಿವೆಯೋ ಅಲ್ಲಿಯವರೆಗೆ ಮಾತ್ರ ಅಧ್ಯೇತೃ–ಅಧ್ಯಾಪಕ ಪರಂಪರೆಯಿರುವದರಿಂದ) ಅವೂ ಅವೇದವಾಕ್ಯ (ಅಂದರೆ ಸಕರ್ತೃಕವಾಕ್ಯ, ಪೌರುಷೇಯವಾಕ್ಯ) ಎಂದು ಏಕೆ ಹೇಳಬಾರದು ಎಂಬ ಶಂಕೆಯು ಸರಿಯಲ್ಲ. ಅವರು ಕಂಡ ವಾಕ್ಯಗಳೂ ಅನಾದಿಪರಂಪರಾಸಿದ್ಧ ವೇದವಾಕ್ಯಗಳೇ (ಅಂದರೆ ಅಕರ್ತೃಕವಾಕ್ಯಗಳೇ) ಆಗಿರುತ್ತವೆ. ವೇದದ್ರಷ್ಟಾರರಾದ ಋಷಿಗಳಿಗೆ ಇಂಥ ಅನಾದಿಪರಂಪರಾಸಿದ್ಧ ವೇದವಾಕ್ಯಗಳು ಸ್ಫುರಿಸುವ ಯೋಗ್ಯತೆಯಿರುತ್ತದೆ. " ಉತ್ತಮಪುರುಷನ ಮೂವತ್ತೆರಡು ಲಕ್ಷಣಗಳಲ್ಲಿ ಇಪ್ಪತ್ತಕ್ಕೆ ಕಡಿಮೆಯಾಗದಷ್ಟು ಲಕ್ಷಣಗಳುಳ್ಳವನೂ, ತಪಸ್ವಿಯೂ, ಬಹುವೇದಗಳ ಜ್ಞಾನಿಯೂ ಆದವನು ಜ್ಞಾನದೃಷ್ಟಿಯಿಂದ ಯಾವದನ್ನು ವೇದಮಂತ್ರವೆಂದು ಸಾಕ್ಷಾತ್ಕರಿಸುವನೋ ಅದು ವೇದ " ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ

**ವಿವರಣೆ** ಇಲ್ಲಿ 'ವೇದಃ ಅಪೌರುಷೇಯಃ ಅಪ್ರಮಿತಕರ್ತೃಕತ್ವಾತ್ ಗಗನವತ್' ಎಂಬ ಅನುಮಾನವು ಅಭಿಪ್ರೇತವಾಗಿದೆ. ವೇದಗಳಿಗೆ ಒಬ್ಬ ಕರ್ತೃವು ಇರುವನೆಂಬುದು ಯಾವ ಪ್ರಮಾಣದಿಂದಲೂ ತಿಳಿದುಬರುವದಿಲ್ಲ ಆದುದರಿಂದ ಅವು ಯಾರಿಂದಲೂ

ಕೃತವಾದವಲ್ಲ, ಅವು ಅಪೌರುಷೇಯ ವೇದಗಳಿಗೆ ಓರ್ವ ಕರ್ತನಿರುವನೆಂದು ಕಲ್ಪಿಸುವವರು ಅಂಥ ಒಬ್ಬ ಕರ್ತನನ್ನೂ ಅವನು ಸರ್ವಜ್ಞನೆಂಬುದನ್ನೂ ಕಲ್ಪಿಸಬೇಕಾಗುವದು ಇದು ಕಲ್ಪನಾಗೌರವ ಇನ್ನು 'ವೇದಃ ಸಕರ್ತೃಕಃ ವಾಕ್ಯತ್ವಾತ್ ಲೌಕಿಕವಾಕ್ಯವತ್' ವೇದಗಳೂ ವಾಕ್ಯರೂಪವಾಗಿರುವದರಿಂದ ಲೌಕಿಕವಾಕ್ಯಗಳಿಗೆ ಕರ್ತೃಗಳು ಇರುವಂತೆ ವೈದಿಕವಾಕ್ಯಗಳಿಗೂ ಓರ್ವ ಕರ್ತೃವು ಇರುವನು ಎಂದು ಕೆಲವರು ವಾದಿಸಬಹುದು ಆದರೆ ಇವುಗಳಲ್ಲಿ ಒಂದು ಮಹತ್ವದ ವ್ಯತ್ಯಾಸವಿದೆ ಲೌಕಿಕವಾಕ್ಯಗಳು 'ಸಕರ್ತೃಕ' ಎಂಬುದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿದುಬರುತ್ತದೆ ಆದರೆ ಪ್ರತ್ಯಕ್ಷಾದಿ ಯಾವ ಪ್ರಮಾಣದಿಂದಲೂ ವೇದಗಳಿಗೆ ಕರ್ತೃವಿರುವದು ಕಂಡುಬರುವದಿಲ್ಲ ಇವುಗಳಿಗೆ ಅಕರ್ತೃಕತ್ವದ ಪ್ರಸಿದ್ಧಿಯೇ ಇದೆ ಲೌಕಿಕವಾಕ್ಯಗಳಿಗೆ ಇಂಥ ಪ್ರಸಿದ್ಧಿಯಿಲ್ಲ ಗೂಢ ಕರ್ತೃಕವಾದ ಕೃತಿಗಳಿಗೂ, ಕರ್ತೃವಿದ್ದರೂ 'ಅಕರ್ತೃಕ' ಎಂದು ಪ್ರಚಾರಮಾಡಲ್ಪಟ್ಟ ಕೃತಿಗಳಿಗೂ ಹಾಗೂ ವೇದಗಳಿಗೂ ಒಂದು ವ್ಯತ್ಯಾಸವಿದ ಮೊದಲಿನ ಎರಡು ಗುಂಪಿಗೆ ಸೇರಿದ ಕೃತಿಗಳ ಅಧ್ಯೇತೃ–ಅಧ್ಯಾಪಕ ಪರಂಪರೆ ಒಂದು ಕಡೆ ಕುಂಠಿತವಾಗುತ್ತದೆ. ಆ ಕುಂಠಿತವಾದ ಹಂತದಲ್ಲಿ ಒಬ್ಬ ಕರ್ತನಿದ್ದನು, ಅವನು ಗೂಢನಾಗಿದ್ದಾನೆ ಅಥವಾ ಬುದ್ಧಿಪೂರ್ವಕ ಅಕರ್ತೃತ್ವ ಪ್ರಚಾರಮಾಡಿದ್ದಾನೆ ಎಂದು ಹೇಳಬಹುದು ಆದರೆ ವೇದಗಳ ಅಧ್ಯೇತೃ–ಅಧ್ಯಾಪಕ ಪರಂಪರೆ ಹಾಗೆ ಕುಂಠಿತವಾಗುವದಿಲ್ಲ ವೇದದ್ರಷ್ಟಾರರಾದ ವಸಿಷ್ಠಾದಿ ಋಷಿಗಳಿಗೂ ಅನೂಚಾನವಾಗಿ ಬಂದುದೇ ಸ್ವಯಂಪ್ರತಿಭಾತವಾಗುತ್ತದೆ ಉತ್ತಮಪುರುಷರ ಮೂವತ್ತೆರಡು ಲಕ್ಷಣಗಳಲ್ಲಿ ಇಪ್ಪತ್ತಕ್ಕೆ ಕಡಿಮೆಯಾಗದಷ್ಟು ಲಕ್ಷಣಗಳಿರುವವರಿಗೇ ವೇದಮಂತ್ರಗಳು ಪ್ರತಿಭಾತವಾಗುತ್ತವೆ ಆದುದರಿಂದ ವೇದಗಳು ಅಪೌರುಷೇಯ

**ಸ್ವತಃ ಪ್ರಾಮಾಣ್ಯಸಮರ್ಥನೆ.**

**9. ಪ್ರಾಮಾಣ್ಯಂ ಚ ಸ್ವತ ಏವ ಅನ್ಯಥಾ ಅನವಸ್ಥಾನಾತ್ । ನ ಚ ಉಕ್ತಯುಕ್ತ್ಯಧೀನತ್ವಂ ಪ್ರಾಮಾಣ್ಯಸ್ಯ । ಬುದ್ಧಿದೋಷನಿರಾಸಮಾತ್ರ-ಕಾರಣತ್ವಾತ್ ಯುಕ್ತೀನಾಮ್ । ಅದುಷ್ಟಬುದ್ಧೀನಾಂ ಸ್ವತ ಏವ ಸಿದ್ಧತ್ವಾಚ್ಚ ಪ್ರಾಮಾಣ್ಯಸ್ಯ । ನ ಚ ಆಕಾಂಕ್ಷಾಯಾಮೇವ ಪ್ರಮಾಣಾಂತರಾಪೇಕ್ಷತ್ವಾತ್ ಅನವಸ್ಥಾಭಾವ ಇತಿ ವಾಚ್ಯಮ್ । ಆಕಾಂಕ್ಷಾಯಾ ಏವ ಬುದ್ಧಿ-ದೋಷಾತ್ಮಕತ್ವಾತ್ ।**

**ದುಷ್ಟಬುದ್ಧೀನಾಮೇವ ಅಪ್ರಾಮಾಣ್ಯಶಂಕೇತಿ ಪರತಃ ಅಪ್ರಾಮಾಣ್ಯಮ್ । ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಮ್ ।**

**ಅನುವಾದ**—(ವೇದಗಳು ಅಪೌರುಷೇಯವೆಂದು ಹೇಳಿದರೂ ಅವು ಪ್ರಮಾಣವಾಗಲಾರವು. ಪ್ರಾಮಾಣ್ಯವು ಸಜಾತೀಯ ಅಥವಾ ವಿಜಾತೀಯ ಪ್ರಮಾಣಗಳಿಂದ ಸಿದ್ಧವಾಗುವದು. ಅಥವಾ ಆಪ್ತವಾಕ್ಯವಾದ್ದರಿಂದ ಸಿದ್ಧವಾಗುವದು. ವೇದಗಳ

ಪ್ರಾಮಾಣ್ಯವನ್ನು ಸಮರ್ಥಿಸುವ ಸಜಾತೀಯ ಅಥವಾ ವಿಜಾತೀಯ ಪ್ರಮಾಣಗಳಿಲ್ಲ. ಅಪೌರುಷೇಯವಾದ ವೇದಗಳು ಆಪ್ತವಾಕ್ಯಗಳೂ ಅಲ್ಲ, ಎಂಬ ಆಕ್ಷೇಪವನ್ನು ನಿರಾಕರಿಸಲು ಪ್ರಾಮಾಣ್ಯದ ಸ್ವತಸ್ತ್ವವನ್ನು ನಿರೂಪಿಸುವರು ) ಜ್ಞಾನದ ಯಥಾರ್ಥತ್ವರೂಪ ಪ್ರಾಮಾಣ್ಯವು ಸ್ವತಃ ತಿಳಿದುಬರುವದು ಅಂದರೆ ಯಾವ ಸಾಧನದಿಂದ ಜ್ಞಾನವು ತಿಳಿದುಬರುವದೋ ಅದೇ ಸಾಧನದಿಂದ ಅದು ಯಥಾರ್ಥವಾಗಿರುವದೂ ತಿಳಿದುಬರುವದು. ಇದನ್ನು ಒಪ್ಪಿಕೊಳ್ಳದಿದ್ದರೆ ಅನವಸ್ಥೆ ಬರುವದು (ಒಂದು ಜ್ಞಾನದ ಯಥಾರ್ಥತ್ವವನ್ನು ತಿಳಿದುಕೊಳ್ಳಲು ಅದನ್ನು ತಿಳಿದುಕೊಳ್ಳುವ ಸಾಧನವನ್ನು ಬಿಟ್ಟು ಬೇರೊಂದು ಪ್ರಮಾಣ ಬೇಕೆಂದರೆ ಆ ಪ್ರಮಾಣದ ಪ್ರಾಮಾಣ್ಯವನ್ನು ತಿಳಿದುಕೊಳ್ಳಲು ಮತ್ತೊಂದು ಪ್ರಮಾಣ ಬೇಕು ಈ ಮತ್ತೊಂದರ ಪ್ರಾಮಾಣ್ಯವನ್ನು ತಿಳಿದುಕೊಳ್ಳಲು ಇನ್ನೊಂದು ಪ್ರಮಾಣ ಬೇಕು ಹೀಗೆ ಇದಕ್ಕೆ ಕೊನೆಯಿಲ್ಲದೆ ಅನವಸ್ಥೆಯುಂಟಾಗುವದು ಆದ್ದರಿಂದ ಪ್ರಾಮಾಣ್ಯವು ಸ್ವತಃ ಎಂದು ಒಪ್ಪಿಕೊಳ್ಳಲೇಬೇಕು)

**ಅಪ್ರಾಮಾಣ್ಯ-ಶಂಕಾ ಪರಿಹಾರಕ್ಕೆ ಮಾತ್ರ ಯುಕ್ತಿಗಳು ಬೇಕು. ಪ್ರಾಮಾಣ್ಯವು ಸ್ವತಃ ತಿಳಿಯುವದು.**

(ವೇದಗಳು ಅಪೌರುಷೇಯವಾದ್ದರಿಂದ ದೋಷರಹಿತವಾಗಿರುವವು ಆದುದರಿಂದಲೇ ಪ್ರಮಾಣವಾಗಿರುವವು ಎಂಬು) ವೇದಗಳ ಪ್ರಾಮಾಣ್ಯವನ್ನು ಯುಕ್ತಿಯನ್ನವಲಂಬಿಸಿ ಈ ಹಿಂದೆ ನೀವೇ ಹೇಳಿರುವಿರಿ (ಅಂದಮೇಲೆ ಈಗ ಪ್ರಾಮಾಣ್ಯವು ಸ್ವತಃ ಎಂದು ಹೇಗೆ ಹೇಳುವಿರಿ) ಎಂಬ ಶಂಕೆಯು ಸರಿಯಲ್ಲ ಯಾಕಂದರೆ (ವೇದಗಳ ಪ್ರಾಮಾಣ್ಯವನ್ನು ತಿಳಿಸಲು ಯುಕ್ತಿಗಳನ್ನು ಹೇಳಿಲ್ಲ ಆದರೆ ಅವುಗಳ) ಅಪ್ರಾಮಾಣ್ಯ ಶಂಕಾರೂಪವಾದ ಬುದ್ಧಿದೋಷವನ್ನು ಪರಿಹರಿಸಲು ಮಾತ್ರ ಯುಕ್ತಿಗಳನ್ನು ಹೇಳಿದೆ ಬುದ್ಧಿದೋಷಗಳಿಲ್ಲದವರಿಗೆ ಪ್ರಾಮಾಣ್ಯವು ಸ್ವತಃ ತಿಳಿಯುವದು.

(ಜ್ಞಾನದ ಯಥಾರ್ಥತ್ವರೂಪಪ್ರಾಮಾಣ್ಯವನ್ನು ತಿಳಿದುಕೊಳ್ಳಲು ಇನ್ನೊಂದು ಪ್ರಮಾಣ ಬೇಕು ಎಂದು ಹೇಳಿದರೆ ಅಂದರೆ ಪ್ರಾಮಾಣ್ಯಂ ಪರತಃ ಎಂದು ಹೇಳಿದರೆ ಅನವಸ್ಥಾದೋಷ ಬರುವದು ಎಂದು ಹೇಳಿದ್ದು ಸರಿಯಲ್ಲ. ಯಾಕಂದರೆ) ಎಲ್ಲಿ ಆಕಾಂಕ್ಷೆ ಉಂಟಾಗುವದೋ ಅಂದರೆ ಪ್ರಾಮಾಣ್ಯದ ಸಂದೇಹವುಂಟಾಗುವದೋ ಅಲ್ಲಿ ಮಾತ್ರ ಪ್ರಮಾಣಾಂತರದ ಅಪೇಕ್ಷೆಯಿರುವದು. ಎಲ್ಲ ಕಡೆಗೂ ಇಲ್ಲ ಆದುದರಿಂದ ಅನವಸ್ಥಾ ದೋಷಕ್ಕೆ ಅವಕಾಶವಿಲ್ಲ ಎಂದು ಪ್ರಾಮಾಣ್ಯ ಪರತಸ್ತ್ವವಾದಿಗಳು ಹೇಳುವ ಸಮಾಧಾನ ಸರಿಯಲ್ಲ. ಯಾಕಂದರೆ ಈ ಪ್ರಾಮಾಣ್ಯದ ಸಂದೇಹದ ನಿವೃತ್ತಿಯೇ ಬುದ್ಧಿದೋಷ ನಿವೃತ್ತಿಯು. (ಪ್ರಾಮಾಣ್ಯಶಂಕೆಯನ್ನು ಪರಿಹರಿಸಲು ಮಾತ್ರ ಪ್ರಮಾಣಾಂತರ ಬೇಕು ಎಂದು ನೀವು ಹೇಳಿದರೆ ಪ್ರಾಮಾಣ್ಯವನ್ನು ತಿಳಿದುಕೊಳ್ಳಲು ಬೇಡ, ಕೇವಲ ಶಂಕಾ ಪರಿಹಾರಕ್ಕೆ ಮಾತ್ರ ಬೇಕು ಎಂದು ಹೇಳಿದಂತಾಯಿತು ಇದೇ ಸ್ವತಃ ಪ್ರಾಮಾಣ್ಯವು. ಅಂದಮೇಲೆ ನೀವೂ ಸ್ವತಃ ಪ್ರಾಮಾಣ್ಯವನ್ನು ಒಪ್ಪಿಕೊಂಡಂತಾಯಿತು )

ದೋಷಗಳಿಂದ ಕಲುಷಿತವಾದ ಮನಸ್ಸಿದ್ದವರಿಗೇ ವೇದಗಳಲ್ಲಿ ಅಪ್ರಾಮಾಣ್ಯಶಂಕೆ ಯುಂಟಾಗುವದು (ಆದರೆ ಇದು ಯುಕ್ತ್ಯನುಸಂಧಾನದಿಂದ ದೋಷಗಳನ್ನು ಪರಿಹರಿಸಿ ಕೊಂಡರೆ ದೂರವಾಗುವದು) (ಬೌದ್ಧಾದಿ ಶಾಸ್ತ್ರಗಳಲ್ಲಿ ಬಂದ) ಅಪ್ರಾಮಾಣ್ಯಶಂಕೆಯು ಅವುಗಳಲ್ಲಿ ವಿಸಂವಾದಾದಿದೋಷಗಳಿರುವದರಿಂದಲೇ ಬಂದಿರುವದರಿಂದ ಈ ವಿಸಂವಾದಗಳ ಅನುಸಂಧಾನದಿಂದ ಅವುಗಳ ಅಪ್ರಾಮಾಣ್ಯವು ತಿಳಿದುಬರುವದು ಹೀಗೆ ವಿಸಂವಾದಾದಿ ಯುಕ್ತ್ಯನುಸಂಧಾನದಿಂದ ಅಪ್ರಾಮಾಣ್ಯ ತಿಳಿದುಬರುವದೇ ಅದರ ಪರತಸ್ತ್ವವು. ಪ್ರಾಮಾಣ್ಯವು ಮಾತ್ರ ಸ್ವತಃ ಅಂದರೆ ಇನ್ನೊಂದರ ಸಹಾಯದ ಅಗತ್ಯವಿಲ್ಲದ ಸಾಕ್ಷಿ ಯಿಂದಲೇ ತಿಳಿದುಬರುವದು

**ವಿವರಣೆ**—ಯಾವದೇ ಒಂದು ವಿಷಯದ ಜ್ಞಾನವಾಯಿತೆಂದರ ಈ ಜ್ಞಾನವು ಸಾಕ್ಷಿಪ್ರತ್ಯಕ್ಷದಿಂದ ತಿಳಿದುಬರುವದು ಇದರ ಜೊತೆಗೆ ಇಂಥ ಜ್ಞಾನವು ಯಥಾರ್ಥ ವಾದದ್ದೂ ಸಾಕ್ಷಿಪ್ರತ್ಯಕ್ಷದಿಂದಲೇ ತಿಳಿದುಬರುವದು ಜ್ಞಾನದ ಈ ಯಥಾರ್ಥತ್ವವನ್ನು ಅಂದರೆ ಜ್ಞಾನದ ಪ್ರಾಮಾಣ್ಯವನ್ನು ತಿಳಿದುಕೊಳ್ಳಲು ಸಾಕ್ಷಿಯನ್ನು ಬಿಟ್ಟು ಬೇರೆ ಸಾಧನಗಳ ಆವಶ್ಯಕತೆಯಿಲ್ಲ ಇದನ್ನೇ ಶಾಸ್ತ್ರಕಾರರು ಸ್ವತಃಪ್ರಾಮಾಣ್ಯ ಎಂದು ಕರೆಯುವರು. ಸಾಕ್ಷಿಯು ನಿತ್ಯವಾದುದು. ಸ್ವಯಂಪ್ರಕಾಶವಾದುದು ಆದುದರಿಂದ ಅದು ತನ್ನ ಸ್ವರೂಪವನ್ನೂ ಜ್ಞಾನವನ್ನೂ ಅದರ ಯಥಾರ್ಥತ್ವವನ್ನೂ ಗ್ರಹಿಸುವದು ವೃತ್ತಿಜ್ಞಾನಕ್ಕೇ ಇಂಥ ಸ್ವಯಂಪ್ರಕಾಶತ್ವಸ್ವಭಾವವನ್ನು ಹೇಳಲು ಬರುವದಿಲ್ಲ ವೃತ್ತಿ ಜ್ಞಾನವು ಜನ್ಯವಾದುದು. ತನ್ನನ್ನೇ ತಾನು ಗ್ರಹಿಸಬೇಕಾದುದು ತನಗಿಂತ ಮೊದಲು ಇರಬೇಕಾಗುವದು ಸ್ವಯಂಪ್ರಕಾಶವಾದ ಸಾಕ್ಷಿಯಿಂದ ಗ್ರಹಿಸಲ್ಪಡುವ ಜ್ಞಾನದ ಯಾಥಾರ್ಥ್ಯವನ್ನು ತಿಳಿದುಕೊಳ್ಳುವದಕ್ಕೆ ಇನ್ನೊಂದು ಸಾಧನ ಅಥವಾ ಪ್ರಮಾಣದ ಅಗತ್ಯವಿಲ್ಲ. ಆದುದರಿಂದ ಪರತಸ್ತ್ವದ ಪ್ರಸಕ್ತಿಯಿಲ್ಲ. ಅನವಸ್ಥೆಯ ಪ್ರಸಕ್ತಿಯೂ ಇಲ್ಲ.

**ಪ್ರಾಮಾಣ್ಯದ ಪರತಸ್ತ್ವವನ್ನು ಹೇಳಿದರೆ ಅನವಸ್ಥಾದೋಷ ಬರುವದು.**

ಪ್ರಾಮಾಣ್ಯದ ಸ್ವತಸ್ತ್ವವನ್ನು ಅಂಗೀಕರಿಸದೆ ಅದರ ಪರತಸ್ತ್ವವನ್ನು ಹೇಳು ವವರು ಅಂದರೆ ಒಂದು ಜ್ಞಾನದ ಯಥಾರ್ಥತ್ವವನ್ನು ತಿಳಿದುಕೊಳ್ಳಲು ಇನ್ನೊಂದು ಜ್ಞಾನ ಬೇಕೆಂದು ಹೇಳುವವರು (ಪ್ರಮಾಣಾಂತರ ಸಂವಾದ ಬೇಕೆಂದು ಹೇಳುವವರು) ಆ ಇನ್ನೊಂದು ಜ್ಞಾನದ ಯಥಾರ್ಥತ್ವವನ್ನು ತಿಳಿಯಲು ಮತ್ತೊಂದು ಜ್ಞಾನವು ಬೇಕೆಂದು ಹೇಳಬೇಕಾಗುವದು ಅದಕ್ಕೆ ಮತ್ತೊಂದು, ಅದಕ್ಕೆ ಮತ್ತೊಂದು ಎಂದು ಅನವಸ್ಥೆಯುಂಟಾಗುವದು ಸಾಕ್ಷಿಯು ಜ್ಞಾನವನ್ನೂ ಅದರ ಯಥಾರ್ಥತ್ವವನ್ನೂ ಗ್ರಹಿಸುವದು ಎಂದು ಹೇಳುವ ಸ್ವತಃಪ್ರಾಮಾಣ್ಯವಾದಿಗಳಿಗೆ ಈ ಅನವಸ್ಥಾದೋಷವಿಲ್ಲ.

**ಇಂದ್ರಿಯ ಮತ್ತು ಮನೋದೋಷಗಳಿಂದ ಅಪ್ರಾಮಾಣ್ಯವುಂಟಾಗುವದು.**

ಹೀಗೆ ಸಾಕ್ಷಿಯು ಜ್ಞಾನವನ್ನೂ ಅದರ ಪ್ರಾಮಾಣ್ಯವನ್ನೂ ಸ್ವತಃ ಗ್ರಹಿಸುವ ದಾದರೆ ಕೆಲವು ಅನುಭವಗಳಲ್ಲಿ ಸಂದೇಹವೂ ಅಪ್ರಾಮಾಣ್ಯವೂ ಹೇಗೆ ಉಂಟಾಗುವದು

ಎಂಬುದನ್ನು ವಿವರಿಸಬೇಕಾಗುವದು ಈ ಸಂದೇಹ ಅಪ್ರಾಮಾಣ್ಯಗಳಿಗೆ ಮನೋದೋಷ, ಇಂದ್ರಿಯದೋಷಾದಿಗಳು ಕಾರಣವಾಗಿವೆ ಇಂಥ ಇಂದ್ರಿಯ ಮನೋದೋಷಗಳಿದ್ದಾಗ ಉಂಟಾದ ಜ್ಞಾನದ ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುವದಿಲ್ಲ. ಜ್ಞಾನವನ್ನು ಮಾತ್ರ ಗ್ರಹಿಸುವದು, ಆದರ ಪ್ರಾಮಾಣ್ಯವನ್ನು ಗ್ರಹಿಸುವದಿಲ್ಲ ಇಂಥ ಜ್ಞಾನದ ವಿಸಂವಾದದ ಅಂದರೆ ಇದು ಜ್ಞಾನದಲ್ಲಿ ತೋರಿದ ವಿಷಯಕ್ಕೆ ಅನುಗುಣವಾಗಿಲ್ಲ ಎಂಬುದರ ಅನುಸಂಧಾನವಾದೊಡನೆ ಆದರ ಅಪ್ರಾಮಾಣ್ಯವನ್ನು ಗ್ರಹಿಸುವದು ಜ್ಞಾನವನ್ನೂ ಆದರ ಯಥಾರ್ಥತ್ವವನ್ನೂ ಗ್ರಹಿಸುವದು ಸಾಕ್ಷಿಯ ಸಹಜ ಸ್ವಭಾವವು ಇದು ಉತ್ಸರ್ಗ ಅಥವಾ ಸಾಮಾನ್ಯ ನಿಯಮವು ಇಂದ್ರಿಯ ಅಥವಾ ಮನೋದೋಷದಿಂದಾಗಿ ಜ್ಞಾನವನ್ನು ಮಾತ್ರ ಗ್ರಹಿಸಿ ನಂತರ ವಿಸಂವಾದಾದಿಗಳ ಅನುಸಂಧಾನದಿಂದ ಅಪ್ರಾಮಾಣ್ಯವನ್ನು ಗ್ರಹಿಸುವದು ಅಪವಾದ ಅಥವಾ ಯಾವಾಗಲಾದರೊಮ್ಮೆ ಆಗುವ ಘಟನೆಯು. ಈ ಅರ್ಥದಲ್ಲಿಯೇ 'ಅಪ್ರಾಮಾಣ್ಯ'ವನ್ನು ಪರತಃ ಎಂದು ಕರೆದಿದ್ದಾರೆ ಕೆಲವದರ ಜೊತೆಗೂಡುವದರಿಂದ ಸಹಜಶಕ್ತಿಯು ಕುಂಠಿತವಾಗಿ ವಿಪರೀತವಾದ ಕಾರ್ಯವಾಗುವದು ಲೋಕದಲ್ಲಿ ಕಂಡುಬಂದಿದೆ ಬೆತ್ತದ ಬೀಜಗಳು ಕಾಡುಕಿಚ್ಚಿನಿಂದ ಬೆಂದಾಗ ಅಡವಿಬಾಳೆಯ ಗಿಡಗಳಾಗಿ ಬೆಳೆಯುವದು ಕಂಡುಬಂದಿದೆ ಆದುದರಿಂದ ಇಂದ್ರಿಯ ಮನೋದೋಷಗಳಿಂದ ಸಂದೇಹ ವಿಪರೀತಜ್ಞಾನಗಳುಂಟಾಗುವವು. ವಿಸಂವಾದಾದಿಗಳ ಅನುಸಂಧಾನದಿಂದ ಸಾಕ್ಷಿಯೇ ಇವುಗಳ ಅಪ್ರಾಮಾಣ್ಯವನ್ನು ಗುರುತಿಸುವದು ವಿಸಂವಾದಾದಿಗಳ ಅನುಸಂಧಾನವಾಗುವವರೆಗೆ ತಟಸ್ಥವಾಗಿ ಜ್ಞಾನವೆಂದು ಮಾತ್ರ ಗ್ರಹಿಸುವದು ಯಥಾರ್ಥಜ್ಞಾನದ ಯಾಥಾರ್ಥ್ಯವನ್ನು ಮಾತ್ರ ಬೇರೆ ಇನ್ನಾವ ಸಾಧನದ ಅಗತ್ಯವಿಲ್ಲದೆ ಸ್ವತಃ ಸಹಜವಾಗಿ ಗ್ರಹಿಸುವದು ಆನೆಯ ಗತಿಸಾಮರ್ಥ್ಯವು ಸಹಜವಾಗಿದ್ದು ಪ್ರತಿಬಂಧಕಗಳು ಬಂದಾಗ ಮಾತ್ರ ಕುಂಠಿತವಾಗುವಂತೆ ದೋಷಗಳಿದ್ದಾಗ ಮಾತ್ರ ಸಾಕ್ಷಿಯ ಈ ಸಹಜಶಕ್ತಿಯು ಕುಂಠಿತವಾಗುವದು. ಇದಕ್ಕೆ ಮನಸ್ಸಿನ ಅಪರಾಧವೇ ಕಾರಣ.

ಪ್ರಾಮಾಣ್ಯದ ಪರತಸ್ತ್ವವನ್ನು ಹೇಳುವವರೂ ಕೂಡ ತಮಗೂ ಎಲ್ಲ ಕಡೆಗೂ ಪ್ರಮಾಣಾಂತರಗಳು ಬೇಕಾಗಿಲ್ಲ ಎಲ್ಲಿ ಪ್ರಾಮಾಣ್ಯದ ಸಂದೇಹವಿರುವದೋ ಅಲ್ಲಿ ಮಾತ್ರ ಪ್ರಮಾಣಾಂತರಗಳ ಸಂವಾದ ಬೇಕು. ಆದುದರಿಂದ ಅನವಸ್ಥೆಯಿಲ್ಲ ಎಂದು ಹೇಳುವದಾದರೆ ಪ್ರಾಮಾಣ್ಯದ ಸಂದೇಹವಿಲ್ಲದಿದ್ದಲ್ಲಿ ಅದು ಸ್ವತಃ ತಿಳಿದುಬರುವದು ಎಂದು ಅವರೂ ಒಪ್ಪಿಕೊಂಡಂತಾಯಿತು ಇನ್ನು ಪ್ರಾಮಾಣ್ಯದ ಸಂದೇಹವಿರುವಲ್ಲಿ ಅದನ್ನು ನಿವಾರಣೆಮಾಡಲು ಸಂವಾದಾದಿಗಳು ಬೇಕು ಎಂದು ಅವರು ಹೇಳುವದು ಬುದ್ಧಿದೋಷ ನಿರಾಸಮಾಡಲು ಅವು ಬೇಕು ಎಂದು ನಾವು ಹೇಳಿದ್ದನ್ನೇ ಹೇಳಿದಂತಾಯಿತು. ಇಂಥ ಸಂವಾದಾದಿಗಳು ಪ್ರಾಮಾಣ್ಯ ಸಂದೇಹವನ್ನು ನಿವಾರಿಸಲು ಬೇಕೇ ಹೊರತು ಪ್ರಾಮಾಣ್ಯವನ್ನು ತಿಳಿದುಕೊಳ್ಳುವದಕ್ಕೇ ಬೇಕಾಗಿಲ್ಲ. ಸಂದೇಹನಿವೃತ್ತಿಯಾದರೆ ಪ್ರಾಮಾಣ್ಯವು ಸ್ವತ ಏವ ತಿಳಿದುಬರುವದು. ವಿಸಂವಾದಾದಿಗಳು ಕಂಡುಬಂದರೆ ಅಪ್ರಾಮಾಣ್ಯವು

ದೃಢಪಡುವದು ಎರಡನ್ನೂ ಸಾಕ್ಷಿಯೇ ತಿಳಿದುಕೊಳ್ಳುವದು ಪ್ರಾಮಾಣ್ಯವನ್ನು ಸಹಜಶಕ್ತಿಯಿಂದ ತಿಳಿದುಕೊಳ್ಳುವದು ಅಪ್ರಾಮಾಣ್ಯವನ್ನು ವಿಸಂವಾದಾದಿಯುಕ್ತ್ಯನು ಸಂಧಾನದಿಂದ ತಿಳಿದುಕೊಳ್ಳುವದು

ವೇದಗಳಲ್ಲಿಯೂ ಅನೃತ, ವ್ಯಾಘಾತಾದಿದೋಷಗಳಿವೆ ಎಂಬ ದೋಷಕಲುಷಿತ ಮನಸ್ಸುಳ್ಳವರಿಗೆ ಅಲ್ಲಿಯೂ ಅಪ್ರಾಮಾಣ್ಯಶಂಕೆಯುಂಟಾಗುವದು ಆದರೆ ಆ ಶಂಕೆ ಗಳನ್ನು ಪರಿಹರಿಸಿದರೆ ಸಹಜವಾದ ಪ್ರಾಮಾಣ್ಯಬುದ್ಧಿಯು ಬರುವದು ಬೌದ್ಧಾದಿ ಶಾಸ್ತ್ರಗಳಲ್ಲಿ ವಿಸಂವಾದಾದಿ ದೋಷಗಳೇ ಇರುವದರಿಂದ ಯುಕ್ತ್ಯನುಸಂಧಾನದಿಂದ ಅವುಗಳನ್ನು ತಿಳಿದುಕೊಂಡು ಸಾಕ್ಷಿಯು ಅದರ ಅಪ್ರಾಮಾಣ್ಯವನ್ನು ಗ್ರಹಿಸುವದು ಹೀಗೆ ಯುಕ್ತ್ಯನುಸಂಧಾನದ ಸಹಾಯ ಪಡೆದು ಅಪ್ರಾಮಾಣ್ಯವನ್ನು ತಿಳಿದುಕೊಳ್ಳುವದು ಪರತಸ್ತ್ವವು

**ವರ್ಣನಿತ್ಯತ್ವ ಸಮರ್ಥನೆ.**

**10. ನ ಚ ಉಚ್ಚಾರಣಕಾಲೇ ಏವ ವರ್ಣಾನಾಮುತ್ಪತ್ತಿರಿತಿ ವಾಚ್ಯಮ್ । ತದೇವೇದಂ ವಚನಮಿತಿ ಪ್ರತ್ಯಭಿಜ್ಞಾವಿರೋಧಾತ್ । ನ ಚ ಸಾದೃಶ್ಯಾತ್ ಪ್ರತ್ಯಭಿಜ್ಞಾ ಭ್ರಾಂತಿರಿತಿ ವಾಚ್ಯಮ್ । ಸೋಽಯಂ ದೇವದತ್ತಃ ಇತ್ಯಾದೇರಪಿ ತಥಾತ್ವಪ್ರಾಪ್ತೇಃ ।**

**ಸರ್ವಕ್ಷಣಿಕತ್ವಂ ವದತಾ ಬೌದ್ಧೇನ ಸೇಯಂ ದಿಗಿತ್ಯಾದಿ ಪ್ರತ್ಯಭಿಜ್ಞಾಯಾ ಭ್ರಾಂತಿತ್ವಂ ನ ವಾಚ್ಯಂ ಪಂಚಸ್ಕಂಧೇಭ್ಯಃ ಅನ್ಯತ್ವಾತ್ ।**

**ನ ಚ ದಿಶ ಏವ ಭ್ರಾಂತಿಕಲ್ಪಿತಾಃ ವಿಜ್ಞಾನಶೂನ್ಯಯೋರಪಿ ಸಾಮ್ಯಾತ್ । ನ ಚ ಆದಿತ್ಯೋದಯಾದಿನೈವ ದಿಕ್ಕಲ್ಪನಾ ಅಂಧಕಾರೇಽಪಿ ದಿಙ್ಮಾತ್ರಪ್ರತೀತೇಃ । ಕಾದಾಚಿತ್ಕಭ್ರಾಂತಿರೇವಾದಿತ್ಯೋದಯಾದಿದರ್ಶನಾನ್ನಿವಾರ್ಯತೇ । ಸಾ ಚ ವಿಜ್ಞಾನಶೂನ್ಯಯೋರಪಿ ಭವತೀತಿ ತೇಷಾಂ ಮತಂ ವಾದಿವಿಪ್ರತಿಪತ್ತೇಃ । ಅತಃ ದಿಶಃ ಸ್ಥಿರಾ ಏವೇತಿ ಸಿಧ್ಯತಿ ಶೂನ್ಯವದೇವ ।**

**ಅತಃ ವೇದಸ್ಯಾಪಿ ಸ್ಥೈರ್ಯಂ ಸಿದ್ಧಂ ತದೇವೇದಂ ವಾಕ್ಯಮಿತಿ ಪ್ರತ್ಯಭಿಜ್ಞಾನಾತ್ ।**

**ಅನುವಾದ**—(ವೇದಗಳು ವರ್ಣಸಮುದಾಯರೂಪವಾದವು. ವರ್ಣಗಳು ಅನಿತ್ಯವಾದವು. ಆದುದರಿಂದ ವೇದಾಪೌರುಷೇಯತ್ವವು ಕೂಡುವದಿಲ್ಲ ಎಂಬ ಆಕ್ಷೇಪ ವನ್ನು ನಿರಾಕರಿಸಲು ವರ್ಣಗಳ ನಿತ್ಯತ್ವದ ಪ್ರತಿಪಾದನೆಯನ್ನು ಆರಂಭಿಸುತ್ತಾರೆ.)

ಉಚ್ಚಾರಣೆಯ ಅನಂತರದಲ್ಲಿಯೇ ವರ್ಣಗಳು ಹುಟ್ಟುವವು (ಆದ್ದರಿಂದ ಅನಿತ್ಯ ವಾದವುಗಳು) ಎಂಬುದು ಸರಿಯಲ್ಲ. ಹೀಗೆ ಹೇಳಿದರೆ 'ಅದೇ ಈ ಗಕಾರ' ಇತ್ಯಾದಿಯಾದ ಪ್ರತ್ಯಭಿಜ್ಞೆಗೆ ವಿರೋಧ ಬರುವದು. (ಗಕಾರ, ಕಕಾರ, ಇತ್ಯಾದಿ ವರ್ಣಗಳನ್ನು ಮತ್ತೆ ಮತ್ತೆ

ಕೇಳುವ ನಾವು ಅದೇ ಈ 'ಗಕಾರ' ಅದೇ ಈ 'ಕಕಾರ' ಇತ್ಯಾದಿಯಾಗಿ ಗುರುತಿಸುವೆವು. ಹೀಗೆ ಗುರುತಿಸುವದೇ ಪ್ರತ್ಯಭಿಜ್ಞಾನವು ಇದು ಗಕಾರ ಕಕಾರಾದಿ ವರ್ಣಗಳು ನಿತ್ಯ ವಾಗಿದ್ದರೆ ಮಾತ್ರ ಸಾಧ್ಯವಾಗುವದು ಗಕಾರ, ಕಕಾರಾದಿ ವರ್ಣಗಳು ನಿತ್ಯ, ನಮ್ಮ ಕಿವಿಗೆ ಬೀಳುವ 'ಗ' 'ಕ' ಇತ್ಯಾದಿ ಧ್ವನಿಗಳು ಇವುಗಳಿಗೆ ವ್ಯಂಜಕವಾದವುಗಳು ವ್ಯಂಜಕ ಧ್ವನಿಗಳು ಅನಿತ್ಯ ಆದರೆ ವರ್ಣಗಳು ನಿತ್ಯ ಈ ವರ್ಣನಿತ್ಯತ್ವವು ಪ್ರತ್ಯಭಿಜ್ಞಾ ಅಥವಾ ಗುರುತು ಹಿಡಿಯುವದರಿಂದ ಸಿದ್ಧವಾಗುವದು ವರ್ಣಗಳೂ ಅನಿತ್ಯವೆಂದರೆ ಪ್ರತ್ಯಭಿಜ್ಞೆಗೆ ವಿರೋಧ ಬರುವದು )

## ಪ್ರತ್ಯಭಿಜ್ಞೆಯು ಭ್ರಾಂತಿಯಲ್ಲ.

(ಅದೇ ಈ 'ಗಕಾರ') ಎಂಬ ಪ್ರತ್ಯಭಿಜ್ಞೆ ಅಥವಾ ಗುರುತು ಹಿಡಿಯುವದು ಸಾದೃಶ್ಯಮೂಲಕವಾಗಿರುವದರಿಂದ ಭ್ರಾಂತಿಯು (ಹಿಂದೆ ಕೇಳಿದ ಮತ್ತು ಈಗ ಕೇಳುವ ಗಕಾರಗಳು ಪರಸ್ಪರ ಭಿನ್ನವಾದರೂ ಸದೃಶವಾದ್ದರಿಂದ ಅದೇ ಈ 'ಗಕಾರ' ಎಂಬ ಭ್ರಾಂತಿ ಯುಂಟಾಗಿದೆ) ಎಂಬುದು ಸರಿಯಲ್ಲ ಹೀಗೆ ಹೇಳುವದಾದರೆ 'ಅವನೇ ಈ ದೇವದತ್ತ' (ಹಿಂದೆ ಕಾಶಿಯಲ್ಲಿ ಭೆಟ್ಟಿಯಾದ ದೇವದತ್ತನೇ ಈಗ ಕಂಚಿಯಲ್ಲಿ ಭೆಟ್ಟಿಯಾಗಿರುವನು ಅವನೇ ಈ ದೇವದತ್ತನು) ಎಂಬ ಪ್ರತ್ಯಭಿಜ್ಞೆಯೂ ಭ್ರಾಂತಿಯೆಂದು ಹೇಳುವ ಪ್ರಸಂಗ ಬರುವದು (ಇದನ್ನು ಭ್ರಾಂತಿಯೆಂದು ವರ್ಣದ ಅನಿತ್ಯತ್ವವನ್ನು ಹೇಳುವ ವೈಶೇಷಿಕಾದಿ ಗಳೂ ಒಪ್ಪುವದಿಲ್ಲ. ಆದುದರಿಂದ ಅವರು ಅದೇ ಈ 'ಗಕಾರ' ಎಂಬ ಪ್ರತ್ಯಭಿಜ್ಞೆಯನ್ನು ಒಪ್ಪಬೇಕಾಗುವದು ಮತ್ತು ವರ್ಣನಿತ್ಯತ್ವವನ್ನು ಒಪ್ಪಬೇಕಾಗುವದು )

ಇನ್ನು ಸರ್ವಪದಾರ್ಥಗಳೂ ಕ್ಷಣಿಕ ಎಂದು ಹೇಳುವ ಬೌದ್ಧನೂ 'ಅದೇ ಈ ಆಕಾಶ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿ ಎಂದು ಹೇಳಲು ಬರುವದಿಲ್ಲ (ದಿಕ್ ಶಬ್ದದಿಂದ ಇಲ್ಲಿ ಆಕಾಶವನ್ನು ತೆಗೆದುಕೊಳ್ಳಬೇಕು. ಬೌದ್ಧರು ಆಕಾಶವು ನಿತ್ಯವೆಂದು ಒಪ್ಪಿಕೊಳ್ಳುವರು). ಯಾಕೆಂದರೆ ಆಕಾಶವು ಪಂಚಸ್ಕಂಧಗಳಿಗಿಂತ ಭಿನ್ನವಾದುದು (ಮತು ನಿತ ವಾದುದು ಎಂದು ಬೌದ್ಧರು ಹೇಳುತ್ತಾರೆ)

## ದಿಕ್ಕುಗಳು ಭ್ರಾಂತಿ ಕಲ್ಪಿತವಲ್ಲ.

ದಿಕ್ಕುಗಳೇ ಭ್ರಾಂತಿಕಲ್ಪಿತ ಎಂಬುದೂ ಸರಿಯಲ್ಲ. (ಬೌದ್ಧರಲ್ಲಿ ಕೆಲವರು— ವಿಜ್ಞಾನವಾದಿಗಳು ಮತ್ತು ಶೂನ್ಯವಾದಿಗಳು—ದಿಕ್ಕುಗಳೇ ಭ್ರಾಂತಿಕಲ್ಪಿತ ಎಂದು ಹೇಳುವರು ಇದು ಸರಿಯಲ್ಲ ಪ್ರಮಾಣವಿಲ್ಲದೆ ದಿಕ್ಕುಗಳು ಭ್ರಾಂತಿಕಲ್ಪಿತ ಎಂದು ಹೇಳುವುದಾದರೆ) ವಿಜ್ಞಾನ ಮತ್ತು ಶೂನ್ಯಗಳೂ ಹಾಗೆಯೇ ಆಗಲಿ (ಭ್ರಾಂತಿಕಲ್ಪಿತ ವಾಗಲಿ) ಎಂದು ಹೇಳಬಹುದು. ದಿಕ್ಕುಗಳು ಸೂರ್ಯನು ಉದಯಿಸುವ ದಿಕ್ಕು (ಪೂರ್ವ) ಇತ್ಯಾದಿಯಾಗಿ (ಉಪಾಧಿಗಳಿಂದ) ಕಲ್ಪಿಸಲ್ಪಟ್ಟಿರುವವು. (ಆದ್ದರಿಂದ ಭ್ರಾಂತಿಕಲ್ಪಿತ) ಎಂದು ಹೇಳುವದೂ ಸರಿಯಲ್ಲ. ಯಾಕೆಂದರೆ ಕತ್ತಲೆಯಲ್ಲಿಯೂ (ಅವಕಾಶರೂಪವಾದ)

ದಿಕ್ಕುಗಳು ತೋರುವವು. (ಅನವಕಾಶಸಾಮಾನ್ಯರೂಪವಾದ ದಿಕ್ಕು, ಮತ್ತು ಅವಕಾಶ ವಿಶೇಷರೂಪವಾದ ಪೂರ್ವಾದಿ ದಿಕ್ಕುಗಳು ಸಾಕ್ಷಿಯಿಂದಲೇ ಪ್ರತೀತವಾಗುವವು) ಸೂರ್ಯೋದಯಾದಿಗಳು ದಿಕ್ಕಿನ ವಿಷಯದಲ್ಲಿ ಒಮ್ಮೊಮ್ಮೆ ಉಂಟಾದ ಭ್ರಾಂತಿಯನ್ನು ಮಾತ್ರ ಪರಿಹರಿಸುವವು (ಆದ್ದರಿಂದ ಒಮ್ಮೊಮ್ಮೆ ಭ್ರಾಂತಿಯಿದ್ದ ಮಾತ್ರದಿಂದ ದಿಕ್ಕುಗಳು ಔಪಾಧಿಕ, ಭ್ರಾಂತಿಕಲ್ಪಿತ ಎಂದು ಹೇಳಲು ಬರುವದಿಲ್ಲ) ಇಂಥ ಭ್ರಾಂತಿಯು ವಿಜ್ಞಾನ ಶೂನ್ಯಗಳ ವಿಷಯದಲ್ಲಿಯೂ ಇರುವದು ಯಾಕಂದರೆ ಅವುಗಳ ವಿಷಯದಲ್ಲಿ ವಾದಿಗಳ ವಿಪ್ರತಿಪತ್ತಿಯಿರುವದು (ಈ ವಾದಿಗಳು ಭ್ರಾಂತರಾಗಿದ್ದಾರೆ ಎಂದು ಬೌದ್ಧರು ಹೇಳುವರು) ಆದ್ದರಿಂದ ಶೂನ್ಯದಂತೆ ದಿಕ್ಕುಗಳೂ ಸ್ಥಿರವಾದವು

ಆದ್ದರಿಂದ ವೇದಗಳ ವರ್ಣಗಳೂ ಸ್ಥಿರವಾಗಿವೆ (ನಿತ್ಯವಾಗಿವೆ) ವೇದಗಳೂ ಸ್ಥಿರವಾಗಿವೆ ಅದೇ ಈ ವಾಕ್ಯ ಎಂಬ ಪ್ರತ್ಯಭಿಜ್ಞೆಯು ಇದೆ ಯಾವ ವರ್ಣಕ್ರಮವನ್ನನುಸರಿಸಿ ಮೊದಲು ನಾನು ವೇದವಾಕ್ಯಗಳನ್ನು ಕೇಳಿದ್ದೆನೋ ಅದೇ ವರ್ಣಕ್ರಮವನ್ನನುಸರಿಸಿ ಈಗ ಕೇಳುತ್ತಿದ್ದೇನೆ ಎಂಬ ಪ್ರತ್ಯಭಿಜ್ಞೆಯಿದ ಆದ್ದರಿಂದ ವೇದಗಳು ನಿತ್ಯ, ಅಪೌರುಷೇಯ

**ವಿವರಣೆ**—ನ್ಯಾಯವೈಶೇಷಿಕರು ವರ್ಣಗಳು ಅನಿತ್ಯವೆಂದು ಹೇಳುವರು ಕಂಠ, ತಾಲು ಇತ್ಯಾದಿಗಳ ಚಲನವಲನದಿಂದ ಇವು ಹುಟ್ಟುವವು ಮತ್ತು ನಂತರ ನಾಶಹೊಂದುವವು ಆದ್ದರಿಂದ ಇವು ಅನಿತ್ಯ ಎಂದು ಅವರ ಅಭಿಪ್ರಾಯವು ಆದರೆ ಹೀಗೆ ಹುಟ್ಟುವಂತೆ ತೋರುವವು ವರ್ಣವ್ಯಂಜಕಧ್ವನಿಗಳು, ವರ್ಣಗಳೇ ಅಲ್ಲ ನಿತ್ಯವಾದ ವರ್ಣಗಳು ಈ ಧ್ವನಿಯಿಂದ ವ್ಯಕ್ತಗೊಳಿಸಲ್ಪಡುವವು ಹೀಗೆ ವರ್ಣಗಳು ನಿತ್ಯವಾದ್ದರಿಂದಲೇ 'ಸ ಏವ ಅಯಂ ಗಕಾರಃ' ಅದೇ ಈ ಗಕಾರ ಎಂಬ ಪ್ರತ್ಯಭಿಜ್ಞೆ ಬರುವದು ವರ್ಣಗಳು ಅನಿತ್ಯ ಎಂದು ಹೇಳಿದರೆ ಈ ಪ್ರತ್ಯಭಿಜ್ಞೆಗೆ ವಿರೋಧವುಂಟಾಗುವದು

ಅದೇ ಅಕ್ಕಿಯನ್ನು ಉಣ್ಣುವೆವು, ಅದೇ ಬಟ್ಟೆಯನ್ನು ಉಡುವೆವು, ಎಂಬ ವ್ಯವಹಾರದಂತೆ ಇದು ಕೇವಲ ವ್ಯವಹಾರ, ಪ್ರತ್ಯಭಿಜ್ಞೆಯೇ ಅಲ್ಲ ಎಂದು ಕೆಲವರು ಹೇಳುವರು ಇದು ಸರಿಯಲ್ಲ ಅದೇ ಈ ಗಕಾರ ಎಂಬುದರಲ್ಲಿ ಪ್ರತ್ಯಭಿಜ್ಞೆ ಇರುವದು ಸ್ಪಷ್ಟವಿದೆ. ಗತ್ವಾದಿಜಾತಿಯೇ ಪ್ರತ್ಯಭಿಜ್ಞಾವಿಷಯವೆಂಬುದೂ ಸರಿಯಲ್ಲ ನಿತ್ಯವಾದ ಜಾತಿಯೇ ಇಲ್ಲ ಸ್ಫೋಟವು ಪ್ರತ್ಯಭಿಜ್ಞಾವಿಷಯವೆಂಬುದೂ ಸರಿಯಲ್ಲ ಸ್ಫೋಟವನ್ನು ಕಲ್ಪಿಸುವದರ ಅಗತ್ಯವಿಲ್ಲ ಆದುದರಿಂದ ಈ ಪ್ರತ್ಯಭಿಜ್ಞೆಯು ನಿತ್ಯವಾದ ವರ್ಣವಿಷಯಕವಾಗಿಯೇ ಇದೆ 'ಪ್ರತ್ಯಭಿಜ್ಞೆ' ಅಂದರೆ ಹಿಂದೆ ಒಮ್ಮೆ ಅನುಭವಕ್ಕೆ ಬಂದ ವಸ್ತುವನ್ನೇ ಈಗ ಮತ್ತೆ ಅನುಭವಿಸುವದು.

### ಪೂರ್ವೋತ್ತರ ಗಕಾರಗಳು ಭಿನ್ನವಲ್ಲ.

ಈ ಪ್ರತ್ಯಭಿಜ್ಞೆಯು ಪೂರ್ವೋತ್ತರ ಗಕಾರಗಳ ಸಾದೃಶ್ಯದಿಂದುಂಟಾದ ಭ್ರಾಂತಿಯೆಂಬುದೂ ಸರಿಯಲ್ಲ. ಹೀಗೆ ಹೇಳಿದರೆ 'ಸೋಽಯಂ ದೇವದತ್ತಃ' ಇತ್ಯಾದಿಯಾದ ಸರ್ವಸಮ್ಮತವಾದ ಪ್ರತ್ಯಭಿಜ್ಞೆಗಳನ್ನೂ ಭ್ರಾಂತಿಯೆಂದು ಹೇಳಬೇಕಾಗುವದು.

ಪೂರ್ವೋತ್ತರ ಗಕಾರಗಳಲ್ಲಿ ತೀವ್ರತ್ವ, ಮಂದತ್ವ ಇತ್ಯಾದಿ ವಿರುದ್ಧ ಧರ್ಮಗಳಿರುವದರಿಂದ ಅವು ಭಿನ್ನ ಎಂಬುದೂ ಸರಿಯಲ್ಲ ಹಾಗೆ ಹೇಳಿದರೆ 'ಶಿಖೀ ದೇವದತ್ತಃ', 'ಮುಂಡೀ ದೇವದತ್ತಃ', 'ಜಟಿಲಃ ದೇವದತ್ತಃ' ಎಂದು ಭಿನ್ನಧರ್ಮವುಳ್ಳ ದೇವದತ್ತನೂ ಭಿನ್ನನೆಂದು ಹೇಳಬೇಕಾದೀತು. ದೇಶ, ಕಾಲ, ಪುರುಷ, ಅವಸ್ಥಾ ಇತ್ಯಾದಿ ವ್ಯವಸ್ಥಾಪಕಗಳು ಯಾವವೂ ಇಲ್ಲದೆ ವಿರುದ್ಧಧರ್ಮವಿದ್ದವು ಮಾತ್ರ ಭಿನ್ನವಾದವು ಉದಾಹರಣೆಗೆ ಸರ್ವಜ್ಞತ್ವ, ಅಲ್ಪಜ್ಞತ್ವರೂಪ ವಿರುದ್ಧಧರ್ಮವಿದ್ದ ಈಶ್ವರ ಮತ್ತು ಜೀವರು ಭಿನ್ನರು ಪ್ರಕೃತಗಕಾರಗಳಲ್ಲಿದ್ದ ತೀವ್ರತ್ವ, ಮಂದತ್ವಗಳು ಉಚ್ಚಾರಮಾಡುವ ಪುರುಷಪ್ರಯತ್ನ ಭೇದದಿಂದ ಉಂಟಾದ್ದರಿಂದ ಗಕಾರಗಳೇ ಭಿನ್ನವಾದವಲ್ಲ ನಿತ್ಯವಾದ ಗಕಾರವು ಒಂದೇ ಆಗಿರುವದು ವ್ಯಂಜಕಧ್ವನಿಯಲ್ಲಿ ಮಾತ್ರ ಭೇದ ಕಾಣುವದು

**ಬೌದ್ಧರೂ ಪ್ರತ್ಯಭಿಜ್ಞೆಯನ್ನು ಒಪ್ಪಲೇಬೇಕು.**

ಬೌದ್ಧರು ಸರ್ವವಸ್ತುಗಳು ಕ್ಷಣಿಕವೆಂದು ಹೇಳಿದರೂ ಇದು ಪಂಚಸ್ಕಂಧಗಳಿಗೆ ಮಾತ್ರ ಅನ್ವಯಿಸುವದು ಆಕಾಶ, ಎರಡು ವಿಧವಾದ ವಿನಾಶಗಳು ಇವುಗಳನ್ನು ಅವರೂ ನಿತ್ಯವೆಂದು ಹೇಳುವರು (ಆಕಾಶೋ ದ್ವೌ ವಿನಾಶೌ ಚ ನಿತ್ಯಂ ತ್ರಯಮಸಂಸ್ಕೃತಮ್) ಆದ್ದರಿಂದ ಅವರೂ ಪ್ರತ್ಯಭಿಜ್ಞೆಯನ್ನು ಒಪ್ಪಿಕೊಳ್ಳಲೇಬೇಕು ಇಲ್ಲಿ ಮೂಲದಲ್ಲಿಯ 'ದಿಕ್' ಶಬ್ದದಿಂದ ಆಕಾಶವನ್ನು ತೆಗೆದುಕೊಳ್ಳಬೇಕು ಅವ್ಯಾಕೃತಾಕಾಶವೇ ದಿಕ್ಕು ಎಂದು ಸೂಚಿಸುವದಕ್ಕಾಗಿಯೇ 'ಆಕಾಶ' ಪದದ ಬದಲಾಗಿ 'ದಿಕ್' ಪದವನ್ನು ಉಪಯೋಗಿಸಿದ್ದಾರೆ

**ಪೂರ್ವಪಶ್ಚಿಮ ಇತ್ಯಾದಿ ದಿಕ್ಕುಗಳು ಉಪಾಧಿ ಕಲ್ಪಿತವಲ್ಲ.**

ಬೌದ್ಧರಲ್ಲಿ ಕೆಲವರು ದಿಕ್ಕನ್ನು (ಆಕಾಶವನ್ನು) ನಿತ್ಯವೆಂದು ಅಂಗೀಕರಿಸಿದ್ದರೂ ವಿಜ್ಞಾನವಾದಿಗಳೂ ಶೂನ್ಯವಾದಿಗಳೂ ಅಂಗೀಕರಿಸಿಲ್ಲ ಅವರು ಅದೂ ಭ್ರಾಂತಿಕಲ್ಪಿತ ವೆಂದೇ ಹೇಳುವರು. ಆದರೆ ಅವರ ಈ ವಾದವು ಸರಿಯಲ್ಲ 'ದಿಕ್' ಎಂಬುದನ್ನು ಸಾಮಾನ್ಯಾರ್ಥದಲ್ಲಿ ತೆಗೆದುಕೊಂಡರೆ 'ಸಮಗ್ರ ಅವಕಾಶ' ಎಂದು ಅರ್ಥವಾಗುತ್ತದೆ. ಪೂರ್ವ, ಪಶ್ಚಿಮ, ಇತ್ಯಾದಿ ವಿಶೇಷಾರ್ಥದಲ್ಲಿ ತೆಗೆದುಕೊಂಡರೆ 'ಅವಕಾಶದ ಭಾಗಗಳು' ಎಂದು ಅರ್ಥವಾಗುತ್ತದೆ ಇವೆರಡೂ ಸಾಕ್ಷಿಯಿಂದಲೇ ಪ್ರತೀತವಾಗುವವು. 'ಸೂರ್ಯೋದಯವಾಗುವ ಭಾಗ' ಇತ್ಯಾದಿ ಉಪಾಧಿ ಸಾಪೇಕ್ಷತೆಯು ಇರುವದಿಲ್ಲ. ಈ ಉಪಾಧಿಗಳಿಂದ ಈ ದಿಕ್ಕುಗಳು ಉತ್ಪನ್ನವಾಗುವದಿಲ್ಲ ಆದ್ದರಿಂದ ಈ ದಿಕ್ಕುಗಳು ಭ್ರಾಂತಿಕಲ್ಪಿತವಲ್ಲ ಸೂರ್ಯೋದಯಾದಿಗಳು ದಿಕ್ಕನ್ನು ತಪ್ಪುತಿಳಿದುಕೊಂಡವರಿಗೆ ದಿಕ್ಕು ತಿಳಿಸಲು ಮಾತ್ರ ಸಹಾಯಕವಾಗುವವು ಇವು ಉಪಲಕ್ಷಣಗಳು ಉಪಾಧಿಗಳಲ್ಲ. ಇವು ದಿಕ್ಕುಗಳನ್ನೇ ಔಪಾಧಿಕವಾಗಿ ಸೃಷ್ಟಿಸುವದಿಲ್ಲ. ಯಾವ ಪ್ರಮಾಣವೂ ಇಲ್ಲದೆ ದಿಕ್ಕುಗಳು ಭ್ರಾಂತಿಕಲ್ಪಿತ ಎಂದು ಹೇಳುವದಾದರೆ ವಿಜ್ಞಾನ, ಶೂನ್ಯಗಳೂ ಭ್ರಾಂತಿಕಲ್ಪಿತ ವೆಂದು ಏಕೆ ಹೇಳಬಾರದು ? ಆದ್ದರಿಂದ ಶೂನ್ಯವು ನಿತ್ಯವಿದ್ದಂತೆ ದಿಕ್ಕುಗಳೂ (ಆಕಾಶವೂ)

ನಿತ್ಯ ಪ್ರತ್ಯಭಿಜ್ಞೆಯಿಂದ ಇದರ ನಿತ್ಯತ್ವವು ಸಿದ್ಧವಾಗುವಂತೆ ವರ್ಣಗಳ ನಿತ್ಯತ್ವವೂ ಪ್ರತ್ಯಭಿಜ್ಞೆಯಿಂದ ಸಿದ್ಧವಾಗುವದು ವೇದಗಳ ನಿತ್ಯತ್ವವೂ ಸಿದ್ಧವಾಗುವುದು ದಿಕ್ಕು (ಆಕಾಶ) ಭ್ರಾಂತಿಕಲ್ಪಿತವಲ್ಲ, 'ನಿತ್ಯ', 'ಅದೇ ಈ ದಿಕ್ಕು' ಎಂಬ ಪ್ರತ್ಯಭಿಜ್ಞೆಯು ಇರುವದು ಎಂಬ ಈ ವಿಚಾರಗಳನ್ನು ಪ್ರತ್ಯಭಿಜ್ಞೆಯನ್ನು ಬೌದ್ಧರೂ ಒಪ್ಪಬೇಕು ಎಂದು ಸಮರ್ಥಿಸಲು ಇಲ್ಲಿ ಪ್ರಸ್ತಾಪಿಸಿರುವರು

**ವೇದಗಳ ಪ್ರಾಮಾಣ್ಯ ಸಮರ್ಥನೆ.**

**11. ನ ಚ ಅನುಮಾನಾದೀನಾಂ ಆಗಮಂ ವಿನಾ ಪ್ರಾಮಾಣ್ಯಂ ಧರ್ಮಾದಿಷು ತದಗೋಚರತ್ವಾತ್ । ಅತಃ ಅಪೌರುಷೇಯವಾಕ್ಯೈರೇವ ಧರ್ಮಾದಿಸಿದ್ಧೇಃ ಸರ್ವವಾದಿನಾಮಪಿ ತದಂಗೀಕಾರ್ಯಮ್ । ತತ್ ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಮ್ ।**

**ಅಪ್ರಾಮಾಣ್ಯಸ್ಯ ಪರತಸ್ತ್ವಾನಂಗೀಕಾರೇ ದುಷ್ಟೇಂದ್ರಿಯಾದೇರಪಿ ಅಪ್ರಾಮಾಣ್ಯಹೇತುತ್ವಂ ನ ಸ್ಯಾತ್ । ತದಂಗೀಕಾರೇ ಚ ಅನುಭವವಿರೋಧಃ । ಅತಃ ಪ್ರಾಮಾಣ್ಯಂ ಸ್ವತಃ ಪರತಃ ಅಪ್ರಾಮಾಣ್ಯಮಿತಿ ಸಿದ್ಧಮ್ ।**

**ಅಪೌರುಷೇಯವಾದ ವೇದಗಳೇ ಧರ್ಮ ಅಧರ್ಮಗಳನ್ನು ತಿಳಿಸುವ ಪ್ರಮಾಣ.**

**ಅನುವಾದ**—ಅಪೌರುಷೇಯವಾಕ್ಯರೂಪ ಆಗಮವನ್ನು ಬಿಟ್ಟು ಅನುಮಾನ, ಪ್ರತ್ಯಕ್ಷ ಮತ್ತು ಪೌರುಷೇಯ ವಾಕ್ಯಗಳು ಧರ್ಮಾದಿಗಳ ವಿಷಯದಲ್ಲಿ ಪ್ರಮಾಣವಾಗಲಾರವು ಧರ್ಮಾದಿಗಳು ಅನುಮಾನಾದಿ ಪ್ರಮಾಣಗಳಿಂದ ಗೋಚರವಾಗುವ ವಿಷಯಗಳಲ್ಲ. ಆದುದರಿಂದ ಅವು ಈ ವಿಷಯಗಳಿಗೆ ಪ್ರಮಾಣವಾಗಲಾರವು (ಅಪೌರುಷೇಯವಾಕ್ಯರೂಪ ಆಗಮವೊಂದೇ ಧರ್ಮಾದಿಗಳ ವಿಷಯದಲ್ಲಿ ಪ್ರಮಾಣವು ಅದನ್ನು ಬಿಟ್ಟು ಬೇರೆ ಯಾವವೂ ಅಲ್ಲ) ಆದ್ದರಿಂದ ಅಪೌರುಷೇಯ ವಾಕ್ಯದಿಂದಲೇ ಧರ್ಮಾದಿಗಳು ಸಿದ್ಧವಾಗುವವೆಂದು ಎಲ್ಲ ವಾದಿಗಳೂ ಒಪ್ಪಿಕೊಳ್ಳಲೇಬೇಕು

**ಅಪೌರುಷೇಯ ವೇದಗಳು ಆಪ್ತವಾಕ್ಯವಲ್ಲದ್ದರಿಂದ ಅಪ್ರಮಾಣವಲ್ಲ ಎಂಬ ಆಕ್ಷೇಪ ಸರಿಯಲ್ಲ.**

ಅಪೌರುಷೇಯವಾಕ್ಯರೂಪವಾದ ವೇದಗಳ ಪ್ರಾಮಾಣ್ಯವು (ಅವು ಯಥಾರ್ಥ ಜ್ಞಾನವನ್ನು ಉಂಟುಮಾಡಿಕೊಡುವದು) ಸ್ವತಃಸಿದ್ಧವಾಗಿದೆ (ಅಂದರೆ ಅದು ಗುಣ ಸಾಪೇಕ್ಷವಾಗಿಲ್ಲ) ಆದರಿಂದ ಉಂಟಾಗ ಜ್ಞಾನದ ಯಾಥಾರ್ಥ್ಯರೂಪವಾದ ಪ್ರಾಮಾಣ್ಯವೂ ಸ್ವತಃ ಇರುವದು (ಅಂದರೆ ಅದೂ ಗುಣ ಸಾಪೇಕ್ಷವಾಗಿಲ್ಲ).

(ಅಪ್ರಾಮಾಣ್ಯವು ಮಾತ್ರ ಪರತಃ ಅಂದರೆ ಅಜ್ಞಾನ ವಿಪ್ರಲಂಭಾದಿ ದೋಷ ಮೂಲಕವಾಗಿರುವದು) ವಾಕ್ಯಗತವಾದ ಅಪ್ರಾಮಾಣ್ಯವು ಪರತಃ ಅಂದರೆ ದೋಷ ಮೂಲಕ ಎಂದು ಅಂಗೀಕರಿಸದಿದ್ದರೆ ದುಷ್ಟವಾದ ಇಂದ್ರಿಯಗಳು ಮತ್ತು ದುಷ್ಟವಾದ

ಲಿಂಗಗಳು ಇವೂ ಅಪ್ರಾಮಾಣ್ಯಕ್ಕೆ ಕಾರಣವಲ್ಲ ಎಂದು ಹೇಳಬೇಕಾದೀತು ದುಷ್ಟವಾದ ಇಂದ್ರಿಯ ಮತ್ತು ಲಿಂಗಗಳು ಅಪ್ರಾಮಾಣ್ಯಕ್ಕೆ ಕಾರಣ ಎಂಬುದನ್ನು ಅಂಗೀಕರಿಸದಿದ್ದರೆ ಅದು ಅನುಭವಕ್ಕೆ ವಿರುದ್ಧವಾಗುವದು (ದುಷ್ಟವಾದ ಇಂದ್ರಿಯ ಮತ್ತು ಲಿಂಗಗಳಿಂದ ಅಯಥಾರ್ಥಜ್ಞಾನ ಬರುವದು ಅನುಭವಸಿದ್ಧವಾಗಿದೆ) ಆದ್ದರಿಂದ ಪ್ರಾಮಾಣ್ಯವು ಸ್ವತಃ ಅಂದರೆ ಗುಣನಿರಪೇಕ್ಷವಾಗಿರುವದು ಅಪ್ರಾಮಾಣ್ಯವು ಪರತಃ ಅಂದರೆ ದೋಷಮೂಲಕ ವಾಗಿರುವದು

**ಧರ್ಮ, ಅಧರ್ಮಗಳು ಇತರ ಪ್ರಮಾಣಗಳಿಗೆ ಗೋಚರವಲ್ಲ.**

ವಿವರಣೆ—ಧರ್ಮ, ಅಧರ್ಮ ಇತ್ಯಾದಿ ಅತೀಂದ್ರಿಯ ವಿಷಯಗಳನ್ನು ಎಲ್ಲ ದಾರ್ಶನಿಕರೂ ಒಪ್ಪಿಕೊಂಡಿರುವರು (ಇದನ್ನು ಒಪ್ಪಿಕೊಳ್ಳದವರು ದಾರ್ಶನಿಕರೇ ಅಲ್ಲ. ಅಂಥವರ ದರ್ಶನಕ್ಕೆ ವಿಷಯ, ಪ್ರಯೋಜನಗಳೇ ಇಲ್ಲ ಎಂದು ಈ ಹಿಂದೆಯೇ ವಿವರಿಸ ಲಾಗಿದೆ) ಹೀಗೆ ಒಪ್ಪಿಕೊಂಡಮೇಲೆ ಈ ಧರ್ಮ, ಅಧರ್ಮಗಳನ್ನು ತಿಳಿಸಿಕೊಡುವ ಪ್ರಮಾಣವನ್ನೂ ಸಾಮಾನ್ಯವಾಗಿ ಎಲ್ಲ ದಾರ್ಶನಿಕರೂ ಒಪ್ಪಿಕೊಂಡಂತಾಯಿತು. ಇನ್ನು ಈ ಪ್ರಮಾಣ ಯಾವದು ಎಂಬ ವಿಶೇಷ ಜಿಜ್ಞಾಸೆಯುಂಟಾಗಲು ಅಪೌರುಷೇಯ-ವಾಕ್ಯರೂಪವಾದ ವೇದವೇ ಪ್ರಮಾಣವೆಂದು ಹೇಳಬೇಕಾಗುವದು ಯಾಕೆಂದರೆ ಪ್ರತ್ಯಕ್ಷ, ಅನುಮಾನ ಅಥವಾ ಪೌರುಷೇಯ ವಾಕ್ಯಗಳು ಧರ್ಮಾಧರ್ಮಾದಿ ವಿಷಯ ಗಳಲ್ಲಿ ಪ್ರಮಾಣವಾಗಲು ಅಸಮರ್ಥವಾಗಿವೆ ಈ ವಿಷಯಗಳು ಈ ಪ್ರಮಾಣಗಳಿಗೆ ಗೋಚರವೇ ಆಗುವದಿಲ್ಲ ಯೋಗಿಗಳು ಸಿದ್ಧರು ಇವರಿಗೂ ಇವು ಅಪೌರುಷೇಯ ಆಗಮದಿಂದಲೇ ತಿಳಿದುಬರುವವು

**ಪ್ರಾಮಾಣ್ಯವು ಸ್ವತಃ, ಅಪ್ರಾಮಾಣ್ಯವು ಪರತಃ.**

ಇನ್ನು ಈ ಅಪೌರುಷೇಯ ವಾಕ್ಯರೂಪವಾದ ವೇದಗಳು ಆಪ್ತವಾಕ್ಯಗಳಲ್ಲವಾದ್ದ ರಿಂದ ಪ್ರಮಾಣವೇ ಅಲ್ಲ ಎಂಬ ಶಂಕೆಯು ಸರಿಯಲ್ಲ ವಾಕ್ಯವು ಆಪ್ತೋಕ್ತವಾದಾಗ ಮಾತ್ರ ಪ್ರಮಾಣ, ವೇದಗಳು ಅಪೌರುಷೇಯವಾದ್ದರಿಂದ ಆಪ್ತೋಕ್ತವಲ್ಲ, ಆದ್ದರಿಂದ ಅವು ಪ್ರಮಾಣವೇ ಅಲ್ಲ ಎಂಬ ಈ ವಾದವು ಸರಿಯಲ್ಲ ಯಾಕೆಂದರೆ ವೇದಗಳ ಪ್ರಾಮಾಣ್ಯವು ಆಪ್ತೋಕ್ತತ್ವರೂಪಗುಣದಿಂದ ಉಂಟಾದುದಲ್ಲ ಅದರ ಪ್ರಾಮಾಣ್ಯವು ಸ್ವತಃ ಸಿದ್ಧವಾದುದು ಗುಣಸಾಪೇಕ್ಷವಾದುದಲ್ಲ ವೇದಜನ್ಯಜ್ಞಾನದ ಪ್ರಾಮಾಣ್ಯವೂ ಸ್ವತಃ ಅಂದರೆ ಗುಣನಿರಪೇಕ್ಷವಾದುದು ಆಪ್ತೋಕ್ತತ್ವಾದಿರೂಪ ಗುಣಗಳಿಗೂ ಪ್ರಾಮಾಣ್ಯಕ್ಕೂ ಏನೂ ಸಂಬಂಧವಿಲ್ಲ ಹಾಗಾದರೆ ಬೌದ್ಧಾದಿವಾಕ್ಯಗಳೂ ಪ್ರಮಾಣ ವಾಗಲಿ ಎಂಬ ಶಂಕೆಯು ಸರಿಯಲ್ಲ. ಬೌದ್ಧಾದಿವಾಕ್ಯಗಳಲ್ಲಿ ಅಜ್ಞಾನ, ವಿಪ್ರಲಂಭ ಇತ್ಯಾದಿ ದೋಷಗಳಿರುವವು ಈ ದೋಷಗಳು ವಾಕ್ಯಕ್ಕಿರುವ ಯಥಾರ್ಥಜ್ಞಾನವನ್ನು ಕೊಡುವ ಸಹಜಶಕ್ತಿಯನ್ನು ಪ್ರತಿಬಂಧಿಸಿ ವಿಪರೀತ ಜ್ಞಾನವನ್ನುಂಟುಮಾಡುವವು. ಈ ದೋಷಮೂಲಕವಾಗಿಯೇ ಬೌದ್ಧಾದಿವಾಕ್ಯಗಳು ಅಪ್ರಮಾಣವಾಗಿರುವವು ವಾಕ್ಯವು

*

ಪ್ರಮಾಣವಾಗಿರಲು ಗುಣವು ಬೇಕಿಲ್ಲ. ಆದರೆ ಅಪ್ರಮಾಣವಾಗಲು ದೋಷಗಳು ಬೇಕು ಹೇಗೆ ದುಷ್ಟವಾದ ಇಂದ್ರಿಯಗಳೂ, ದುಷ್ಟವಾದ ಲಿಂಗಗಳೂ ಅಯಥಾರ್ಥಜ್ಞಾನವನ್ನುಂಟುಮಾಡುವವೋ ಹಾಗೆ ದುಷ್ಟವಾದ ವಾಕ್ಯಗಳೂ ಅಯಥಾರ್ಥಜ್ಞಾನವನ್ನುಂಟು ಮಾಡುವವು ಇಂದ್ರಿಯಗಳು ಮತ್ತು ಲಿಂಗಗಳು ಜ್ಞಾನವನ್ನುಂಟುಮಾಡುವದು ಅವುಗಳ ಸಹಜಸ್ವಭಾವವು ಈ ಜ್ಞಾನವು ಯಥಾರ್ಥವಾಗಿರಲು ಇನ್ನೇನೂ ಬೇಕಾಗಿಲ್ಲ ಜ್ಞಾನದ ಈ ಯಥಾರ್ಥತ್ವವು ಗುಣನಿರಪೇಕ್ಷವಾಗಿರುವದು ಆದರೆ ಅದು ಅಪ್ರಮಾಣವಾಗಲು ದೋಷಗಳು ಬೇಕು ಇದರಂತೆಯೇ ವಾಕ್ಯದ ಮತ್ತು ಅದರಿಂದುಂಟಾಗುವ ಜ್ಞಾನದ ಪ್ರಾಮಾಣ್ಯವು ಆಪ್ತತ್ವಾದಿ ಗುಣನಿರಪೇಕ್ಷವಾಗಿರುವದು. ಇದೇ ಸ್ವತಸ್ತ್ವವು ಆದರೆ ದೋಷಗಳಿದ್ದರೆ ಆ ವಾಕ್ಯವು ಮತ್ತು ಅದರಿಂದುಂಟಾಗುವ ಜ್ಞಾನವು ಅಪ್ರಮಾಣವಾಗುವದು. ಈ ದೋಷಮೂಲಕತ್ವವೇ ಪರತಸ್ತ್ವವು ಇಂಥ ದೋಷಮೂಲಕತ್ವವು ಪೌರುಷೇಯವಾಕ್ಯಗಳಲ್ಲಿ ಕೆಲವೊಮ್ಮೆ ಸಂಭಾವಿತವಾಗಿರುವದು ಆದರೆ ಅಪೌರುಷೇಯ ವಾಕ್ಯಗಳಲ್ಲಿ ಇಂಥ ದೋಷಮೂಲಕತ್ವಕ್ಕೆ ಅವಕಾಶವೇ ಇಲ್ಲ ಆದ್ದರಿಂದ ಅವು ಆಪ್ತೋಕ್ತವಾಗಿರದಿದ್ದರೂ ಪ್ರಮಾಣವಾಗಿರಲು ಯಾವ ಬಾಧಕವೂ ಇಲ್ಲ

**ವೇದಗಳು ನಿತ್ಯವೆಂದು ತಿಳಿಸುವ ಶ್ರುತಿ—ಪುರಾಣ ವಚನಗಳು.**

**12.** ವಾಚಾ ವಿರೂಪನಿತ್ಯಯಾ ।
ನಿತ್ಯಯಾ ಅನಿತ್ಯಯಾ ಸ್ತೌಮಿ ಬ್ರಹ್ಮ ತತ್ಪರಮಂ ಪದಮಿತಿ ।
ಶ್ರುತಿರ್ವಾವ ನಿತ್ಯಾ ಅನಿತ್ಯಾ ವಾವ ಸ್ಮೃತಯಃ ಯಾಶ್ಚಾನ್ಯಾ
ವಾಚಃ । ಇತಿ ಪೈಂಗಿಶ್ರುತಿಃ

ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ ।
ಅನಾದಿನಿತ್ಯಾ ಸಾ ತಚ್ಚ ವಿನಾ ತಂ ನ ಸ ಗಮ್ಯತೇ ॥
ಇತಿ ಕಾತ್ಯಾಯನಶ್ರುತಿಃ

ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ ಬ್ರಹ್ಮ
ವಿಷ್ಠಿತಂ ತಾವತೀ ವಾಕ್ ।

ಕಃ ಛಂದಸಾಂ ಯೋಗಮಾವೇದ ಧೀರಃ ಕೋ ಧಿಷ್ಣ್ಯಾಂ
ಪ್ರತಿ ವಾಚಂ ಪಪಾದ । —ಇತ್ಯಾದಿ ಚ

ಅನುವಾದ—ವಿರೂಪನಾಮಕ ಋಷಿಯೇ! ನಿತ್ಯವಾದ ವೇದರೂಪವಾಣಿಯಿಂದ ಸ್ತುತಿಸು.

"ಪರಮಪ್ರಾಪ್ಯನಾದ ಬ್ರಹ್ಮನನ್ನು ನಿತ್ಯ ಮತ್ತು ಅನಿತ್ಯವಾದ ವಾಣಿಗಳಿಂದ ಸ್ತುತಿಸುವೆನು. ಶ್ರುತಿಯು ನಿತ್ಯವಾದ ವಾಣಿಯು, ಸ್ಮೃತಿಗಳು ಮತ್ತು ಇನ್ನಿತರ ವಚನಗಳು ಅನಿತ್ಯವಾದವು" ಎಂದು ಪೈಂಗಿಶ್ರುತಿಯಿದೆ

"ಬ್ರಹ್ಮನು (ಮುಮುಕ್ಷುಗಳಿಂದ) ಪ್ರಧಾನವಾಗಿ ತಿಳಿದುಕೊಳ್ಳಲ್ಪಡತಕ್ಕವನು ಶ್ರುತಿಯು ಇದಕ್ಕೆ ಪ್ರಧಾನವಾದ ಪ್ರಮಾಣವು ಈ ಶ್ರುತಿಯು ಅನಾದಿನಿತ್ಯವಾದುದು ಈ ಶ್ರುತಿಯನ್ನು ಬಿಟ್ಟು (ಬೇರೆ ಯಾವ ಪ್ರಮಾಣದಿಂದಲೂ) ಈ ಬ್ರಹ್ಮನು ತಿಳಿಯಲಾರನು" ಎಂದು ಕಾತ್ಯಾಯನ ಶ್ರುತಿಯಿದೆ

ಬ್ರಹ್ಮನ ಮಹಿಮೆಗಳು ಅಪರಿಮಿತವಾದವು ಅವನ ಒಂದೊಂದು ಮಹಿಮೆಯೂ ಅಪರಿಮಿತವಾದುದು ಬ್ರಹ್ಮನು ಎಷ್ಟು ದೇಶಕಾಲಗಳನ್ನು ವ್ಯಾಪಿಸಿಕೊಂಡಿರುವನೋ ಅಷ್ಟು ದೇಶಕಾಲಗಳನ್ನು ವೇದವಾಣಿಯೂ ವ್ಯಾಪಿಸಿಕೊಂಡಿರುವದು ವೇದಗಳ ಅರ್ಥವನ್ನು ಯಾವ ಮೇಧಾವಿಯು ಬಲ್ಲನು ? ಯಾರು (ಸಮಗ್ರ) ಅರ್ಥಜ್ಞಾನಪೂರ್ವಕವಾಗಿ ವ್ಯಾಖ್ಯಾನ ಮಾಡಬಲ್ಲರು ? ಇತ್ಯಾದಿ ಶ್ರುತಿಯಿದೆ

ವಿವರಣೆ—ಅನುಮಾನಾದಿಗಳಿಂದ ವೇದಾಪೌರುಷೇಯತ್ವವನ್ನು ಸಮರ್ಥಿಸಿದ ನಂತರ ಈಗ ಶ್ರುತಿ—ಪುರಾಣವಚನಗಳಿಂದ ಅದನ್ನು ಇಲ್ಲಿ ಸಮರ್ಥಿಸುವರು 'ವಿರೂಪ' ಎಂಬುದು ಒಬ್ಬ ಋಷಿಯ ಹೆಸರು 'ಪದ' ಅಂದರೆ ಪ್ರಾಪ್ಯವಾದುದು 'ಜ್ಞಾಪಿಕಾ' ಅಂದರೆ ಪ್ರಮಾಣವು. 'ಯಾವತ್' ಮತ್ತು 'ತಾವತ್' ಎಂಬವು ಇಲ್ಲಿ ದೇಶಕಾಲ ವ್ಯಾಪ್ತಿಯನ್ನು ಸೂಚಿಸುವವು 'ಯೋಗ' ಅಂದರೆ ಅರ್ಥದೊಡನೆ ಇರುವ ವಾಚ್ಯವಾಚಕ ಭಾವಸಂಬಂಧ 'ಧೀರಃ' ಅಂದರೆ ಮೇಧಾವಿಯು, ಬುದ್ಧಿವಂತನು 'ಧಿಷ್ಣ್ಯಾವತ್' ಅಂದರೆ ವಿಚಾರಪೂರ್ವಕವಾಗಿ, ಅರ್ಥಜ್ಞಾನಪೂರ್ವಕವಾಗಿ ಎಂದು ಅರ್ಥವು. ವೇದಾರ್ಥವನ್ನು ತಿಳಿದುಕೊಂಡವರೂ, ತಿಳಿದು ವ್ಯಾಖ್ಯಾನ ಮಾಡುವವರೂ ದುರ್ಲಭ ಅಂದಮೇಲೆ ಅದನ್ನು ರಚಿಸುವ ಸಾಮರ್ಥ್ಯರುವವರು ಯಾರು ? ಆದ್ದರಿಂದ ಅದು ಅಪೌರುಷೇಯ

**ವೇದಗಳು ನಿತ್ಯ ಪುರಾಣಗಳು ನಿತ್ಯಾನಿತ್ಯ.**

**13.** **ನಿತ್ಯಾ ವೇದಾ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ ।**
**ಸರ್ಗೇ ಸರ್ಗೇsಮುನೈವೈತೇ ಉದ್ಗೀರ್ಯಂತೇ ತಥೈವ ಚ ॥**
**ತತ್ಕ್ರಮೇಣೈವ ತೈರ್ವರ್ಣೈಃ ತೈಃ ಸ್ವರೈರೇವ ನಾನ್ಯಥಾ ।**
**ಅತಃ ಶ್ರುತಿತ್ವಮೇತಾಸಾಂ ಶ್ರುತಾ ಏವ ಯತೋsಖಿಲೈಃ ॥**
**ಜನ್ಮಾಂತರೇ ಶ್ರುತಾಃ ತಾಸ್ತು ವಾಸುದೇವಪ್ರಸಾದತಃ ।**
**ಮುನೀನಾಂ ಪ್ರತಿಭಾಸ್ಯಂತಿ ಭಾಗೇನೈವ ನ ಸರ್ವತಃ ॥**
**ಯತಃ ತಾಃ ಹರಿಣಾ ದೃಷ್ಟಾಃ ಶ್ರುತಾ ಏವಾಪರೈಃ ಜನೈಃ ।**
**ಶ್ರುತಯೋ ದೃಷ್ಟಯಶ್ಚೇತಿ ತೇನೋಚ್ಯಂತೇ ಪುರಾತನೈಃ ॥**
**ತದುತ್ಪತ್ತಿವಚಶ್ಚೈವ ಭವೇದ್ವ್ಯಕ್ತಿಮಪೇಕ್ಷ್ಯ ತು ।**
**ಚೇತನಸ್ಯ ಜನಿಃ ಯದ್ವದುಚ್ಯತೇ ಸರ್ವಲೌಕಿಕೈಃ ॥**
**ಪುರಾಣಾನಿ ತದರ್ಥಾನಿ ಸರ್ಗೇ ಸರ್ಗೇ ಅನ್ಯಥೈವ ತು ॥**

ಕ್ರಿಯಂತೇsತಸ್ತ್ವನಿತ್ಯಾನಿ ತದರ್ಥಾಃ ಪೂರ್ವಸರ್ಗವತ್ ।
ವೇದಾನಾಂ ಸೃಷ್ಟಿವಾಕ್ಯಾನಿ ಭವೇಯುಃ ವ್ಯಕ್ತ್ಯಪೇಕ್ಷಯಾ ॥
ಅವಾಂತರಾಭಿಮಾನಾನಾಂ ದೇವಾನಾಂ ವಾ ವ್ಯಪೇಕ್ಷಯಾ ॥
ನಾನಿತ್ಯತ್ವಾತ್ ಕುತಃ ತೇಷಾಮನಿತ್ಯತ್ವಂ ಸ್ಥಿರಾತ್ಮನಾಮ್ ॥

ಇತಿ ಬ್ರಹ್ಮಾಂಡೇ

**ಅನುವಾದ**—(ವಿಧಿ, ಅರ್ಥವಾದ, ಸಂಕಲ್ಪ, ಪ್ರಾರ್ಥನಾ, ಪ್ರೇಷಣ ಇತ್ಯಾದಿ ಅನೇಕ ಪ್ರಕಾರವಾದ) ಸಮಸ್ತ ವೇದಗಳೂ ನಿತ್ಯವಾದವುಗಳು ಮತ್ತು ಶಾಶ್ವತ ಅಂದರೆ ಯಾವಾಗಲೂ ಏಕಪ್ರಕಾರವಾದವು ಇವು ವಿಷ್ಣುಬುದ್ಧಿಗತವಾಗಿ ಇರುವವು (ಆದ್ದರಿಂದ ಪ್ರಲಯಕಾಲದಲ್ಲಿಯೂ ಇವಕ್ಕೆ ವಿಚ್ಛೇದವಿಲ್ಲ) ಪ್ರತಿಯೊಂದು ಸೃಷ್ಟಿಯ ಆರಂಭದಲ್ಲಿಯೂ ಪರಮಾತ್ಮನಿಂದ (ಚತುರ್ಮುಖ ಬ್ರಹ್ಮಾದಿಗಳಿಗೆ) ಒಂದೇ ರೀತಿಯಲ್ಲಿ ಉಪದೇಶಿಸಲ್ಪಡುತ್ತವೆ. ಒಂದೇ ರೀತಿಯಾದ ವರ್ಣ, ಸ್ವರ, ಕ್ರಮಗಳುಳ್ಳವುಗಳಾಗಿ ಉಚ್ಚರಿಸಲ್ಪಟ್ಟು ಉಪದೇಶಿಸಲ್ಪಡುತ್ತವೆ ಇವುಗಳಲ್ಲಿ ಯಾವದೇ ವಿಧವಾದ ವ್ಯತ್ಯಾಸವೂ ಮಾಡಲ್ಪಡುವದಿಲ್ಲ

ವೇದಗಳಿಗೆ 'ಶ್ರುತಿ' ಎಂಬ ಹೆಸರಿರುವದು ಇವು ಅಪೌರುಷೇಯವಾದುದರಿಂದಲೇ ಉಪಪನ್ನವಾಗುವದು ಇವು ಶ್ರುತವಾಗುವದರಿಂದಲೇ 'ಶ್ರುತಿ'ಗಳೆನಿಸಲ್ಪಟ್ಟಿವೆ (ಯಾರಿಂದಲೂ ಕೃತವಾಗಿಲ್ಲ ಆದರೆ ಶ್ರುತವಾಗಿವೆ) ದ್ರಷ್ಟಾರರಾದ ಋಷಿಗಳೂ ಇವುಗಳನ್ನು ಜನ್ಮಾಂತರದಲ್ಲಿ ಶ್ರವಣಮಾಡಿರುವರು (ಹೀಗೆ ಜನ್ಮಾಂತರದಲ್ಲಿ ಶ್ರವಣ ಮಾಡಲ್ಪಟ್ಟಿವೆ). ವಾಸುದೇವನ ಪ್ರಸಾದದಿಂದ ಆಯಾ ಋಷಿಗಳಿಗೆ ಭಾಗಶಃ ಪ್ರಕಟವಾಗುವವು. ಸರ್ವವೇದಗಳೂ ಯಾರಿಗೂ ಪ್ರಕಟವಾಗುವದಿಲ್ಲ ಈ ವೇದಗಳು ಪರಮಾತ್ಮನಿಗೆ ದೃಷ್ಟವಾಗಿವೆ ಇತರರಿಗೆ ಶ್ರುತವಾಗಿವೆ ಆದ್ದರಿಂದಲೇ ಇವುಗಳನ್ನು ಪುರಾತನರು ದೃಷ್ಟಿ, ಶ್ರುತಿ ಎಂದು ಕರೆಯುವರು ವೇದಗಳ ಉತ್ಪತ್ತಿಯನ್ನು ಹೇಳುವ ವಚನಗಳು ಸೃಷ್ಟಿಯ ಆದಿಯಲ್ಲಿ ಅವುಗಳ ಅಭಿವ್ಯಕ್ತಿಯಾಗುವದನ್ನು ಉದ್ದೇಶವಾಗಿಟ್ಟುಕೊಂಡು ಸೃಷ್ಟಿ ಎಂದು ಹೇಳುವವು ಲೌಕಿಕ ವ್ಯವಹಾರದಲ್ಲಿ ಚೇತನರಿಗೆ ಜನ್ಮವನ್ನು ಹೇಗೆ ಉಪಚಾರದಿಂದ ಹೇಳುವದು ಕಂಡುಬಂದಿದೆಯೋ ಹಾಗೆಯೇ ವೇದಗಳ ಉತ್ಪತ್ತಿಯ ವಚನಗಳೂ ಔಪಚಾರಿಕವಾಗಿವೆ

ವೇದಗಳ ಅರ್ಥವನ್ನು ತಿಳಿಸುವದೇ ಪ್ರಯೋಜನವಾಗಿರುವ ಪುರಾಣಗಳು ಮಾತ್ರ ಪ್ರತಿಯೊಂದು ಸೃಷ್ಟಿಯಲ್ಲಿಯೂ ಪದಾದಿಕ್ರಮವ್ಯತ್ಯಾಸದಿಂದ ರಚಿಸಲ್ಪಡುವವು. ಆದುದರಿಂದ ಅವು ಅನಿತ್ಯವಾಗಿರುವವು. ಅವುಗಳ ಅರ್ಥ ಅಂದರೆ ಪ್ರತಿಪಾದ್ಯ ವಿಷಯದಲ್ಲಿ ಮಾತ್ರ ವ್ಯತ್ಯಾಸವಿರುವದಿಲ್ಲ.

ವೇದಗಳ ಸೃಷ್ಟಿಯನ್ನು ಹೇಳುವ ವಾಕ್ಯಗಳು ಅವುಗಳ ಅಭಿವ್ಯಕ್ತಿಯ ಅಭಿಪ್ರಾಯದಿಂದಲೇ ಹೇಳುವವು. ಅಥವಾ ಅವುಗಳಿಗೆ ಅಮುಖ್ಯ ಅಭಿಮಾನಿಗಳಾದ ದೇವತೆಗಳ

ಜನ್ಮವನ್ನು ಉದ್ದೇಶವಾಗಿಟ್ಟುಕೊಂಡು ವೇದಗಳ ಸೃಷ್ಟಿಯನ್ನು ಹೇಳುವವು (ಈ ಸೃಷ್ಟಿ ವಚನಗಳು) ವೇದಗಳ ಅನಿತ್ಯತ್ವವನ್ನು ಸೂಚಿಸುವದಿಲ್ಲ ಸ್ಥಿರವಾದ ಅವುಗಳಿಗೆ ಅನಿತ್ಯತ್ವದ ಸಂಭವವೇ ಇಲ್ಲ—ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ

ವಿವರಣೆ—ವೇದಗಳು 'ಯಜೇತ ಸ್ವರ್ಗಕಾಮಃ' ಇತ್ಯಾದಿ ವಿಧಿಗಳು, 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದಗಳು, 'ಭೂಯಸಾ ಯಜ್ಞೇನ ಭೂಯೋ ಯಜೇಯ' ಇತ್ಯಾದಿ ಸಂಕಲ್ಪ, 'ತನ್ಮಾಮವತು' ಇತ್ಯಾದಿ ಪ್ರಾರ್ಥನೆ, 'ಅಗ್ನೀದ ಅಗ್ನೀನ್ ವಿಹರ' ಇತ್ಯಾದಿ ಪ್ರೇಷಣೆಗಳಿಂದ ಕೂಡಿವೆ ಮಂತ್ರಭಾಗಗಳಲ್ಲಿಯೂ 'ಅಹಂ ರುದ್ರೇಭಿಃ' ಇತ್ಯಾದಿಗಳಲ್ಲಿ 'ಅಹಮ್' ಶಬ್ದ ಪ್ರಯೋಗವೂ 'ವಸುಭಿಃ ಚರಾಮಿ' ಇತ್ಯಾದಿಗಳಲ್ಲಿ ಉತ್ತಮ ಪುರುಷ ಪ್ರಯೋಗವೂ ಕಂಡುಬರುತ್ತವೆ ಇವುಗಳಿಂದ ಇವು ಸ್ವತಂತ್ರವಕ್ತೃಪೂರ್ವಕವಾಗಿವೆ, ಸ್ವತಂತ್ರವಕ್ತೃಗಳಾದ ಪುರುಷರ ಅಭಿಪ್ರಾಯಪೂರ್ವಕವಾಗಿವೆ, ಎಂದು ತಿಳಿದುಬರುತ್ತದೆ ಸ್ವತಂತ್ರವಕ್ತೃವೆಂದರೆ ಕೇವಲ ಇನ್ನೊಬ್ಬರು ಉಚ್ಚರಿಸಿದ್ದನ್ನೇ ಉಚ್ಚರಿಸದ ಸ್ವಾಭಿಪ್ರಾಯಪೂರ್ವಕವಾಗಿ ಅದನ್ನು ತಿಳಿಸಲು ಮಾತನಾಡುವವನು (ಸಜಾತೀಯೋಚ್ಚಾರಣಮನಪೇಕ್ಷ್ಯ ಉಚ್ಚಾರಯಿತಾ ಪುರುಷಃ ಸ್ವತಂತ್ರಃ ಶ್ರೀ ಟಿ ). ಇಂಥ ಸ್ವತಂತ್ರವಕ್ತೃವಿನ ಅಭಿಪ್ರಾಯದ ಪ್ರವೇಶವು ವೇದಗಳಲ್ಲಿ ಕಂಡುಬರುವದರಿಂದ ವೇದಗಳು ಪೌರುಷೇಯವೇ ಆಗಿವೆ, ಅಪೌರುಷೇಯವಲ್ಲ ಎಂಬ ಆಕ್ಷೇಪವು ಸರಿಯಲ್ಲ. ಯಾಕಂದರೆ ಈ ವಿಧವಾದ ಪುರುಷಾಭಿಪ್ರಾಯದ ಪ್ರವೇಶ ಮಾತ್ರದಿಂದ ಪೌರುಷೇಯತ್ವವು ಸಿದ್ಧವಾಗುವದಿಲ್ಲ. 'ಶಿಷ್ಯಃ ತೇ ಅಹಮ್' ಎಂಬ ಗೀತಾವಾಕ್ಯದಲ್ಲಿ 'ಅಹಮ್' ಎಂಬುದು ವ್ಯಾಸರನ್ನು ಉಲ್ಲೇಖಿಸುವದಿಲ್ಲ ಅಲ್ಲಿ ಅರ್ಜುನನ ಅಭಿಪ್ರಾಯ ಪ್ರವೇಶವಿರುವದು ಆದರೆ ಅವನು ಅಲ್ಲಿ ಸ್ವತಂತ್ರವಕ್ತೃವಲ್ಲ. ಇದರಂತೆಯೇ 'ವಾಚ್ಯಃ ತ್ವಯಾ ಮದ್ವಚನಾತ್ ಸ ರಾಜಾ' ಎಂಬ ರಘುವಂಶದ ವಾಕ್ಯದಲ್ಲಿ ಬಂದ 'ಮತ್' ಎಂಬುದು ಕಾಲಿದಾಸನನ್ನು ಉಲ್ಲೇಖಿಸುವದಿಲ್ಲ ಅಲ್ಲಿ ಸೀತೆಯ ಅಭಿಪ್ರಾಯ ಪ್ರವೇಶವಿರುವದು. ಆದರೆ ಅವಳು ಅಲ್ಲಿ ಸ್ವತಂತ್ರವಕ್ತೃವಲ್ಲ. ಆದ್ದರಿಂದ ಪುರುಷಾಭಿಪ್ರಾಯಪ್ರವೇಶವಿದ್ದ ವಾಕ್ಯಗಳೆಲ್ಲ ಆಯಾ ಪುರುಷರ ವಾಕ್ಯಗಳು ಎಂದು ಹೇಳಲು ಬರುವದಿಲ್ಲ. ಅವೆಲ್ಲ ಸ್ವಾಭಿಪ್ರಾಯವನ್ನು ಪ್ರಕಟಿಸಲು ಆಯಾ ಪುರುಷರು ಸ್ವತಂತ್ರವಕ್ತೃಗಳಾಗಿ ರಚಿಸಿದ ವಾಕ್ಯಗಳಲ್ಲ. ಆದ್ದರಿಂದ ವೇದಗಳಲ್ಲಿ ವಿಧಿ, ಅರ್ಥವಾದ, ಸಂಕಲ್ಪ ಇತ್ಯಾದಿ ವಾಕ್ಯಗಳಲ್ಲಿ ಪುರುಷಾಭಿಪ್ರಾಯದ ಪ್ರವೇಶವಿದ್ದರೂ ಅವೆಲ್ಲ ಆಯಾ ಪುರುಷರು ಸ್ವತಂತ್ರವಕ್ತೃಗಳಾಗಿ ರಚಿಸಿದ ವಾಕ್ಯಗಳಲ್ಲ ಇಂಥ ಪುರುಷಾಭಿಪ್ರಾಯದ ಪ್ರವೇಶದಿಂದ ವೇದಗಳ ಅಪೌರುಷೇಯತ್ವಕ್ಕೆ ಯಾವ ಬಾಧಕವಿಲ್ಲ. ಅವು ನಿತ್ಯವೂ ಶಾಶ್ವತವೂ ಅಂದರೆ ವರ್ಣಾದಿಕ್ರಮವ್ಯತ್ಯಾಸವಿಲ್ಲದವೂ ಆಗಿವೆ

ಇನ್ನು ವರ್ಣಗಳು ನಿತ್ಯವೂ ಸರ್ವಗತವೂ ಆದ್ದರಿಂದ ಸ್ವತಃ ಅವಕ್ಕೆ ಕ್ರಮವಿಲ್ಲ. ನಿತ್ಯವಾದ್ದರಿಂದ ಕಾಲಸಂಬಂಧವಾದ ಕ್ರಮವಿಲ್ಲ. ಸರ್ವಗತವಾದ್ದರಿಂದ ದೇಶಸಂಬಂಧವಾದ ಕ್ರಮವಿಲ್ಲ. ಆದರೆ ಕ್ರಮವಿಲ್ಲದೆ ಪದಗಳಾಗಲೀ ವಾಕ್ಯಗಳಾಗಲೀ ಆಗುವದಿಲ್ಲ.

ಪದವಾಕ್ಯರೂಪವಿಲ್ಲದೆ ಶಬ್ದವು ಪ್ರಮಾಣವಾಗುವದಿಲ್ಲ ಆದ್ದರಿಂದ ಪೌರುಷೇಯವಾದ ಅಂದರೆ ಪುರುಷಕೃತವಾದ ಕ್ರಮವನ್ನೇ ಅಂಗೀಕರಿಸಬೇಕು ಅಂದಮೇಲೆ ವೇದಗಳು ಅಪೌರುಷೇಯವೆಂದು ಹೇಗೆ ಹೇಳುವಿರಿ ಎಂಬ ಆಕ್ಷೇಪವೂ ಸರಿಯಲ್ಲ ವೇದಗಳಲ್ಲಿ ಪುರುಷಕೃತವಲ್ಲದ ಆನುಪೂರ್ವೀರೂಪವಾದ ಕ್ರಮವಿರುವದು ಇದು ವೇದಗಳಲ್ಲಿಯ ವರ್ಣಗಳ ಅಭಿವ್ಯಕ್ತಿ ಕ್ರಮರೂಪವಾದ ಕ್ರಮವು. ವರ್ಣಗಳಿಗೆ ವ್ಯಂಜಕವಾದ ಧ್ವನಿಗಳನ್ನು ಹುಟ್ಟಿಸುವ ಕಂಠತಾಲ್ವಾದಿಜನ್ಯಕ್ರಿಯೆಗಳು ಕ್ರಮೇಣ ಆಗುವವು ಈ ಕ್ರಿಯೆಗಳಿಂದ ವ್ಯಂಜಿತಧ್ವನಿಗಳು ಕ್ರಮೇಣ ಉಂಟಾಗುವವು ಈ ಧ್ವನಿಗಳಿಂದ ಕ್ರಮೇಣ ವರ್ಣಗಳ ಅಭಿವ್ಯಕ್ತಿ ಅಂದರೆ ಪ್ರತೀತಿಯುಂಟಾಗುವದು ಈ ಅಭಿವ್ಯಕ್ತಿಯಲ್ಲಿ ತೋರಿಬರುವ ಕ್ರಮವೇ ವರ್ಣಕ್ರಮವು ಈ ಕ್ರಮದಲ್ಲಿ ಕಂಡುಬರುವ ಆನುಪೂರ್ವಿಯು ಪುರುಷಕೃತ ವಾದುದಲ್ಲ ಗುರೂಚ್ಚಾರಣ ಅನೂಚ್ಚಾರಣರೂಪವಾಗಿ ನಿರಂತರವಾಗಿ ನಡೆದುಕೊಂಡು ಬಂದ ಅಭಿವ್ಯಕ್ತಿಕ್ರಮರೂಪವಾದುದು ಇಂಥ ಕ್ರಮದಿಂದ ಅಪೌರುಷೇಯತ್ವಕ್ಕೆ ಯಾವ ಬಾಧಕವೂ ಇಲ್ಲ.

ಈ ಕ್ರಮದ ವಿಷಯದಲ್ಲಿ 'ತತ್ತ್ವಸಂಖ್ಯಾನ ಟೀಕಾ' ಮತ್ತು 'ವಿಷ್ಣುತತ್ತ್ವ ನಿರ್ಣಯ ಟೀಕಾ'ಗಳಲ್ಲಿ ಆಪಾತತಃ ಭಿನ್ನವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದಂತೆ ಕಾಣುತ್ತದೆ. 'ತತ್ತ್ವಸಂಖ್ಯಾನ ಟೀಕಾ'ದಲ್ಲಿ 'ನಿತ್ಯತ್ವಂ ನಾಮ ಕೂಟಸ್ಥತಯಾ ಆದ್ಯಂತಶೂನ್ಯತ್ವಮ್' ಎಂದು ಹೇಳಿದೆ ಆದರೆ 'ವಿಷ್ಣುತತ್ತ್ವನಿರ್ಣಯ ಟೀಕಾ'ದಲ್ಲಿ 'ನ ಹಿ ವಯಂ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ' ಎಂದು ಹೇಳಿದೆ ಇವುಗಳ ಸಮನ್ವಯವನ್ನು ಟಿಪ್ಪಣಿಕಾರರು ಎರಡು—ಮೂರು ರೀತಿಗಳಲ್ಲಿ ಮಾಡಿದ್ದಾರೆ: (೧) ಈಶ್ವರ ಬುದ್ಧಿಸ್ಥವಾದ ಕ್ರಮದ ದೃಷ್ಟಿಯಿಂದ ಕೂಟಸ್ಥ ನಿತ್ಯತ್ವವನ್ನು ಹೇಳಿದ್ದಾರೆ ಸಾಮಾನ್ಯವೇದಪಾಠಕರ ಬುದ್ಧಿಸ್ಥವಾದ ಅವರ ಉಚ್ಚಾರಣಾಧೀನವಾದ ಕ್ರಮದ ದೃಷ್ಟಿ ಯಿಂದ ಕ್ರಮದ ಕೃತಕತ್ವವನ್ನು ಹೇಳಿದ್ದಾರೆ (ಪಾಂ. ಟಿ ). (೨) ತತ್ತ್ವಸಂಖ್ಯಾನ ಟೀಕಾ ದಲ್ಲಿ ವರ್ಣಾಂಶದ ಕೂಟಸ್ಥತ್ವವನ್ನು ಹೇಳಿದ್ದಾರೆ. ಅಥವಾ ಕ್ರಮವು ಸರ್ವದಾ ಈಶ್ವರ-ಬುದ್ಧಿಸ್ಥವಾಗಿದೆ ಎಂಬ ಅಭಿಪ್ರಾಯದಿಂದ ಕೂಟಸ್ಥತ್ವವನ್ನು ಹೇಳಿದ್ದಾರೆ. ಆದರೆ ವರ್ಣಗಳ ವ್ಯಕ್ತಿಕ್ರಮರೂಪವಾದ ಕ್ರಮವು ಜನ್ಯವೆಂಬುದು ವಿಷ್ಣುತತ್ತ್ವನಿರ್ಣಯ ಟೀಕಾಭಿಪ್ರಾಯ ವಾಗಿದೆ (ವ್ಯಾ ಟಿ ) ಆದ್ದರಿಂದ ಟೀಕಾವಾಕ್ಯಗಳಿಗೆ ಪರಸ್ಪರ ವಿರೋಧವಿಲ್ಲ.

ವೇದಗಳಿಗೆ 'ಶ್ರುತಿ' ಎಂಬ ಹೆಸರಿರುವದೂ ಅವುಗಳ ಅಪೌರುಷೇಯತ್ವವನ್ನು ವ್ಯಕ್ತಪಡಿಸುತ್ತದೆ. ಎಲ್ಲರೂ ಅವುಗಳನ್ನು ಅಧ್ಯಯನ ಪರಂಪರೆಯಿಂದ ಶ್ರವಣಮಾಡಿರುವರೇ ಹೊರತು ಯಾರೂ ಅವುಗಳ ರಚನೆಯನ್ನು ಮಾಡಿ ಇದಂಪ್ರಾಥಮ್ಯೇನ ಉಚ್ಚಾರಮಾಡಿಲ್ಲ. ದ್ರಷ್ಟಾರರಾದ ವಸಿಷ್ಠವಿಶ್ವಾಮಿತ್ರಾದಿಗಳಿಗೂ ಕೂಡ ಜನ್ಮಾಂತರದಲ್ಲಿ ಶ್ರವಣಮಾಡಿದ ಆಯಾ ಮಂತ್ರಗಳೇ ವಾಸುದೇವನ ಪ್ರಸಾದದಿಂದ ಪ್ರತಿಭಾತವಾಗಿವೆ. ಪರಮಾತ್ಮ ನೊಬ್ಬನೇ ಅವುಗಳನ್ನು ಕಂಡವನು. ಇತರರು ಉಪದೇಶಪರಂಪರೆಯಿಂದ ಶ್ರವಣಮಾಡಿ ದವರು. ಆದ್ದರಿಂದ ಪರಮಾತ್ಮನ ದೃಷ್ಟಿಯಿಂದ 'ದೃಷ್ಟಿ' ಇತರರ ದೃಷ್ಟಿಯಿಂದ 'ಶ್ರುತಿ'

ಎಂಬ ಹೆಸರು ಇವುಗಳಿಗೆ ಬಂದಿದೆ ಕಾರಕ, ಕಾಲಾಪಕ ಎಂಬ ನಾಮಕರಣಗಳೂ ಪರಮಾತ್ಮನ ಅನುಗ್ರಹದಿಂದ ಜನ್ಮಾಂತರದಲ್ಲಿ ಶ್ರುತವಾದದ್ದರ ಪ್ರತಿಭಾನವನ್ನು ಪಡೆದಿದ್ದರಿಂದಲೇ ಬಂದಿವೆ

ಇನ್ನು 'ಋಚಃ ಸಾಮಾನಿ ಜಜ್ಞಿರೇ' ಇತ್ಯಾದಿ ವೇದಗಳಿಗೆ ಉತ್ಪತ್ತಿಯನ್ನು ಹೇಳುವ ವಚನಗಳು ಸೃಷ್ಟಿಯ ಆರಂಭದಲ್ಲಿ ಆದ ವೇದಗಳ ಅಭಿವ್ಯಕ್ತಿಯನ್ನೇ ಸೂಚಿಸುವವೇ ಹೊರತು ಉತ್ಪತ್ತಿಯನ್ನು ಹೇಳುವದಿಲ್ಲ ಈ ವಚನಗಳು ವೇದಗಳ ಅವಾಂತರ ಅಭಿಮಾನಿದೇವತೆಗಳ ಶರೀರಜನ್ಮರೂಪವಾದ ಉತ್ಪತ್ತಿಯನ್ನು ಹೇಳುತ್ತವೆ ಎಂದೂ ಹೇಳಬಹುದು ವೇದಗಳಿಗೆ ಮುಖ್ಯಾಭಿಮಾನಿಯು ಲಕ್ಷ್ಮೀದೇವಿಯು ಅವಳಿಗೆ ಶರೀರಜನ್ಮವಿಲ್ಲ ಅವಾಂತರ ಅಂದರೆ ಅಮುಖ್ಯ ಅಭಿಮಾನಿದೇವತೆಗಳ ಶರೀರಜನ್ಮರೂಪ ಉತ್ಪತ್ತಿಯನ್ನು ಈ ವಚನಗಳು ಹೇಳುವವು ಚೇತನಗಳಿಗೆ ಜನ್ಮ ಅಂದರೆ ಶರೀರ ಸಂಬಂಧ ಬರುವದು. ಹರಿಶ್ಚಂದ್ರಾದಿಗಳು ಪ್ರವಾಹತಃ ಅನಾದಿನಿತ್ಯರಾದ್ದರಿಂದ ಅವರ ಉಲ್ಲೇಖದಿಂದ ವೇದಗಳ ನಿತ್ಯತ್ವಕ್ಕೆ ಬಾಧಕವಿಲ್ಲ

ಪುರಾಣಗಳು ಮಾತ್ರ ನಿತ್ಯಾನಿತ್ಯವಾದವು ಪ್ರತಿಸೃಷ್ಟಿಯಲ್ಲಿಯೂ ಅವುಗಳ ಪದಾದಿಕ್ರಮದಲ್ಲಿ ವ್ಯತ್ಯಾಸವಿರುವದು ಆದರೆ ಅರ್ಥ ಅಂದರೆ ಪ್ರತಿಪಾದ್ಯವಿಷಯವು ಮಾತ್ರ ಭಿನ್ನವಾಗಿರುವದಿಲ್ಲ ಈ ವ್ಯವಸ್ಥೆಯು ವೇದಾನುಸಾರಿಯಾದ ಪುರಾಣಗಳಿಗೆ ಮಾತ್ರ ಅನ್ವಯಿಸುವದು ಇತರ ಪುರಾಣಗಳಲ್ಲಿ ಅರ್ಥವ್ಯತ್ಯಾಸವೂ ಕಂಡುಬರುವದು. ಪುರಾಣಗಳಿಗೆ ಉತ್ಪತ್ತಿಯಿರುವದು ಆದರೆ ವಿನಾಶವಿರುವದಿಲ್ಲ ಆದ್ದರಿಂದಲೇ ಅವು ನಿತ್ಯಾನಿತ್ಯವಾಗಿವೆ ಅವು ಪೌರುಷೇಯವಾದ್ದರಿಂದ ಅನಿತ್ಯವಾಗಿವೆ ವಿನಾಶರಹಿತವಾದ್ದರಿಂದ ನಿತ್ಯವಾಗಿವೆ. ವೇದಗಳಂತೆ ಅವೂ ಪರಮಾತ್ಮನ ಬುದ್ಧಿಸ್ಥವಾಗಿರುತ್ತವೆ ಆದರೆ ಅಪೌರುಷೇಯವಲ್ಲ 'ಪುರಾಣಾನಿ ತದರ್ಥಾನಿ' ಅಂದರೆ ಪುರಾಣಗಳಿಗೆ ವೇದಾರ್ಥವೇ ವಿಷಯವು ಅದೇ ಪ್ರಯೋಜನವು (ಸಃ ವೇದಾರ್ಥಃ ಏವ ಅರ್ಥಃ ವಿಷಯಃ ಪ್ರಯೋಜನಂ ಚ ಯೇಷಾಂ ತಾನಿ).

**ವೇದ, ಶ್ರುತಿ, ಆಮ್ನಾಯ ಎಂಬ ಹೆಸರುಗಳ ವೈಶಿಷ್ಟ್ಯ.**

**14. ನ ಚ ಅನಿತ್ಯತ್ವೇ 'ಶ್ರುತಿಃ' 'ವೇದಃ' ಇತ್ಯಾದಿ ವಿಶೇಷಶಬ್ದಃ ಉಪಪದ್ಯತೇ ।**

**ವೇದಾಸ್ತೇ ನಿತ್ಯವಿನ್ನತ್ವಾತ್ ಶ್ರುತಯಶ್ಚಾಖಿಲೈಃ ಶ್ರುತೇಃ ।**
**ಆಮ್ನಾಯೋSನನ್ಯಥಾಪಾಠಾದೀಶಬುದ್ಧಿಸ್ಥಿತಾಃ ಸದಾ ॥**

ಇತಿ ಮಹಾವಾರಾಹೇ

**ನ ಚ ನಿತ್ಯತ್ವಂ ವಿನಾ ವೇದಾನಾಂ ದರ್ಶನವ್ಯವಹಾರೋ ಯುಜ್ಯತೇ ।**

**ಅನುವಾದ**—ವೇದಗಳು ಅನಿತ್ಯವಾಗಿದ್ದರೆ ಅವುಗಳನ್ನು ಕುರಿತು ಶ್ರುತಿ, ವೇದ, ಆಮ್ನಾಯ ಎಂಬ ಅಸಾಧಾರಣ ಶಬ್ದಗಳ ಬಳಕೆಯು ಯುಕ್ತವಾಗುತ್ತಿದ್ದಿಲ್ಲ. ವೇದಗಳಿಗೆ

ಅವು ನಿತ್ಯವಾಗಿರುವದರಿಂದ ' ವೇದ ' ಎಂಬ ಹೆಸರು ಬಂದಿದೆ, ಎಲ್ಲರಿಂದಲೂ ಶ್ರುತ ವಾಗುವದರಿಂದ ಶ್ರುತಿ ಎಂಬ ಹೆಸರು ಬಂದಿದೆ, ಒಂದೇ ರೀತಿಯಿಂದ ಪಠಿಸಲ್ಪಡುವದರಿಂದ 'ಆಮ್ನಾಯ'ವೆಂಬ ಹೆಸರು ಬಂದಿದೆ ಅವು ಸದಾಕಾಲದಲ್ಲಿಯೂ ಪರಮಾತ್ಮನ ಬುದ್ಧಿಸ್ಥ ವಾಗಿ ಇರುವವು (ಆದ್ದರಿಂದ ಪ್ರಲಯಕಾಲದಲ್ಲಿಯೂ ಅವಕ್ಕೆ ವಿಚ್ಛೇದವಿಲ್ಲ) ಎಂದು ಮಹಾವಾರಾಹದಲ್ಲಿ ಹೇಳಿದೆ

(ಪರಮಾತ್ಮನು ವೇದಗಳ ದರ್ಶನವನ್ನು ಮಾಡಿದನು ಎಂದು ಹೇಳಿರುವದರಿಂದ ಅವು ನಿತ್ಯವಾಗಿವೆ.) ವೇದಗಳು ನಿತ್ಯವಾಗಿರದಿದ್ದರೆ ಅವುಗಳ ದರ್ಶನವನ್ನು ಮಾಡಿದನು ಎಂದು ಹೇಳುವದು ಯುಕ್ತವಾಗುವದಿಲ್ಲ (ನಿತ್ಯಸಿದ್ಧವಾಗಿದ್ದರೇ ದರ್ಶನವು ಸಾಧ್ಯ ವಾಗುವದು)

**ವಿವರಣೆ**—ವೇದಶಬ್ದವು ಸತ್ತಾರ್ಥಕವಾದ ' ವಿದ್ ' ಧಾತುವಿನಿಂದ ಸಿದ್ಧವಾಗಿದೆ ಆದ್ದರಿಂದ ಇದಕ್ಕೆ ' ನಿತ್ಯಂ ವಿದ್ಯತೇ ' ಯಾವಾಗಲೂ ಇರುವದು, ನಿತ್ಯವಾದದ್ದು ಎಂದು ಅರ್ಥವಾಗುತ್ತದೆ. ' ಆಮ್ನಾಯ' ಶಬ್ದವು ' ಮ್ನಾ ಅಭ್ಯಾಸೇ ' ಎಂಬ ಧಾತುವಿನಿಂದ ಸಿದ್ಧವಾಗಿದೆ. ಅಭ್ಯಾಸವೆಂದರೆ ಒಂದೇ ರೀತಿಯಿಂದ ಮತ್ತೆ ಮತ್ತೆ ಹೇಳುವದು. ವೇದಗಳು ಏಕಪ್ರಕಾರವಾಗಿ ಪಠಿಸಲ್ಪಡುವದರಿಂದ 'ಆಮ್ನಾಯ' ಎಂಬ ಹೆಸರು ಬಂದಿದೆ. 'ಸ ಇಮಂ ಮಂತ್ರಮಪಶ್ಯತ್' ಇತ್ಯಾದಿ ಶ್ರುತಿಗಳಲ್ಲಿ ವೇದಗಳ ದರ್ಶನಮಾಡಿದ್ದನ್ನು ಹೇಳಲಾಗಿದೆ

**ವರ್ಣ ಪದಾದಿಗಳು ನಿತ್ಯ.**

**15. ನ ಚ ವರ್ಣಪದಾದೀನಾಮನಿತ್ಯತ್ವಂ ವಕ್ತುಂ ಯುಕ್ತಮ್ । ಸರ್ವಜ್ಞತ್ವಾದೀಶ್ವರಸ್ಯ ತದ್ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್ । ನ ಚ ಘಟಾದಿವತ್ ಸಂಸ್ಕಾರಮಾತ್ರತ್ವಂ ವಕ್ತುಂ ಯುಕ್ತಮ್ । ಪ್ರತ್ಯಭಿಜ್ಞಾವಿರೋಧಸ್ಯ ಉಕ್ತತ್ವಾತ್ ।**

**ಪುರಾಣಾನಾಮಪಿ ಅನ್ಯಥಾಶಬ್ದರಚನಮೇವ ಅನಿತ್ಯತ್ವಮ್ । ಅತಃ ಆಕಾಶಗುಣೇ ಶಬ್ದೇ ವ್ಯಜ್ಯಮಾನಾಃ ವರ್ಣಾದಯಃ ತತ್ಕ್ರಮಾತ್ಮಕೋ ವೇದಶ್ಚ ನಿತ್ಯ ಏವೇತಿ ಸಿದ್ಧಮ್ ॥**

**ಅನುವಾದ**—ವರ್ಣ, (ವೇದಗಳಲ್ಲಿಯ) ಪದ, ಮತ್ತು ವಾಕ್ಯಗಳು (ಪ್ರಲಯಕಾಲ ದಲ್ಲಿ ನಾಶವಾಗುವದರಿಂದ) ಅನಿತ್ಯ ಎಂದು ಹೇಳುವದು ಯುಕ್ತವಲ್ಲ ಯಾಕಂದರೆ ಅವು ಸರ್ವಜ್ಞನಾದ ಈಶ್ವರನ ಬುದ್ಧಿಯಲ್ಲಿ ಸದಾಕಾಲದಲ್ಲಿಯೂ ಪ್ರತೀತವಾಗಿರುವವು (ಪ್ರಲಯ ಕಾಲದಲ್ಲಿಯೂ ಇರುವವು). (ಹೀಗೆ ಈಶ್ವರನ ಬುದ್ಧಿಯಲ್ಲಿ ಇರುವದು) ಘಟಾದಿಗಳು ಸಂಸ್ಕಾರಮಾತ್ರದಿಂದ ಬುದ್ಧಿಯಲ್ಲಿ (ಮನಸ್ಸಿನಲ್ಲಿ) ಇರುವಂತೆ ಕೇವಲ ಸಂಸ್ಕಾರರೂಪದಿಂದ ಇರುವದು ಎಂಬ ವಾದವು ಯುಕ್ತವಲ್ಲ. ಯಾಕಂದರೆ ಹೀಗೆ ಸಂಸ್ಕಾರಮಾತ್ರದಿಂದ ಇರುವವೆಂದು ಹೇಳಿದರೆ (ಪೂರ್ವಕಲ್ಪದಲ್ಲಿ ಇದ್ದವೇ ಮತ್ತೆ ಉಚ್ಚರಿಸಲ್ಪಟ್ಟವು ಎಂಬುದರಿಂದ

ತಿಳಿದುಬರುವ) ಪ್ರತ್ಯಭಿಜ್ಞೆಗೆ ವಿರೋಧ ಬರುವದು (ಆದ್ದರಿಂದ ವೇದಗಳು ಈಶ್ವರನ ಬುದ್ಧಿಯಲ್ಲಿ ಸರ್ವದಾ ವರ್ತಮಾನರೂಪವಾಗಿಯೇ ಪ್ರತೀತವಾಗಿರುವವು. ಕೇವಲ ಸಂಸ್ಕಾರ ರೂಪದಿಂದ ಇರುವದಿಲ್ಲ).

ಪುರಾಣಗಳು ಮಾತ್ರ ಪದಕ್ರಮಾದಿ ವ್ಯತ್ಯಾಸರೂಪ ಅನಿತ್ಯತ್ವವುಳ್ಳವುಗಳಾಗಿವೆ

ಆದ್ದರಿಂದ (ಪ್ರತ್ಯಭಿಜ್ಞಾರೂಪಪ್ರಮಾಣದಿಂದ) ವರ್ಣಾದಿಗಳು ನಿತ್ಯವಾಗಿವೆ. ಅವುಗಳ ಕ್ರಮರೂಪವಾದ ವೇದಗಳು (ಅಪ್ರಮಿತಕರ್ತೃಕವಾದ್ದರಿಂದ) ನಿತ್ಯವಾಗಿವೆ ಎಂದು ಸಿದ್ಧವಾಗುತ್ತದೆ ಆಕಾಶಗುಣವಾದ ಧ್ವನಿರೂಪಶಬ್ದದಿಂದ ನಿತ್ಯವಾದ ವರ್ಣಗಳು ವ್ಯಕ್ತವಾಗುತ್ತವೆ

**ವಿವರಣೆ**—ವರ್ಣಗಳ ನಿತ್ಯತ್ವವು ಕೂಟಸ್ಥನಿತ್ಯತ್ವವು ಪದ, ವಾಕ್ಯಗಳ ನಿತ್ಯತ್ವವು ಕ್ರಮವ್ಯತ್ಯಾಸವಿಲ್ಲದ ಇರುವದು ಈಶ್ವರನ ಬುದ್ಧಿಯಲ್ಲಿ ಸರ್ವದಾ ಪ್ರತೀಯಮಾನತ್ವವೆಂದರೆ ಈಶ್ವರನು ಸರ್ವದಾ ವರ್ತಮಾನತಯಾ ಅವುಗಳ ಅನುಭವವುಳ್ಳವನಾಗಿರುವದು. ಕ್ರಮವಿಶಿಷ್ಟವರ್ಣಗಳೇ ವೇದವು ಕ್ರಮವು ಬುದ್ಧಿನಿಮಿತ್ತಕವಾದುದು ಕ್ರಮಕ್ಕೆ ಉಪಾಧಿಭೂತವಾದ ಈ ಬುದ್ಧಿಯ ಉಪರಮವೇ ಅದರ ವಿನಾಶವು ಆದರೆ ಈಶ್ವರನ ಈ ಬುದ್ಧಿಗೆ ಉಪರಮವೇ ಇಲ್ಲ ಆದ್ದರಿಂದ ವೇದಗಳು ಸರ್ವದಾ ಈಶ್ವರನಿಂದ ವರ್ತಮಾನತಯಾ ಅನುಭೂಯಮಾನವಾಗಿವೆ ಆದ್ದರಿಂದ ನಿತ್ಯವಾಗಿವೆ ಘಟಾದಿಗಳು ಅನಿತ್ಯಪದಾರ್ಥಗಳಾದ್ದರಿಂದ ನಷ್ಟವಾದಾಗ ವರ್ತಮಾನತಯಾ ಅನುಭೂಯಮಾನಗಳಾಗುವದಿಲ್ಲ

ಶ್ರೋತ್ರೇಂದ್ರಿಯವು ಭೂತಾಕಾಶರೂಪವಾದುದು ಧ್ವನಿಯು ಭೂತಾಕಾಶದ ಗುಣವು ಇದು ಸಾವಯವವಾಗಿದೆ ಈ ಧ್ವನಿಯಿಂದ ವ್ಯಕ್ತಗೊಳಿಸಲ್ಪಟ್ಟ ವರ್ಣವು ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪಡುತ್ತದೆ. ಧ್ವನಿಯು ಅನಿತ್ಯವು. ವರ್ಣವು ನಿತ್ಯವು. ವ್ಯಂಜಕಧ್ವನಿಯು ನಷ್ಟವಾದಾಗ ವ್ಯಂಗ್ಯವರ್ಣದ ಗ್ರಹಣವಾಗುವದಿಲ್ಲ. ಅದಮಾತ್ರಕ್ಕೆ ವರ್ಣವು ಅನಿತ್ಯವಲ್ಲ. 'ಅದೇ ಈ ಗಕಾರ' ಎಂಬ ಪ್ರತ್ಯಭಿಜ್ಞೆಯಿಂದ ವರ್ಣನಿತ್ಯತ್ವವು ಸಿದ್ಧವಾಗುವದು.

ವಿಶಿಷ್ಟವಾದ ಕ್ರಮವುಳ್ಳ ವರ್ಣಗಳೇ ವೇದಗಳು. ಕ್ರಮದ ವಿಶಿಷ್ಟತ್ವವೆಂದರೆ ಭೂತ–ವರ್ತಮಾನ–ಭವಿಷ್ಯತ್ತುಗಳಲ್ಲಿ ಎಲ್ಲ ಪಾಠಕರೂ ಏಕಪ್ರಕಾರವಾಗಿ ಹೇಳುವದು.

**ಕಾರ್ಯಾರ್ಥಾನ್ವಿತದಲ್ಲಿಯೇ ವ್ಯುತ್ಪತ್ತಿ ಎಂಬ ನಿಯಮವಿಲ್ಲ.**

**16. ನ ಚ ಕೇವಲಸಿದ್ಧೇ ಅರ್ಥೇ ವ್ಯುತ್ಪತ್ತ್ಯಭಾವಾತ್ ಅಪ್ರಾಮಾಣ್ಯಮ್ । ಸಿದ್ಧಾನ್ವಿತೇ ಏವ ವ್ಯುತ್ಪತ್ತಿಗೃಹೀತೇಃ । ಇಯಂ ಮಾತಾ ಅಯಂ ಪಿತಾ ಇತ್ಯಾದೌ ಅಂಗುಲಿಪ್ರಸಾರಣಾದಿಪೂರ್ವಕ ನಿರ್ದೇಶೇನೈವ ಹಿ ತದ್ ಜಾನಾತಿ ।**

**ಕಾರ್ಯಾನ್ವಿತೇ ಏವ ವ್ಯುತ್ಪತ್ತಿರಿತಿ ವದತಃ ಕಾರ್ಯಸ್ಯ ಕಾರ್ಯಾನ್ವಯಾಭಾವಾತ್ ಕಲ್ಪನಾಗೌರವಮ್ । ಇಯಂ ಮಾತಾ ಅಯಂ ಪಿತಾ ಸುರೂಪೋಸಿ ಇತ್ಯಾದೌ ಸಿದ್ಧಮಾತ್ರಜ್ಞಾಪನೇನ ಪರ್ಯವಸಿತತ್ವಾತ್ ವಾಕ್ಯಸ್ಯ ।**

**ಅನುವಾದ**—(ಕಾರ್ಯದೊಡನೆ ಅನ್ವಯವಿಲ್ಲದ) ಕೇವಲ ಸಿದ್ಧವಸ್ತುರೂಪವಾದ ಅರ್ಥದಲ್ಲಿ ವಾಚ್ಯವಾಚಕಸಂಬಂಧಜ್ಞಾನರೂಪವಾದ ವ್ಯುತ್ಪತ್ತಿಯು ಇಲ್ಲದೇ ಇರುವದರಿಂದ (ಇಂಥ ಸಿದ್ಧವಸ್ತುವಾದ ವಿಷ್ಣುವನ್ನು) ಆಗಮಗಳು ಪ್ರತಿಪಾದಿಸಲಾರವು (ಆದ್ದರಿಂದ ಸದಾಗಮೈಕವಿಜ್ಞೇಯಮ್ ಎಂದು ಹೇಳಿದ್ದು ಸರಿಯಲ್ಲ) ಎಂಬ ಆಕ್ಷೇಪವು ಯುಕ್ತವಲ್ಲ. ಯಾಕಂದರೆ (ಕಾರ್ಯದೊಡನೆಯೇ ಅನ್ವಯವಿರಬೇಕೆಂಬ ನಿರ್ಬಂಧವಿಲ್ಲದೆ) ಯೋಗ್ಯೇತರದೊಡನೆ ಅನ್ವಿತವಾದ ಸಿದ್ಧವಸ್ತುವಿನಲ್ಲಿಯೂ ವ್ಯುತ್ಪತ್ತಿಯುಂಟಾಗುವದು ಕಂಡುಬಂದಿದೆ. 'ಇವಳು ತಾಯಿ' 'ಇವನು ತಂದೆ' ಎಂದು ಬೆರಳುಮಾಡಿ ತೋರಿಸುವದರಿಂದಲೇ (ಕಾರ್ಯಾನ್ವಯವಿಲ್ಲದೆಯೇ 'ತಾಯಿ' 'ತಂದೆ' ಎಂಬ ಆಯಾ ಅರ್ಥಗಳನ್ನು) ಬಾಲಕನು ತಿಳಿದುಕೊಳ್ಳುತ್ತಾನೆ (ಆದ್ದರಿಂದ ಪದಪದಾರ್ಥಸಂಬಂಧಜ್ಞಾನರೂಪ ವ್ಯುತ್ಪತ್ತಿಯಾಗಲು ಕಾರ್ಯಾನ್ವಯವಿರಲೇಬೇಕೆಂಬ ನಿಯಮವಿಲ್ಲ) ಕಾರ್ಯಾನ್ವಯವಿದ್ದಾಗಲೇ ಇಂಥ ವ್ಯುತ್ಪತ್ತಿಯಾಗುವದು ಎಂದು ಹೇಳುವವರ ಪ್ರಕಾರವಾಗಿಯೂ ಲಿಙಾದಿಗಳ ಅರ್ಥವಾದ ಕಾರ್ಯವು ಇನ್ನೊಂದು ಕಾರ್ಯದೊಡನೆ ಅನ್ವಿತವಾಗಿರುವದಿಲ್ಲ. ಆದ್ದರಿಂದ ಅದಕ್ಕೆ ಸ್ವಪ್ರಧಾನವಾಗಿಯೇ (ಇನ್ನೊಂದು ಕಾರ್ಯದ ಅನ್ವಯವಿಲ್ಲದೆಯೇ) ವ್ಯುತ್ಪತ್ತಿಯನ್ನು ಹೇಳಬೇಕು ಹೀಗೆ ಲಿಙಾದಿಗಳಿಗೆ ಅವುಗಳ ಅರ್ಥವಾದ ಕಾರ್ಯಮಾತ್ರದಲ್ಲಿ ವ್ಯುತ್ಪತ್ತಿಯನ್ನು ಹೇಳುವದೂ ಇತರ ಪದಗಳಿಗೆ ಕಾರ್ಯಾನ್ವಿತದಲ್ಲಿ ವ್ಯುತ್ಪತ್ತಿಯನ್ನು ಹೇಳುವದೂ ಗೌರವವಾಗುವದು (ಇವೆರಡಕ್ಕೂ ಅನ್ವಯಿಸುವಂತೆ ಯೋಗ್ಯೇತರಾನ್ವಿತದಲ್ಲಿ ವ್ಯುತ್ಪತ್ತಿಯೆಂದು ನಾವು ಹೇಳುವದು ಲಾಘವವಾಗುವದು)

(ಇನ್ನು ಕಾರ್ಯದ ಬೋಧವಾಗದಿದ್ದರೆ ವಾಕ್ಯದಲ್ಲಿಯ ಆಕಾಂಕ್ಷೆಯು ಪೂರ್ಣವಾಗದೇ ಇರುವದರಿಂದ ಶಾಬ್ದಬೋಧವೇ ಆಗಲಾರದು 'ಗೌಃ ಅಶ್ವಃ ಪುರುಷಃ ಹಸ್ತೀ' ಎಂಬ ಪರಸ್ಪರ ಸಂಬಂಧವಿಲ್ಲದ ಪದಗಳಂತೆ ಶಾಬ್ದಬೋಧದ ಪರ್ಯವಸಾನವಾಗದೇ ಉಳಿಯುವದು ಎಂಬ ಆಕ್ಷೇಪವೂ ಸರಿಯಲ್ಲ ಯಾಕಂದರೆ) 'ಇವಳು ತಾಯಿ' 'ಇವನು ತಂದೆ' 'ನೀನು ಸುರೂಪಿಯಾಗಿರುವಿ' ಇತ್ಯಾದಿ ಸಿದ್ಧಮಾತ್ರವಾದ ಅರ್ಥಗಳನ್ನು ತಿಳಿಸುವ ಅಂದರೆ ಕಾರ್ಯಾನ್ವಯವಿಲ್ಲದೇ ಇರುವ ಅರ್ಥಗಳನ್ನು ತಿಳಿಸುವ ವಾಕ್ಯಗಳಿಂದಾಗುವ ಬೋಧವೂ ಪರ್ಯವಸಿತವಾಗಿರುವದು ಕಂಡುಬರುತ್ತದೆ.

**ವಿವರಣೆ**—ಶಬ್ದಗಳಿಂದ ಅರ್ಥಬೋಧವಾಗಬೇಕಾದರೆ ಪದಗಳು ಮತ್ತು ಪದಾರ್ಥಗಳು ಇವುಗಳಿಗಿರುವ ವಾಚ್ಯವಾಚಕಸಂಬಂಧದ ಜ್ಞಾನವಾಗಬೇಕು. ಇದೇ ವ್ಯುತ್ಪತ್ತಿಯು. ಈ ವ್ಯುತ್ಪತ್ತಿಯು ಹಿರಿಯರು ಮಾಡುವ ಶಬ್ದಪ್ರಯೋಗಗಳು ಮತ್ತು ಅದಕ್ಕನುಗುಣವಾದ ವ್ಯವಹಾರದಿಂದ ಬಾಲಕರಿಗೆ ಉಂಟಾಗುವದು. ಉದಾಹರಣೆಗೆ ಓರ್ವ ಹಿರಿಯನು 'ಗಾಮ್ ಆನಯ' ಎಂದು ಹೇಳಿದಾಗ ಇನ್ನೋರ್ವ ಹಿರಿಯನು ಆಕಳನ್ನು ತರುವನು.

'ಗಾವಮ್ ನಯ' ಎಂದಾಗ ಆಕಳನ್ನು ಒಯ್ಯುವನು. ಇವೆರಡನ್ನೂ ನೋಡುತ್ತಿದ್ದ ಬಾಲಕನು 'ಗೋ' ಶಬ್ದಕ್ಕೆ 'ಆಕಳು' ಎಂದು ಅರ್ಥ—ಎಂದು ಗೋಶಬ್ದ ಮತ್ತು ಗೋವ್ಯಕ್ತಿ ಇವುಗಳಿಗಿರುವ ವಾಚ್ಯವಾಚಕಸಂಬಂಧವನ್ನು ತಿಳಿದುಕೊಳ್ಳುವನು ಹೀಗೆ ತಿಳಿದುಕೊಳ್ಳುವದೇ ವ್ಯುತ್ಪತ್ತಿಯು. ಇದನ್ನು ತಿಳಿಸಿಕೊಡುವ ಹಿರಿಯರ ಶಬ್ದಪ್ರಯೋಗ ಮತ್ತು ಅದಕ್ಕನುಗುಣವಾದ ವ್ಯವಹಾರವೇ ವೃದ್ಧವ್ಯವಹಾರವು ಹೀಗೆ ವೃದ್ಧವ್ಯವಹಾರ ದಿಂದ ವ್ಯುತ್ಪತ್ತಿ ಬರುವದು ಇದರಲ್ಲಿ ಗಮನಿಸಬೇಕಾದ ಅಂಶವೆಂದರೆ 'ಗಾವಮ್ ಆನಯ' 'ಗಾವಮ್ ನಯ' ಎಂದು 'ಆನಯನ' ಅಥವಾ 'ನಯನ' ಕ್ರಿಯೆಯೊಡನೆ ಅನ್ವಿತ ವಾಗಿಯೇ ಇಲ್ಲಿ ವ್ಯುತ್ಪತ್ತಿಯುಂಟಾಗುವದು. ಇದರಿಂದ ಕಾರ್ಯಾನ್ವಿತವಾದದ್ದರಲ್ಲಿಯೇ ವ್ಯುತ್ಪತ್ತಿಯುಂಟಾಗುವದು ಎಂದು ತಿಳಿದುಬರುವದು ಕೇವಲ ಸಿದ್ಧವಸ್ತುವಿನಲ್ಲಿ ವ್ಯುತ್ಪತ್ತಿಯಿಲ್ಲ ಎಂದು ತಿಳಿದುಬರುವದು ಆದ್ದರಿಂದ ಕೇವಲ ಸಿದ್ಧವಸ್ತುವಾದ ವಿಷ್ಣು ವನ್ನು ಶಬ್ದವು ಬೋಧಿಸಲಾರದು ಆದ್ದರಿಂದ ಶಬ್ದರೂಪವಾದ ಆಗಮವು ಪ್ರಾಧಾನ್ಯೇನ ವಿಷ್ಣುಪ್ರತಿಪಾದಕವಲ್ಲ ಎಂಬುದು ಇಲ್ಲಿ ಶಂಕಾಕಾರರ ಅಭಿಪ್ರಾಯವು.

ಕಾರ್ಯಾನ್ವಿತವಾದದ್ದರಲ್ಲಿಯೇ ವ್ಯುತ್ಪತ್ತಿಯು ಎಂಬುದು ಪ್ರಾಭಾಕರರ ಪಕ್ಷವು. ಈ ಪಕ್ಷವನ್ನವಲಂಬಿಸಿ ಇಲ್ಲಿ ಶಂಕಾಮಾಡಿರುವರು ಆದರೆ ಈ ಪಕ್ಷವೇ ಸರಿಯಲ್ಲ ಎಂದು ಸಮಾಧಾನದಲ್ಲಿ ತೋರಿಸುವರು ಶಬ್ದಗಳು ಅನ್ವಿತವಾದದ್ದನ್ನೇ ಬೋಧಿಸುವವು ಎಂಬು ದನ್ನು ಸಿದ್ಧಾಂತದಲ್ಲಿಯೂ ಒಪ್ಪುವರು ಆದರೆ ಈ ಅನ್ವಯವು ಕಾರ್ಯಾನ್ವಯವೇ ಇರಬೇಕೆಂಬ ನಿಯಮವಿಲ್ಲ ಸಿದ್ಧಾನ್ವಯವೂ ಇರಬಹುದು ಕಾರ್ಯಾನ್ವಯವೂ ಇರಬಹುದು. ಕಾರ್ಯಾನ್ವಯವೆಂದರೆ ಕಾರ್ಯವು ಪ್ರಧಾನವಾಗಿ ಸಿದ್ಧಪದಾರ್ಥಗಳು ಅದಕ್ಕೆ ಗೌಣವಾಗಿ ಅನ್ವಯವಾಗಿ ತೋರುವದು. ಸಿದ್ಧಾನ್ವಯವೆಂದರೆ ಸಿದ್ಧಪದಾರ್ಥ ಗಳೇ ಪ್ರಧಾನವಾಗಿ ತೋರಿ ಅನ್ವಯವಾಗುವದು. ಕಾರ್ಯಾನ್ವಯವನ್ನೇ ಎಲ್ಲ ಕಡೆಗೂ ಒಪ್ಪಿಕೊಂಡರೆ ಆಗಮಗಳು ಸಿದ್ಧವಸ್ತುವಾದ ವಿಷ್ಣುವನ್ನು ಬೋಧಿಸುವದೇ ಇಲ್ಲ ಅಥವಾ ಬೋಧಿಸಿದರೂ ಯಾವದಾದರೂ ಕಾರ್ಯಕ್ಕೆ ಅನ್ವಿತವಾದಂತೆ ಗೌಣವನ್ನಾಗಿ ಮಾಡಿ ಬೋಧಿಸುವವು ಎಂದಾಗುವದು ಇದು ಒಪ್ಪತಕ್ಕ ವಿಷಯವಲ್ಲ ಆಗಮಗಳು ಪ್ರಧಾನ ವಾಗಿಯೇ ವಿಷ್ಣುವನ್ನು ಬೋಧಿಸುವವು ಎಂಬುದೇ ಸಿದ್ಧಾಂತವು. ಆದ್ದರಿಂದ ಸಿದ್ಧಾಂತ ದಲ್ಲಿ ಯೋಗ್ಯೇತರಾನ್ವಯವನ್ನು ತೋರಿಸಿ ಸಿದ್ಧಾನ್ವಯವನ್ನು ಸಮರ್ಥಿಸಿರುವರು (ಕಾರ್ಯಾನ್ವಯವೂ ಸಿದ್ಧಾನ್ವಯದಲ್ಲಿಯೇ ಪರ್ಯವಸಾನವಾಗುವದು ಎಂದು ಮುಂದೆ ತೋರಿಸಿರುವರು).

ಕಾರ್ಯಾನ್ವಯವೇ ಎಲ್ಲ ಕಡೆಗೂ ಇರುವದು ಎಂದು ವಾದಿಸುವ ಪ್ರಾಭಾಕರರು ಕೊಡುವ ಮುಖ್ಯಯುಕ್ತಿಯು ವೃದ್ಧವ್ಯವಹಾರದಿಂದಲೇ ವ್ಯುತ್ಪತ್ತಿ ಬರುವದು ಮತ್ತು ಅದು ಕಾರ್ಯಾನ್ವಿತವಾಗಿಯೇ ಬರುವದು ಎಂಬುದು. ಈ ವಾದವೇ ಸರಿಯಲ್ಲ. 'ಇವಳು ತಾಯಿ' 'ಇವನು ತಂದೆ' ಇತ್ಯಾದಿಯಾಗಿ ಬೆರಳಿನಿಂದ ಆಯಾ ವ್ಯಕ್ತಿ ಅಥವಾ ವಸ್ತುಗಳನ್ನು ತೋರಿಸಿ ಕಾರ್ಯಾನ್ವಯವಿಲ್ಲದೆ ಪದ-ಪದಾರ್ಥಗಳ ವಾಚ್ಯ-ವಾಚಕ

ಸಂಬಂಧಜ್ಞಾನ ಮಾಡಿಕೊಡುವದು ಕಂಡುಬರುತ್ತದೆ ಆದ್ದರಿಂದ ಸಿದ್ಧದಲ್ಲಿ ವ್ಯುತ್ಪತ್ತಿಯಿಲ್ಲವೆಂದು ಹೇಳಲು ಬರುವದಿಲ್ಲ ಅಲ್ಲದೆ ಲಿಙ್ ಪ್ರತ್ಯಯದ ಅರ್ಥವು ಕಾರ್ಯ ಅದು ಇನ್ನೊಂದು ಕಾರ್ಯದೊಡನೆ ಅನ್ವಿತವಾಗಿ ಬೋಧಿತವಾಗುವದಿಲ್ಲ ಆದ್ದರಿಂದ ಅದು ಕಾರ್ಯಮಾತ್ರವನ್ನು ಬೋಧಿಸುವದು ಅಥವಾ ಸಿದ್ಧಾನ್ವಿತವಾದದ್ದನ್ನು ಬೋಧಿಸುವದು ಎಂದು ಹೇಳಬೇಕು 'ಗೋ' ಇತ್ಯಾದಿ ಪದಗಳು ಕಾರ್ಯಾನ್ವಿತವಾಗಿಯೂ ಲಿಙಾದಿಗಳು ಕಾರ್ಯಮಾತ್ರವನ್ನೂ ಅಥವಾ ಸಿದ್ಧಾನ್ವಿತವಾದದ್ದನ್ನೂ ಬೋಧಿಸುವವು ಎಂದು ಹೇಳುವದು ಎರಡು ವಿಧವಾಗಿ ವ್ಯುತ್ಪತ್ತಿಪ್ರಯೋಜಕವನ್ನು ಹೇಳಲ್ಪಟ್ಟಂತಾಗುವದರಿಂದ ಗೌರವವಾಗುವದು ಆದ್ದರಿಂದ ಸಿದ್ಧದಲ್ಲಿ ವ್ಯುತ್ಪತ್ತಿಯನ್ನು ಒಪ್ಪಿ ಸಿದ್ಧ ಮತ್ತು ಕಾರ್ಯ ಉಭಯಸಂಗತವಾಗುವಂತೆ ಯೋಗ್ಯೇತರಾನ್ವಯವನ್ನು ಹೇಳುವದೇ ಯುಕ್ತವು ಹೀಗೆ ಕಾರ್ಯಾನ್ವಿತದಲ್ಲಿ ಮಾತ್ರ ವ್ಯುತ್ಪತ್ತಿ ಎಂಬುದನ್ನು ನಿರಾಕರಿಸಿದ ಮೇಲೆ ಸಿದ್ಧವಸ್ತುವಾದ ವಿಷ್ಣುವನ್ನು ಆಗಮಗಳು ಪ್ರಧಾನವಾಗಿ ಬೋಧಿಸಲು ಯಾವ ಆತಂಕವೂ ಇಲ್ಲ

ವಾಕ್ಯಗಳು ಕೇವಲ ಸಿದ್ಧಪದಾರ್ಥವನ್ನು ಬೋಧಿಸಿದರೆ ಆ ಸಿದ್ಧಪದಾರ್ಥದಿಂದ ಮುಂದೇನು ಮಾಡಬೇಕು ಎಂಬುದು ತಿಳಿಯದೇ ಇರುವದರಿಂದ ಆಕಾಂಕ್ಷೆಯು ಪೂರ್ಣವಾಗದೇ ಉಳಿಯುವದು ಹೀಗಾಗಿ ಆ ವಾಕ್ಯಗಳು ಶಾಬ್ದಬೋಧವನ್ನುಂಟುಮಾಡಲಾರವು ಎಂಬ ಆಕ್ಷೇಪವೂ ಸರಿಯಲ್ಲ 'ನೀನು ಸುರೂಪಿಯಾಗಿರುವಿ' ಎಂಬ ವಾಕ್ಯದಿಂದ ಯಾವ ಕಾರ್ಯವೂ ಬೋಧಿತವಾಗದಿದ್ದರೂ ತಾನು ಸುರೂಪಿ ಎಂದು ತಿಳಿದುಕೊಳ್ಳುವದು ಇಷ್ಟವಾದ್ದರಿಂದ ಶಾಬ್ದಬೋಧವು ಆಗಿಯೇ ಆಗುವದು ಆದ್ದರಿಂದ ಇಷ್ಟಸಾಧನತಾಜ್ಞಾಪನವಿದ್ದರೆ ಸಾಕು ಕಾರ್ಯತಾಬೋಧನೆಯ ಅಗತ್ಯವಿಲ್ಲ ಪ್ರತಿಯೊಂದು ವಾಕ್ಯಶ್ರವಣದಿಂದಲೂ ಕಾರ್ಯತಾಬೋಧನವಾಗಿ ಪ್ರವೃತ್ತಿಯಾಗಬೇಕೆಂಬ ನಿಯಮವಿಲ್ಲ ಇಷ್ಟ-ಸಾಧನತಾಬೋಧನವಾದರೆ ಸಾಕು ಆದ್ದರಿಂದ ಸಿದ್ಧ ವ್ಯುತ್ಪತ್ತಿಯನ್ನು ಹೇಳಲು ಯಾವ ಬಾಧಕವೂ ಇಲ್ಲ (ಇಷ್ಟಸಾಧನತಾತಿರಿಕ್ತವಾದ ಕಾರ್ಯತಾ ಎಂಬುದೇ ಇಲ್ಲವೆಂದು ಮುಂದೆ ಹೇಳುವರು).

ಹೀಗೆ ಸಿದ್ಧದಲ್ಲಿ ವ್ಯುತ್ಪತ್ತಿಯನ್ನು ಸಮರ್ಥಿಸುವದರ ಪ್ರಯೋಜನವೆಂದರೆ ವೇದಗಳು ಪರಮಾತ್ಮನನ್ನು ಪ್ರಧಾನವಾಗಿಯೇ ಬೋಧಿಸುವವು ಎಂಬುದನ್ನು ಸಮರ್ಥಿಸುವದು. 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿಗಳು ಪರಮಾತ್ಮನನ್ನು ಪ್ರಧಾನವಾಗಿಯೇ ಬೋಧಿಸುವವು ಇಲ್ಲಿ ಯಾವದೇ ಕಾರ್ಯದ ಬೋಧನವಿಲ್ಲ ಪರಮಾತ್ಮನು ಯಾವ ಕಾರ್ಯಕ್ಕೂ ಅನ್ವಿತನಾಗಿ ಅಪ್ರಧಾನನಾಗಿ ಬೋಧಿತನಾಗಿಲ್ಲ. ಹೀಗೆ ಬೋಧಿಸಲ್ಪಟ್ಟ ಪರಮಾತ್ಮನ ಸಾಕ್ಷಾತ್ಕಾರವನ್ನು ಸಾಧಕನು ಅಪೇಕ್ಷಿಸುವನು ಇದಕ್ಕೆ ಸಹಾಯಕವಾಗಿ ಉಪಾಸನೆಗಳು ವೇದಗಳಲ್ಲಿ ಹೇಳಲ್ಪಟ್ಟಿವೆ. ಈ ಉಪಾಸನೆಗಳನ್ನು ಕೈಕೊಳ್ಳಲು ಅಂತಃಕರಣದ ಶುದ್ಧಿಯು ಬೇಕು. ಅದಕ್ಕಾಗಿ ಕರ್ಮಗಳು ಹೇಳಲ್ಪಟ್ಟಿವೆ ಹೀಗೆ ವೇದಗಳಿಂದ ಪರಮಾತ್ಮನ ಸ್ವರೂಪವೇ ಪ್ರಧಾನವಾಗಿ ಬೋಧಿಸಲ್ಪಟ್ಟು ಅದಕ್ಕೆ ಸಹಾಯಕವಾಗಿ ಉಪಾಸನೆಗಳು, ಕರ್ಮಗಳು ಬೋಧಿಸಲ್ಪಟ್ಟಿವೆ. ಆದ್ದರಿಂದ

'ಕಾರ್ಯಾನ್ವಿತವಲ್ಲಿಯೇ ಶಬ್ದಗಳ ವ್ಯುತ್ಪತ್ತಿಯಿರುವದರಿಂದ ಸಿದ್ಧಸ್ವರೂಪನಾದ ವಿಷ್ಣು ವನ್ನು ವೇದಗಳು ಹೇಗೆ ಬೋಧಿಸುವವು' ಎಂಬ ಶಂಕೆಗೆ ಅವಕಾಶವಿಲ್ಲ ಸಿದ್ಧದಲ್ಲಿ ವ್ಯುತ್ಪತ್ತಿಯನ್ನು ಹೇಳಲು ಯಾವ ಬಾಧಕವೂ ಇಲ್ಲ

**ಸಿದ್ಧರೂಪವಾದ ವಸ್ತುಗಳನ್ನು ಬೋಧಿಸುವದೇ ವಾಕ್ಯಗಳ ಪ್ರಯೋಜನವು.**

17 ತಸ್ಯ ತತ್ರ ಪ್ರಾಮಾಣ್ಯಾನುಭವಾಚ್ಚ । ನ ಚ ಕುತ್ರಚಿತ್ ಸಿದ್ಧಜ್ಞಾಪನಾದನ್ಯತ್ರ ವಾಕ್ಯಸ್ಯ ಪ್ರಯೋಜನಂ ದೃಷ್ಟಂ । ಜ್ಞಾತ್ವೈವ ಹಿ ಇಷ್ಟ-ಸಾಧನತಾಂ ಪ್ರವರ್ತತೇ ನಿವರ್ತತೇ ಚ ವಿಪರ್ಯಯೇಣ । ಅತಃ ಸಿದ್ಧೇ ಏವ ಸರ್ವವಾಕ್ಯಾನಾಂ ಪ್ರಾಮಾಣ್ಯಂ ಸಿದ್ಧಮ್ । ಪ್ರಸಿದ್ಧಂ ಚ ವ್ಯಾಕರಣನಿರುಕ್ತಾ-ದೀನಾಂ ಸಿದ್ಧಮಾತ್ರೇ ಪ್ರಾಮಾಣ್ಯಂ ಸರ್ವವಾದಿನಾಮ್ । ತದನಂಗೀಕಾರೇ ಚ ಸರ್ವಶಾಬ್ದವ್ಯವಹಾರಾಸಿದ್ಧಿಃ ।

ಉಕ್ತಂ ಚ ನಾರದೀಯೇ—

ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಮ್ ।
ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರ ಹಿ ॥
ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ ।
ಪ್ರಮಾಣಾನಾಂ ಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ॥ ಇತಿ ।

ಅನುವಾದ—(ವಾಕ್ಯಗಳು ಕೇವಲ ಸಿದ್ಧಪರವಾದರೆ ಅನುವಾದರೂಪವಾಗುವದರಿಂದ ಪ್ರಮಾಣವಾಗಲಾರವು ಎಂಬ ಆಕ್ಷೇಪವು ಸರಿಯಲ್ಲ. ಯಾಕಂದರೆ 'ಇಯಂ ಮಾತಾ' 'ಇವಳು ತಾಯಿ' ಇತ್ಯಾದಿ) ಸಿದ್ಧವಿಷಯಕ ವಾಕ್ಯಗಳು ಕೇವಲ ಸಿದ್ಧರೂಪವಾದ ಅರ್ಥದಲ್ಲಿ (ಕಾರ್ಯದ ಅನ್ವಯವಿಲ್ಲದ ಪದಾರ್ಥಗಳಲ್ಲಿ) ಪ್ರಮಾಣವಾಗಿರುವದು ಅನುಭವಸಿದ್ಧವಾಗಿದೆ ಸಿದ್ಧವಾದ ಅಂದರೆ ಯಥಾವಸ್ಥಿತವಾದ ಅರ್ಥವನ್ನು ಜ್ಞಾಪನ ಮಾಡುವದನ್ನು ಬಿಟ್ಟು ಬೇರೆ ಯಾವ ಪ್ರಯೋಜನವೂ ವಾಕ್ಯಕ್ಕೆ ಎಲ್ಲಿಯೂ ಕಂಡುಬರುವದಿಲ್ಲ (ವಸ್ತುಗಳು ಹೇಗೆ ಇರುವವೋ ಹಾಗೆ ಪರರಿಗೆ ಜ್ಞಾಪನಮಾಡಿಕೊಡುವದೇ ವಾಕ್ಯಗಳ ಪ್ರಯೋಜನವು. ಶ್ರೋತೃಗಳಿಗೆ ಪ್ರವೃತ್ತಿಯನ್ನುಂಟುಮಾಡುವದು ವಾಕ್ಯಗಳ ಪ್ರಯೋಜನವಲ್ಲ) (ಆಯಾ ವಸ್ತುಗಳು ಅಥವಾ ಕಾರ್ಯಗಳು) ಇಷ್ಟಸಾಧನವಾಗಿರುವದನ್ನೇ ತಿಳಿದು ಪುರುಷನು ಪ್ರವರ್ತಿಸುವನು. ಅನಿಷ್ಟಸಾಧನವಾಗಿದ್ದರೆ ನಿವರ್ತಿಸುವನು (ಆದ್ದರಿಂದ ಕಾರ್ಯತಾಜ್ಞಾನವು ಪ್ರವರ್ತಕವಲ್ಲ). ಆದ್ದರಿಂದ ಎಲ್ಲ ವಾಕ್ಯಗಳೂ ಸಿದ್ಧಬೋಧಕವಾಗಿಯೇ ಪ್ರಮಾಣವಾಗಿರುವವು ವ್ಯಾಕರಣನಿರುಕ್ತಾದಿಗಳು ಸಿದ್ಧರೂಪವಾದ ಶಬ್ದಸ್ವರೂಪದಲ್ಲಿ ಪ್ರಮಾಣವಾಗಿರುವದು ಎಲ್ಲ ವಾದಿಗಳಿಗೂ ಪ್ರಸಿದ್ಧವಾಗಿದೆ. ವ್ಯಾಕರಣಾದಿಗಳ ಪ್ರಾಮಾಣ್ಯವನ್ನು ಅಂಗೀಕರಿಸದಿದ್ದರೆ ಶಬ್ದವ್ಯವಹಾರವೇ ಇಲ್ಲದಂತಾಗುವದು.

ಎಲ್ಲ ವೇದಗಳೂ ಇತಿಹಾಸಪುರಾಣಗಳೂ ಸರ್ವಜ್ಞನೂ ಸರ್ವಕರ್ತನೂ ನಿರ್ದೋಷನೂ ಸರ್ವೋತ್ತಮನೂ ಆದ ನಾರಾಯಣನನ್ನು ಬೋಧಿಸುವವು ಇವೆಲ್ಲವುಗಳೂ ಮತ್ತು ಪಂಚರಾತ್ರಾದಿ ಎಲ್ಲ ಪ್ರಮಾಣಗ್ರಂಥಗಳೂ ವಿಷ್ಣುವಿನಲ್ಲಿಯೇ ಮಹಾತಾತ್ಪರ್ಯವುಳ್ಳವುಗಳಾಗಿವೆ. ಧರ್ಮಾದಿ ಇತರ ವಿಷಯಗಳು ಭಗವಂತನ ಜ್ಞಾನದ ಸಹಾಯಕ್ಕಾಗಿಯೇ ಹೇಳಲ್ಪಟ್ಟಿವೆ.

**ವಿವರಣೆ**—ಶಬ್ದಗಳು ಕೇವಲ ಸಿದ್ಧವಸ್ತುಗಳನ್ನು ಬೋಧಿಸುವದಾದರೆ ಈಗಾಗಲೇ ಇದ್ದ ವಸ್ತುಗಳನ್ನು ತಿಳಿಸುವದರಿಂದ ಹೊಸ ಜ್ಞಾನವು ಯಾವದೂ ಉಂಟಾಗುವದಿಲ್ಲ. ಆದ್ದರಿಂದ ಅವು ಕೇವಲ ಅನುವಾದರೂಪವಾಗುವವು. ಹೊಸ ಜ್ಞಾನವನ್ನು ಕೊಡದ ಕೇವಲ ಅನುವಾದವು ಪ್ರಮಾಣವಲ್ಲ ಎಂಬುದು ಶಂಕಾಕಾರನ ಅಭಿಪ್ರಾಯವು. ಕಾರ್ಯಾನ್ವಿತದಲ್ಲಿ ವ್ಯುತ್ಪತ್ತಿಯನ್ನು ಅಂಗೀಕರಿಸಿದರೆ ವಸ್ತುವು ಹೊಸದಲ್ಲದಿದ್ದರೂ ಅದರ ಕಾರ್ಯಾನ್ವಯವು ಹೊಸದು ಆದ್ದರಿಂದ ಅದು ಅನುವಾದವಾಗುವದಿಲ್ಲ ಆದ್ದರಿಂದ ಅದು ಪ್ರಮಾಣವಾಗುವದು ಎಂದೂ ಶಂಕಾಕಾರನ ಅಭಿಪ್ರಾಯವು ಆದರೆ ಇಲ್ಲಿ ಪ್ರಮಾಣವಾಗುವದೆಂದರೇನು ? ಎಂಬುದನ್ನು ಪರಿಶೀಲಿಸಬೇಕು ವಸ್ತುಗಳನ್ನು ಅವು ಇದ್ದಂತೆ ತಿಳಿಸುವದು ಪ್ರಮಾಣವು. ಅದು ಹೊಸದೋ ಅನುಭೂತವೋ ಎಂಬುದು ಮುಖ್ಯವಲ್ಲ ಪ್ರತ್ಯಕ್ಷಾದಿಗಳು ಹೇಗೆ ಸಿದ್ಧವಸ್ತುಗಳ ಜ್ಞಾನವನ್ನು ಮಾಡಿಕೊಡುವವೋ ಹಾಗೆ ವಾಕ್ಯಗಳೂ ಮಾಡಿಕೊಡುವವು ಎಂಬುದು ಅನುಭವಸಿದ್ಧವಾದುದು ಈ ಅನುಭವವು ವಸ್ತು ಹೇಗಿದೆಯೋ ಹಾಗಿದ್ದರೆ ಪ್ರಮಾಣವಾಗುವದು ವಸ್ತುವು ಹೊಸದೋ ಅನುಭೂತವೋ ಎಂಬುದು ಪ್ರಾಮಾಣ್ಯಕ್ಕೆ ಪ್ರಕೃತವಲ್ಲ

## ಪ್ರವೃತ್ತಿಯನ್ನು ಸಂಪಾದಿಸುವದು ವಾಕ್ಯದ ಪ್ರಯೋಜನವಲ್ಲ.

ವಾಕ್ಯಪ್ರಯೋಗವು ಪರರ ಪ್ರಯೋಜನಕ್ಕಾಗಿ ಇರುತ್ತವೆ ಕಾರ್ಯಪರವಾದ ವಾಕ್ಯಗಳೇ ಪರಪ್ರಯೋಜಕವಾದವುಗಳು. ಆದ್ದರಿಂದ ಸಿದ್ಧಪರವಾಕ್ಯಗಳು ಪ್ರಮಾಣವಲ್ಲ ಎಂದು ಹೇಳುವದೂ ಸರಿಯಲ್ಲ. ಪರರಿಗೆ ವಸ್ತುಗಳನ್ನು ತಿಳಿಸುವದೇ ವಾಕ್ಯಗಳ ಪ್ರಯೋಜನವು. ಅವರನ್ನು ಪ್ರವರ್ತಿಸುವದು ಅವುಗಳ ಪ್ರಯೋಜನವಲ್ಲ. ಸಿದ್ಧಪರ ವಾಕ್ಯಗಳೂ ಈ ತಿಳಿಸುವ ಕಾರ್ಯವನ್ನು ಮಾಡುವವು ಆದ್ದರಿಂದ ಅವುಗಳ ಪ್ರಾಮಾಣ್ಯಕ್ಕೆ ಯಾವ ಬಾಧಕವೂ ಇಲ್ಲ ವಾಕ್ಯಪ್ರಯೋಗವು ಯಾವಾಗಲೂ ಪ್ರವೃತ್ತಿ ಅಥವಾ ನಿವೃತ್ತಿಯನ್ನು ಸಂಪಾದಿಸುವದಕ್ಕಾಗಿಯೇ ಇರಬೇಕು ಎಂಬ ನಿಯಮವಿಲ್ಲ. ಯಾವ ಪ್ರವೃತ್ತಿಯೂ ಇಲ್ಲದೆ ವಾಕ್ಯಾರ್ಥಜ್ಞಾನದಿಂದ ಸುಖಪ್ರಾಪ್ತಿ ದುಃಖಪರಿಹಾರಗಳನ್ನು ಒದಗಿಸುವ ವಾಕ್ಯಗಳೂ ಇವೆ. ಈ ಪ್ರವೃತ್ತಿ ನಿವೃತ್ತಿಗಳು ಇಷ್ಟಸಾಧನತಾಜ್ಞಾನ ಮತ್ತು ಅನಿಷ್ಟಸಾಧನತಾಜ್ಞಾನದಿಂದ ಆಗುತ್ತವೆ ಇಷ್ಟಸಾಧನತಾಜ್ಞಾನವೇ ಕಾರ್ಯತಾಜ್ಞಾನವು. ಅದಕ್ಕಿಂತ ಭಿನ್ನವಾದ ಕಾರ್ಯತಾಜ್ಞಾನವೆಂಬುದಿಲ್ಲ. ಆದ್ದರಿಂದ ಎಲ್ಲ ವಾಕ್ಯಗಳೂ (ಲಿಙಾದಿ ಯುಕ್ತವಾಕ್ಯಗಳೂ ಸಹ) ಸಿದ್ಧರೂಪವಾದುದನ್ನೇ ಬೋಧಿಸುವವು.

**ಕಾರ್ಯಾನ್ವಿತದಲ್ಲಿ ವ್ಯುತ್ಪತ್ತಿಯೋ ಅಥವಾ ಸಿದ್ಧಾನ್ವಿತದಲ್ಲಿ ವ್ಯುತ್ಪತ್ತಿಯೋ ಎಂಬ ಚರ್ಚೆಯು ಸಾರ, ಪ್ರಯೋಜನ.**

ಕಾರ್ಯಾನ್ವಿತ ವ್ಯುತ್ಪತ್ತಿಯನ್ನು ನಿರಾಕರಿಸಿ ಸಿದ್ಧಾನ್ವಿತ ಅಂದರೆ ಯೋಗ್ಯೇತರಾನ್ವಿತ ವ್ಯುತ್ಪತ್ತಿಯನ್ನು ಸಮರ್ಥಿಸುವ ಈ ಚರ್ಚೆಯಲ್ಲಿ ನಿಷ್ಪನ್ನವಾದ ಅಂಶಗಳು ಹೀಗಿವೆ

(೧) ಕಾರ್ಯಾನ್ವಿತವಾದದ್ದರಲ್ಲಿಯೇ ವ್ಯುತ್ಪತ್ತಿಯಿರುವದರಿಂದ ಅಂದರೆ ಶಬ್ದಗಳು ಕಾರ್ಯಾನ್ವಿತವಾದದ್ದನ್ನೇ ಬೋಧಿಸುವದರಿಂದ ವೇದಗಳು ಸಿದ್ಧರೂಪನಾದ ವಿಷ್ಣುವನ್ನು ಪ್ರತಿಪಾದಿಸಲಾರವು ಎಂಬ ಆಕ್ಷೇಪ ಸರಿಯಲ್ಲ ಯಾಕಂದರೆ ಶಬ್ದಗಳು ಸಿದ್ಧವಾದ ಅಂದರೆ ಕಾರ್ಯಾನ್ವಯವಿಲ್ಲದವುಗಳನ್ನೂ ಬೋಧಿಸುವವು (ಇಲ್ಲ ಸಿದ್ಧ ಅಂದರೆ ಯೋಗ್ಯೇತರಾನ್ವಿತ ಎಂದು ಅರ್ಥವು ವ್ಯುತ್ಪತ್ತಿಗೆ ಕಾರ್ಯಾನ್ವಯದ ನಿಯಮವಿಲ್ಲ ಎಂದು ಹೇಳುವದು ಮಾತ್ರ ಅಭಿಪ್ರಾಯವು ಅನ್ವಯವೇ ಇಲ್ಲ ಎಂದು ಹೇಳುವ ಅಭಿಪ್ರಾಯವಿಲ್ಲ)

(೨) ವೃದ್ಧವ್ಯವಹಾರದಿಂದಲೇ ವ್ಯುತ್ಪತ್ತಿಯುಂಟಾಗುವದೆಂಬ ನಿಯಮವಿಲ್ಲ, ಅಂಗುಲಿ ನಿರ್ದೇಶನಾದಿಗಳಿಂದಲೂ ವ್ಯುತ್ಪತ್ತಿಯುಂಟಾಗುವದು ಆದ್ದರಿಂದ ಕಾರ್ಯಾನ್ವಿತದಲ್ಲಿಯೇ ವ್ಯುತ್ಪತ್ತಿಯೆಂಬ ನಿಯಮವಿಲ್ಲ

(೩) ವಾಕ್ಯಗಳು ಸಿದ್ಧಾರ್ಥವನ್ನು ಬೋಧಿಸಿದರೆ ಅವು ಅಪ್ರಮಾಣವೆನಿಸುವದಿಲ್ಲ. ಯಥಾವಸ್ಥಿತವಾಗಿ ಬೋಧಿಸುವದೇ ಪ್ರಾಮಾಣ್ಯವು ಅದು ಸಿದ್ಧಪರವಾಕ್ಯಗಳಿಗೆ ಇರುವದು

(೪) ಪ್ರವೃತ್ತಿ ಅಥವಾ ನಿವೃತ್ತಿಯನ್ನು ಸಂಪಾದಿಸುವದು ವಾಕ್ಯಗಳ ಪ್ರಯೋಜನವಲ್ಲ ಇಷ್ಟಸಾಧನತಾಜ್ಞಾನವು ಪ್ರವೃತ್ತಿಯನ್ನು ಸಂಪಾದಿಸುವದು ಅನಿಷ್ಟಸಾಧನತಾ-ಜ್ಞಾನವು ನಿವೃತ್ತಿಯನ್ನು ಸಂಪಾದಿಸುವದು ಆದ್ದರಿಂದ ವಾಕ್ಯಗಳು ಕಾರ್ಯಪರವಾಗಿರಬೇಕಾಗಿಲ್ಲ. ಇಷ್ಟಸಾಧನತೆಗಿಂತ ಭಿನ್ನವಾದ ಕಾರ್ಯತಾ ಎಂಬುದೇ ಇಲ್ಲ.

(೫) ಲಿಙಾದಿ ವಾಕ್ಯಗಳೂ ಸೇರಿದಂತೆ ಎಲ್ಲ ವಾಕ್ಯಗಳೂ ಸಿದ್ಧಪರವಾಗಿಯೇ ಇರುವವು (ಯಾವ ವಾಕ್ಯವೂ ಕಾರ್ಯಾನ್ವಿತಪರವಾಗಿಲ್ಲ). ಕಾರ್ಯತೆಯು ಇಷ್ಟಸಾಧನತೆಯ ಒಂದು ವಿಶೇಷರೂಪವೇ ಆಗಿರುವದು ಇಷ್ಟಸಾಧನತೆಯು ಸಿದ್ಧರೂಪವೇ ಆಗಿರುವದು

ಆದ್ದರಿಂದ ವೇದಗಳು ಸಿದ್ಧರೂಪನಾದ ವಿಷ್ಣುವನ್ನು ಪ್ರತಿಪಾದಿಸುವವು.

**ಜೀವೇಶ್ವರ ಅಭೇದವು ಆಗಮಗಳ ತಾತ್ಪರ್ಯವಲ್ಲ.**

**18. ನ ಚ ಜೀವೇಶ್ವರಾಭೇದ ಏವ ತಾತ್ಪರ್ಯಮಾಗಮಸ್ಯ । ತತ್ರ ಪ್ರಮಾಣಾಭಾವಾತ್ । ನ ಚ ಜೀವೇಶ್ವರಭೇದಃ ಸಿದ್ಧ ಇತಿ ಅನುವಾದಕತ್ವಂ ಭೇದವಾಕ್ಯಾನಾಮ್ । ಆಗಮಂ ವಿನಾ ಈಶ್ವರಸ್ಯ ಅಸಿದ್ಧೇಃ ।**

**ನ ಚ ಅನುಮಾನಾತ್ ತತ್ಸಿದ್ಧಿಃ ವಿಪರ್ಯಯೇಣಾಪ್ಯನುಮಾತುಂ ಶಕ್ಯತ್ವಾತ್ । 'ವಿಮತಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಇತ್ಯುಕ್ತೇ 'ವಿಮತಂ ವಿಕರ್ತೃಕಂ ಅಸ್ಮತ್ಸಮ್ಮತ ಕರ್ತೃರಹಿತತ್ವಾತ್ ಆತ್ಮವತ್' ಇತ್ಯನು-ಮಾನವಿರೋಧಾತ್ । ಅಕಾರ್ಯತ್ವಮುಪಾಧಿಃ ಇತ್ಯುಕ್ತೇ ಶರೀರಿಜನ್ಯತ್ವಮಿತ-ರತ್ರಾಪ್ಯುಪಾಧಿರಿತ್ಯುತ್ತರಮ್ ।**

**ಅನುವಾದ**—(ಈವರೆಗೆ ಅಪೌರುಷೇಯತ್ವವನ್ನೂ, ಸ್ವತಃ ಪ್ರಾಮಾಣ್ಯವನ್ನೂ, ಸಿದ್ಧವ್ಯುತ್ಪತ್ತಿಯನ್ನೂ ಸಮರ್ಥಿಸಿ ಅಪೌರುಷೇಯವಾದ್ದರಿಂದ ಪ್ರಮಾಣವಾದ ವೇದಗಳು ಸಿದ್ಧರೂಪನಾದ ವಿಷ್ಣುವನ್ನೇ ಪ್ರತಿಪಾದಿಸುವವು. ಆದುದರಿಂದ ಅವನೇ ಸದಾಗಮೈಕ-ವಿಜ್ಞೇಯನು ಎಂದು ಸಮರ್ಥಿಸಿ ವೇದಗಳು ವಿಷ್ಣುವನ್ನು ಪ್ರತಿಪಾದಿಸಲಾರವು ಎಂಬ ಆಕ್ಷೇಪವನ್ನು ಪರಿಹರಿಸಿದರು. ಈಗ ಜೀವೇಶ್ವರ ಅಭೇದವೇ ವೇದಗಳ ತಾತ್ಪರ್ಯ ಎಂಬ ಅದ್ವೈತಿಗಳ ವಾದವನ್ನು ನಿರಾಕರಿಸುವರು)

ಜೀವಬ್ರಹ್ಮರ ಅಭೇದದಲ್ಲಿಯೇ ವೇದಗಳ ತಾತ್ಪರ್ಯವಿರುವದು ಎಂಬುದು ಸರಿಯಲ್ಲ ಯಾಕಂದರೆ ಜೀವಬ್ರಹ್ಮರ ಅಭೇದವನ್ನು ತಿಳಿಸುವ ಒಂದು ಪ್ರಮಾಣವಾಕ್ಯವೂ ವೇದಗಳಲ್ಲಿ ಇಲ್ಲ ಜೀವಬ್ರಹ್ಮರ ಭೇದವು (ಪ್ರತ್ಯಕ್ಷ ಮತ್ತು ಅನುಮಾನದಿಂದ ಸಿದ್ಧ ವಾದದ್ದರಿಂದ) ಭೇದಪ್ರತಿಪಾದಕ ಶ್ರುತಿವಾಕ್ಯಗಳು ಕೇವಲ ಅನುವಾದಕ (ಅವು ಪ್ರಮಾಣ ವಲ್ಲ) ಎಂಬ ಆಕ್ಷೇಪವೂ ಸರಿಯಲ್ಲ ಯಾಕಂದರೆ ಆಗಮವನ್ನು ಬಿಟ್ಟು ಬೇರೆ ಪ್ರಮಾಣ ಗಳಿಂದ ಈಶ್ವರನ ಸಿದ್ಧಿಯೇ ಆಗುವದಿಲ್ಲ (ಅಂದಮೇಲೆ ಅವನೊಡನೆ ಜೀವನಿಗಿರುವ ಭೇದವು ಪ್ರತ್ಯಕ್ಷ ಅನುಮಾನಗಳಿಂದ ಹೇಗೆ ಸಿದ್ಧವಾಗುವದು ?)

**ಅನುಮಾನದಿಂದ ಈಶ್ವರನು ಸಿದ್ಧನಾಗುವದಿಲ್ಲ.**

ಅನುಮಾನದಿಂದ ಈಶ್ವರನ ಸಿದ್ಧಿಯಾಗುವದು (ಆದ್ದರಿಂದ ಜೀವೇಶ್ವರಭೇದವೂ ಸಿದ್ಧವಾಗುವದು) ಎಂಬುದು ಸರಿಯಲ್ಲ ಯಾಕಂದರೆ ಇದಕ್ಕೆ ವಿರುದ್ಧವಾಗಿಯೂ ಅನುಮಾನಮಾಡಬಹುದು (ಈಶ್ವರಸಾಧಕ ಅನುಮಾನಕ್ಕೆ ವಿರೋಧಕವಾದ ಅನುಮಾನ ಗಳನ್ನೂ ಹೇಳಬಹುದು)

ವಿಮತವು (ಅಂದರೆ ಸಕರ್ತೃಕವೋ ಅಕರ್ತೃಕವೋ ಎಂದು ವಿವಾದವಿಷಯವಾದ ಕ್ಷಿತ್ಯಂಕುರಾದಿಗಳು) ಸಕರ್ತೃಕವೇ ಆಗಿವೆ, ಯಾಕಂದರೆ ಅವು ಕಾರ್ಯವಾಗಿವೆ. (ನಿತ್ಯ ವಾದವಕ್ಕೆ ಕರ್ತೃವು ಬೇಕಿಲ್ಲ ಆದರೆ ಕಾರ್ಯವಾದವಕ್ಕೆ ಕರ್ತೃವು ಬೇಕು. ಕರ್ತನು ಯಾರು ಎಂದು ತಿಳಿಯದ ಅನೇಕ ಕಾರ್ಯವಸ್ತುಗಳು ಈ ಜಗತ್ತಿನಲ್ಲಿ ಇವೆ. ಅವುಗಳಿಗೆ ಒಬ್ಬ ಕರ್ತನಿರುವನು ಅವನೇ ಈಶ್ವರನು ಎಂಬುದು ಈ ಅನುಮಾನದ ಅಭಿಪ್ರಾಯವು) ಈ ಅನುಮಾನಕ್ಕೆ ಪ್ರತಿಯಾಗಿ ಸಕರ್ತೃಕವೋ ಅಕರ್ತೃಕವೋ ಎಂದು ವಿವಾದವಿಷಯ ಗಳಾದವು ಅಕರ್ತೃಕವೇ ಆಗಿವೆ ಯಾಕಂದರೆ ನಮಗೆ ಒಪ್ಪಿಗೆಯಾಗುವ ಕರ್ತೃವು ಕಂಡುಬರುವದಿಲ್ಲ (ನಮಗೆ ಒಪ್ಪಿಗೆಯಾಗುವ ಕರ್ತೃವೆಂದರೆ ಶರೀರ, ಜ್ಞಾನ, ಇಚ್ಛೆ,

ಪ್ರಯತ್ನ, ಸ್ವಪ್ರಯೋಜನ ಇತ್ಯಾದಿಗಳಿರುವ ಕರ್ತೃವು) ಅಂಥ ಕರ್ತೃವು ಕ್ಷಿತ್ಯಂಕುರಾದಿಗಳಿಗೆ ಇರುವದು ಕಂಡುಬರುವದಿಲ್ಲ. ಆದ್ದರಿಂದ ಅವು ಅಂದರೆ ಕ್ಷಿತ್ಯಂಕುರಾದಿಗಳು ಕರ್ತೃರಹಿತವೇ ಆಗಿವೆ ಈ ಪ್ರತಿಯಾದ ಅನುಮಾನದಿಂದ ವಿರೋಧ ಬರುವದರಿಂದ ಅನುಮಾನದಿಂದ ಈಶ್ವರನ ಸಿದ್ಧಿಯಾಗುವದಿಲ್ಲ

(ಅಕರ್ತೃಕತ್ವವನ್ನು ಸಾಧಿಸಲು ಹೇಳಿದ ಅನುಮಾನದಲ್ಲಿಯ ಹೇತುವಿಗೆ) ಅಕಾರ್ಯತ್ವ ಎಂಬ ಉಪಾಧಿಯಿದೆ (ಆದುದರಿಂದ ಅದು ದುಷ್ಟಾನುಮಾನವು) ಎಂದು ಹೇಳಿದರೆ ಸಕರ್ತೃಕತ್ವವನ್ನು ಸಾಧಿಸಲು ಹೇಳುವ ಅನುಮಾನದ ಹೇತುವಿಗೂ ಶರೀರಿ ಜನ್ಯತ್ವವೆಂಬ ಉಪಾಧಿಯಿರುವದು ಎಂದು ಉತ್ತರವು (ಆದುದರಿಂದ ಅದೂ ದುಷ್ಟಾನುಮಾನವು)

**ವಿವರಣೆ**—ಅಪೌರುಷೇಯಗಳಾದ ಸಮಸ್ತ ವೇದಗಳೂ ವಿಷ್ಣುವಿನಲ್ಲಿಯೇ ಮಹಾತಾತ್ಪರ್ಯವುಳ್ಳವು ಎಂದು ಮೇಲೆ ವಿವರಿಸಿದರು ಆದರೆ ಅದ್ವೈತಿಗಳು ವೇದಗಳಲ್ಲಿ ತತ್ತ್ವಾವೇದಕಭಾಗ ಅತತ್ತ್ವಾವೇದಕಭಾಗ ಎಂದು ಎರಡು ವಿಭಾಗಗಳನ್ನು ಮಾಡಿ ಮಂತ್ರ ಬ್ರಾಹ್ಮಣರೂಪವಾದ ವಿಧಿ ನಿಷೇಧಗಳನ್ನು ಹೇಳುವ ಕರ್ಮಪರವಾದ ವೇದಭಾಗವು ಅತತ್ತ್ವಾವೇದಕವು ಉಪನಿಷತ್ತುಗಳು ತತ್ತ್ವಾವೇದಕ ಎಂದು ಹೇಳುವರು. ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಈ ತತ್ತ್ವ ಜೀವಬ್ರಹ್ಮರ ಅಭೇದರೂಪವಾದುದು ಎಂದು ಹೇಳುವರು. ಅದ್ವೈತಿಗಳ ಈ ವಾದವನ್ನು ಇಲ್ಲಿ ನಿರಾಕರಿಸಲಾಗಿದೆ

### ಅಭೇದ ಪ್ರತಿಪಾದಕ ಶ್ರುತಿವಚನಗಳಿಲ್ಲ.

ಜೀವೇಶ್ವರರ ಅಭೇದ ಎಂಬುದರಿಂದ ಜೀವಬ್ರಹ್ಮರ ಅಭೇದವನ್ನು ತೆಗೆದುಕೊಳ್ಳಬೇಕು. ಯಾಕಂದರೆ ಈಶ್ವರ ಅಂದರೆ ಸಗುಣಬ್ರಹ್ಮನಿಗೂ ಜೀವನಿಗೂ ಅದ್ವೈತಿಗಳು ಅಭೇದವನ್ನು ಹೇಳುವದಿಲ್ಲ ಮಾಯಾ ಉಪಾಧಿಕನಾದ ಬ್ರಹ್ಮನು ಸಗುಣಬ್ರಹ್ಮನು ಅಥವಾ ಈಶ್ವರನು ಇವನೂ ಜೀವನಂತೆ ಸೋಪಾಧಿಕನೇ ಆಗಿರುವನು. ಆದ್ದರಿಂದ ಶುದ್ಧಬ್ರಹ್ಮನೊಡನೇ ಜೀವನ ಅಭೇದವನ್ನು ಅದ್ವೈತಿಗಳು ಹೇಳುವರು. ಅದ್ವೈತಿಗಳು ಹೇಳುವ ಈ ಜೀವಬ್ರಹ್ಮರ ಅಭೇದವನ್ನು ಪ್ರತಿಪಾದಿಸುವ ಪ್ರಮಾಣ ಅಂದರೆ ಪ್ರಧಾನವಾದ ಶ್ರುತಿವಾಕ್ಯವು ಒಂದಾದರೂ ಉಪನಿಷತ್ತುಗಳಲ್ಲಿ ಇಲ್ಲ. 'ತತ್ತ್ವಮಸಿ' ಇತ್ಯಾದಿ ವಾಕ್ಯಗಳು ಅಭೇದಪ್ರತಿಪಾದಕ ಎಂದು ಅವರು ಹೇಳುವರು. ಆದರೆ 'ದ್ವಾ ಸುಪರ್ಣಾ' ಇತ್ಯಾದಿ ಭೇದಪ್ರತಿಪಾದಕ ಶ್ರುತಿಗಳಿಗೆ ವಿರುದ್ಧವಾಗುವದರಿಂದ 'ತತ್ತ್ವಮಸಿ' ಇತ್ಯಾದಿ ವಾಕ್ಯಗಳಿಗೆ ಅಭೇದಪರವಾದ ಅರ್ಥವನ್ನು ಮಾಡುವದು ಯುಕ್ತವಾಗುವದಿಲ್ಲ. ಇನ್ನು ಭೇದಪರ ಮತ್ತು ಅಭೇದಪರ ಇವೆರಡೂ ಶ್ರುತಿವಾಕ್ಯಗಳಾದ್ದರಿಂದ ಇವುಗಳ ಪ್ರಾಬಲ್ಯ ದೌರ್ಬಲ್ಯಗಳನ್ನು ವಿಚಾರಿಸಿ ಯಾವದು ಪ್ರಬಲವೋ ಅದರಲ್ಲಿಯೇ ಶ್ರುತಿಗಳ ತಾತ್ಪರ್ಯ ಎಂದು ನಿರ್ಣಯಿಸಬೇಕಾಗುವದು. ಅಭೇದ ಪರ ಶ್ರುತಿಗಳೇ ಪ್ರಬಲ ಎಂದು ಅದ್ವೈತಿಗಳು ವಾದಿಸುವರು. ಜೀವೇಶ್ವರರ ಭೇದವು ಪ್ರತ್ಯಕ್ಷ ಮತ್ತು ಅನುಮಾನದಿಂದ ತಿಳಿದುಬರುತ್ತದೆ.

ಜೀವನು ' ಅಹಮ್ ' ಎಂಬ ಪ್ರತ್ಯಕ್ಷಕ್ಕೆ ವಿಷಯನೇ ಆಗಿದ್ದಾನೆ. ಈಶ್ವರನು ಅನುಮಾನ ದಿಂದ ತಿಳಿದುಬರುತ್ತಾನೆ ಈ ಪ್ರಮಾಣಗಳಿಂದ ತಿಳಿದುಬರುವ ಜೀವ ಮತ್ತು ಈಶ್ವರರು ಅಲ್ಪಜ್ಞ ಮತ್ತು ಸರ್ವಜ್ಞರಾಗಿರುವದರಿಂದ ಭಿನ್ನರಾಗಿದ್ದಾರೆ ಎಂದು ಅವರ ಭೇದವೂ ತಿಳಿದುಬರುತ್ತದೆ. ಹೀಗೆ ಪ್ರಮಾಣಾಂತರದಿಂದ ತಿಳಿದುಬರುವ ಜೀವೇಶ್ವರ ಭೇದವನ್ನು ಹೇಳುವ ' ದ್ವಾ ಸುಪರ್ಣಾ ' ಇತ್ಯಾದಿ ಶ್ರುತಿಗಳು ಕೇವಲ ಭೇದವನ್ನು ಅನುವಾದ ಮಾಡುವ ಶ್ರುತಿಗಳು. ಆದ್ದರಿಂದ ದುರ್ಬಲವಾದವುಗಳು ಆದರೆ ಇದಂಪ್ರಾಥಮ್ಯೇನ ಅಭೇದವನ್ನು ಹೇಳುವ ' ತತ್ತ್ವಮಸಿ ' ಇತ್ಯಾದಿ ಶ್ರುತಿಗಳು ಪ್ರಬಲವಾದವುಗಳು. ಆದ್ದರಿಂದ ಅಭೇದದಲ್ಲಿಯೇ ಶ್ರುತಿಯ ತಾತ್ಪರ್ಯವು ಎಂದು ಅದ್ವೈತಿಗಳು ವಾದಿಸುವರು. ಆದರೆ ಅವರ ವಾದವು ಸರಿಯಲ್ಲ

### ಭೇದಶ್ರುತಿಗಳು ಅನುವಾದಕವಲ್ಲ.

ಭೇದವು ತಿಳಿಯಬೇಕಾದರೆ ಯಾವ ಎರಡರ ಭೇದವನ್ನು ಹೇಳುವೆವೋ ಆವೆರಡರ ಜ್ಞಾನವಿರಬೇಕಾಗುವದು ಇವೆರಡರಲ್ಲಿ ಒಂದಕ್ಕೆ ಧರ್ಮೀ ಇನ್ನೊಂದಕ್ಕೆ ಪ್ರತಿಯೋಗೀ ಎಂದು ಕರೆಯುವರು ' ಘಟಃ ಪಟೋ ನ ' ಎಂಬಲ್ಲಿ ಘಟವು ಧರ್ಮಿಯು, ಪಟವು ಪ್ರತಿಯೋಗಿಯು , ಇವೆರಡರ ಜ್ಞಾನವಿಲ್ಲದೆ ಇವುಗಳೊಳಗಿನ ಭೇದಜ್ಞಾನವು ಆಗಲಾರದು ಆದ್ದರಿಂದ ಜೀವ ಮತ್ತು ಈಶ್ವರ ಭೇದಜ್ಞಾನವಾಗಬೇಕಾದರೆ ಜೀವ ಮತ್ತು ಈಶ್ವರರ ಜ್ಞಾನವಾಗಬೇಕು. ಇವುಗಳಲ್ಲಿ ಈಶ್ವರನ ಜ್ಞಾನವು ಶ್ರುತಿಯಿಂದಲೇ ಆಗಬೇಕು. ಅಂದಮೇಲೆ ಭೇದಪರ ಮತ್ತು ಆಪಾತತಃ ಅಭೇದಪರ ಶ್ರುತ್ಯರ್ಥಜ್ಞಾನವಾಗುವುದಕ್ಕಿಂತ ಮೊದಲು ಈಶ್ವರನ ಜ್ಞಾನವಾಗುವದಿಲ್ಲ ಆದುದರಿಂದ ಜೀವೇಶ್ವರ ಭೇದಜ್ಞಾನವೂ ಆಗಿರುವದಿಲ್ಲ. ಅಂದಮೇಲೆ ಪ್ರಮಾಣಾಂತರದಿಂದ ಸಿದ್ಧವಾದ ಜೀವೇಶ್ವರಭೇದವನ್ನೇ ಹೇಳುವದರಿಂದ ಭೇದಪರವಾಕ್ಯಗಳು ಅನುವಾದಗಳು ಎಂದು ಹೇಳಲು ಬರುವದಿಲ್ಲ ಆದ್ದರಿಂದ ಅವು ದುರ್ಬಲವೆಂದೂ ಹೇಳಲು ಬರುವದಿಲ್ಲ.

### ಈಶ್ವರಸಾಧಕ ಅನುಮಾನವು ದೋಷಯುಕ್ತವಾಗಿದೆ.

ಇನ್ನು ನ್ಯಾಯವೈಶೇಷಿಕಾದಿಗಳಂತೆ ಅನುಮಾನದಿಂದಲೇ ಈಶ್ವರನು ಸಿದ್ಧನಾಗುವನು ಆದ್ದರಿಂದ ಶ್ರುತ್ಯರ್ಥವಿಚಾರಕ್ಕಿಂತ ಮೊದಲೇ ತಿಳಿದಿರುವನು ಎಂದು ಹೇಳಲೂ ಬರುವದಿಲ್ಲ. ಯಾಕಂದರೆ ಪ್ರತ್ಯಕ್ಷ ಅಥವಾ ಶ್ರುತಿಯ ಸಹಾಯವಿಲ್ಲದ ಅನುಮಾನಗಳು ದುಷ್ಟಾನುಮಾನಗಳಾಗಿರುವ ಸಂಭವವಿರುತ್ತದೆ. ಒಂದು ಅನುಮಾನಕ್ಕೆ ಪ್ರತಿಯಾಗಿ ಅದಕ್ಕೆ ವಿರುದ್ಧವಾದುದನ್ನು ಪ್ರತಿಪಾದಿಸಲು ಇನ್ನೊಂದು ಅನುಮಾನವನ್ನು ಹೇಳುವದು ಸಾಧ್ಯವಿರುತ್ತದೆ.

ಅನುಮಾನದಿಂದ ಈಶ್ವರನನ್ನು ಸಾಧಿಸಲು ಹೊರಟವರು ' ವಿಮತಮ್ ಸಕರ್ತೃಕಮ್ ಕಾರ್ಯತ್ವಾತ್ ಘಟವತ್ ' ಎಂದು ಹೇಳಿದರೆ ಅದನ್ನು ವಿರೋಧಿಸುವವರು

'ವಿಮತವನ್ ಅಕರ್ತೃಕವನ್ ಅಸ್ಮತ್ಸಮ್ಮತಕರ್ತೃರಹಿತತ್ವಾತ್ ಆತ್ಮವತ್' ಎಂದು ಪ್ರತಿಯಾದ ಅನುಮಾನವನ್ನು ಹೇಳಬಹುದು ಎರಡನೆಯ ಅನುಮಾನದ ಹೇತುವಿಗೆ 'ಅಕಾರ್ಯತ್ವ' ಎಂಬ ಉಪಾಧಿಯಿರುವದರಿಂದ ಅದು ದುಷ್ಟವು ಎಂದು ಹೇಳಿದರೆ ಮೊದಲನೆಯ ಅನುಮಾನದ ಹೇತುವಿಗೆ 'ಶರೀರಜನ್ಯತ್ವ' ಎಂಬ ಉಪಾಧಿಯಿರುವದರಿಂದ ಅದೂ ದುಷ್ಟ ಎಂದು ವಾದಿಸಬಹುದು ಸಾಧ್ಯಕ್ಕಿಂತ ವ್ಯಾಪಕವಾಗಿಯೂ ಸಾಧನಕ್ಕಿಂತ ಅವ್ಯಾಪಕವಾಗಿಯೂ ಇರುವದು ಉಪಾಧಿಯು. ಉದಾಹರಣೆಗೆ 'ಪರ್ವತಃ ಧೂಮವಾನ್ ವಹ್ನೇಃ' ಪರ್ವತದಲ್ಲಿ ಧೂಮವಿರುವದು (ಹೊಗೆಯಿರುವದು) ಯಾಕಂದರೆ ಅಲ್ಲಿ ವಹ್ನಿ (ಬೆಂಕಿ) ಇರುವದು ಎಂಬ ಅನುಮಾನಕ್ಕೆ 'ಆರ್ದ್ರೇಂಧನ ಸಂಯೋಗ' ಅಥವಾ ಹಸಿಕಟ್ಟಿಗೆಯಿರುವದು ಉಪಾಧಿಯು ಸಾಧ್ಯ ಅಂದರೆ ಧೂಮ ಇರುವಲ್ಲೆಲ್ಲ ಹಸಿಕಟ್ಟಿಗೆಯಿರುವದರಿಂದ ಅದು ಸಾಧ್ಯವ್ಯಾಪಕವು ಸಾಧನ ಅಂದರೆ ವಹ್ನಿ ಇರುವಲ್ಲೆಲ್ಲ ಹಸಿಕಟ್ಟಿಗೆ ಇರಬೇಕೆಂಬ ನಿಯಮವಿಲ್ಲ ಆದ್ದರಿಂದ ಅದು ಸಾಧನಕ್ಕೆ ಅವ್ಯಾಪಕವಾಗಿರುವದು ಹೀಗೆ ಸಾಧ್ಯಕ್ಕೆ ವ್ಯಾಪಕವೂ ಸಾಧನಕ್ಕೆ ಅವ್ಯಾಪಕವೂ ಆದ್ದರಿಂದ ಆರ್ದ್ರೇಂಧನ ಸಂಯೋಗವು ಉಪಾಧಿಯು ಈ ಉಪಾಧಿಯಿದ್ದದ್ದರಿಂದ ಹೇತುವು ದುಷ್ಟಹೇತುವು ಇದರ ಒಟ್ಟು ಮಥಿತಾರ್ಥವೆಂದರೆ ಹೊಗೆ ಉಂಟಾಗಲು ಆರ್ದ್ರೇಂಧನ ಸಂಯೋಗ ಅಥವಾ ಹಸಿಕಟ್ಟಿಗೆ ಹೊತ್ತಿಸುವದು ಕಾರಣ, ಕೇವಲ ಬೆಂಕಿ ಕಾರಣವಲ್ಲ ಆದ್ದರಿಂದ ಕೇವಲ ಬೆಂಕಿಯಿರುವದರಿಂದ ಹೊಗೆಯಿದೆಯೆಂದು ಸಾಧಿಸಲು ಬರುವದಿಲ್ಲ ಹೊಗೆಯನ್ನು ಸಾಧಿಸಲು ಬೆಂಕಿಯು ದುಷ್ಟಹೇತುವು ಯಾಕಂದರೆ ಅದಕ್ಕೆ ಹಸಿಕಟ್ಟಿಗೆ ಎಂಬ ಉಪಾಧಿಯಿರುವದು. ಪ್ರಕೃತದಲ್ಲಿ ಸಕರ್ತೃಕತ್ವವನ್ನು ಸಾಧಿಸಲು ಕೊಟ್ಟ ಕಾರ್ಯತ್ವಹೇತುವೂ ಹೀಗೆ ಉಪಾಧಿಯುಳ್ಳದ್ದಾಗಿದೆ

ಒಂದು ಕಾರ್ಯವು ಸಕರ್ತೃಕವಾಗಬೇಕಾದರೆ ಅದು ಕೇವಲ ಕಾರ್ಯವಿದ್ದರೆ ಸಾಲದು. ಆದರೆ ಶರೀರ, ಜ್ಞಾನ, ಇಚ್ಛೆ, ಪ್ರಯತ್ನ, ಪ್ರಯೋಜನೋದ್ದೇಶ ಇತ್ಯಾದಿ ಇರುವ ಶರೀರಿಯಿಂದ ಜನ್ಯವಾಗಿರಬೇಕು (ಘಟಪಟಾದಿಗಳು ಹೀಗೆ ಶರೀರಿಜನ್ಯವಾಗಿರುವವು. ಕ್ಷಿತ್ಯಂಕುರಾದಿಗಳು ಹೀಗಿಲ್ಲ. ಆದ್ದರಿಂದ ಅವುಗಳಿಗೆ ಕಾರ್ಯವಾದರೂ ಕರ್ತೃ ಬೇಕಾಗಿಲ್ಲ) ಒಂದು ಕಾರ್ಯವಸ್ತುವು ಸಕರ್ತೃಕವಾಗಿರಬೇಕಾದರೆ ಅದು ಕೇವಲ ಕಾರ್ಯವಾಗಿದ್ದರೆ (ಜನ್ಯವಸ್ತುವಾಗಿದ್ದರೆ) ಸಾಲದು ಆದರೆ ಶರೀರಿಜನ್ಯವಾಗಿರಬೇಕು ಎಂದು ಅಭಿಪ್ರಾಯವು. ಅಂದರೆ ಇಲ್ಲಿ ಕಾರ್ಯತ್ವಹೇತುವಿಗೆ ಶರೀರಿಜನ್ಯತ್ವವು ಉಪಾಧಿಯಾಗಿದೆ ಆದ್ದರಿಂದ ಈ ಹೇತುವು ದುಷ್ಟಹೇತುವಾಗಿದೆ. ಹೀಗೆ ಸಕರ್ತೃಕತ್ವವನ್ನೂ ತನ್ಮೂಲಕ ಈಶ್ವರನನ್ನೂ ಸಾಧಿಸುವ ಅನುಮಾನವು ದುಷ್ಟವಾದ್ದರಿಂದ, ಅನುಮಾನದಿಂದ ಈಶ್ವರನು ಸಿದ್ಧನಾಗುವದಿಲ್ಲ.

ಜೀವೇಶ್ವರರ ಭೇದವು ಪ್ರಮಾಣಾಂತರಗಳಿಂದ ತಿಳಿದುಬರುವದಿಲ್ಲ. ಆದ್ದರಿಂದ ಅದನ್ನು ತಿಳಿಸುವ ಭೇದಶ್ರುತಿಗಳು ಅನುವಾದಕ ಮತ್ತು ದುರ್ಬಲ ಎಂದು ಹೇಳುವದು ಸರಿಯಲ್ಲ.

**ಭೇದವು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧವಾಗಿದ್ದರೆ ಅಭೇದಾಗಮವು ಅಪ್ರಮಾಣವು.**

**19. ಪ್ರತ್ಯಕ್ಷಾನುಮಾನಸಿದ್ಧತ್ವೇ ಚ, ಭೇದಸ್ಯ ತದ್ವಿರೋಧಾದೇವ ಅಪ್ರಾಮಾಣ್ಯಮ್ ಅಭೇದಾಗಮಸ್ಯ । ತೇನ ಅಭೇದಾಗಮಸ್ಯ ಪ್ರಾಮಾಣ್ಯಾಭಾವೇ ನ ಅನುವಾದಕತ್ವಂ ಭೇದವಾಕ್ಯಾನಾಮ್ । ನ ಹಿ ಬಲವತಃ ಅನುವಾದಕತ್ವಂ ದಾರ್ಢ್ಯಹೇತುತ್ವಾತ್ ।**

**ಅನುವಾದ**—(ಭೇದಶ್ರುತಿಗಳ ಅನುವಾದಕತ್ವವನ್ನು ಸಮರ್ಥಿಸಲು ಅದ್ವೈತಿಗಳು) ಜೀವೇಶ್ವರಭೇದವು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧವಾಗಿದೆ ಎಂದು ವಾದಿಸಿದರೆ ಹೀಗೆ ಭೇದವು ಪ್ರಮಾಣಸಿದ್ಧವಾದ್ದರಿಂದ ಅದಕ್ಕೆ ವಿರುದ್ಧವಾದ ಅಭೇದಾಗಮವು ಅಪ್ರಮಾಣವೆಂದು ಸ್ವತ ಏವ ಸಿದ್ಧವಾಗುವದು ಹೀಗೆ ಅಭೇದಾಗಮಗಳಿಗೆ ಪ್ರಾಮಾಣ್ಯ ವಿಲ್ಲವೆಂಬಾದಮೇಲೆ ಭೇದಶ್ರುತಿಗಳು ಕೇವಲ ಅನುವಾದಕವೆನಿಸಲಾರವು ಪ್ರಬಲ ಪ್ರಮಾಣವು ಅನುವಾದಕವೆನಿಸಲಾರದು. ಯಾಕಂದರೆ ಇದರಿಂದ ಜ್ಞಾನವು ದೃಢ ವಾಗುವದು

**ವಿವರಣೆ**—ಭೇದಶ್ರುತಿಗಳು ಕೇವಲ ಅನುವಾದಕ ಆದ್ದರಿಂದ ಅಭೇದಶ್ರುತಿಗಳಿಗಿಂತ ದುರ್ಬಲ ಎಂದು ಸಮರ್ಥಿಸಲು ಅದ್ವೈತಿಗಳು ಶ್ರಮಪಟ್ಟು ಜೀವೇಶ್ವರಭೇದವು ಪ್ರತ್ಯಕ್ಷ ಮತ್ತು ಅನುಮಾನದಿಂದ ಈಗಾಗಲೇ ಸಿದ್ಧವಾಗಿವೆ ಎಂದು ಹೇಳಲು ಹೋದರು. ಆದರೆ ಇದರಿಂದ ಅವರಿಗೇ ತೊಂದರೆಯಾಗುವದು ಜೀವೇಶ್ವರಭೇದವು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧವಾಗಿದ್ದರೆ ಪ್ರಮಾಣಪ್ರಮಿತವಾದಂತಾಯಿತು ಹೀಗೆ ಭೇದವು ಪ್ರಮಾಣಪ್ರಮಿತವಾದರೆ ಅಭೇದವೇ ಅಪ್ರಮಾಣವೆಂದಾಯಿತು. ಆಗ ಆಪಾತತಃ ಅಭೇದಪರವೆಂದು ತೋರುವ 'ತತ್ತ್ವಮಸಿ' ಇತ್ಯಾದಿ ಶ್ರುತಿಗಳಿಗೆ ಭೇದಪರವಾಗಿಯೇ ಅರ್ಥಮಾಡಬೇಕು ಅವು ಅಭೇದಪರವೆಂದು ಹೇಳಿದರೆ ಅವುಗಳ ಪ್ರಾಮಾಣ್ಯವುಳಿಯ ಲಾರದು. ಅವುಗಳಿಗೆ ಅಭೇದಪರತಯಾ ಪ್ರಾಮಾಣ್ಯವಿಲ್ಲವೆಂದಾದಮೇಲೆ 'ದ್ವಾ ಸುಪರ್ಣಾ' ಇತ್ಯಾದಿ ಭೇದಶ್ರುತಿಗಳು ಅನುವಾದಕ ಎಂದು ಸಾಧಿಸಲು ಹೊರಡುವದು ನಿರರ್ಥಕಶ್ರಮವು ಇನ್ನು, ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಜೀವೇಶ್ವರಭೇದವು ಸಿದ್ಧವಾದರೂ ಅಭೇದಾಗಮಗಳು ಪ್ರಬಲವಾದ್ದರಿಂದ ಅಪ್ರಮಾಣವಾಗುವದಿಲ್ಲ ಎಂದು ಅದ್ವೈತಿಯು ವಾದಿಸಿದರೆ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಜೀವೇಶ್ವರಭೇದವು ಸಿದ್ಧವಾದರೂ ಭೇದಶ್ರುತಿಗಳು ಪ್ರಬಲವಾದ್ದರಿಂದ ಅನುವಾದಕವಾಗುವದಿಲ್ಲ ಎಂದು ನಾವೂ ಪ್ರತಿಪಾದಿಸುವೆವು. ಯಾಕಂದರೆ ಭೇದಶ್ರುತಿಗಳು ದುರ್ಬಲವಾದ ಪ್ರತ್ಯಕ್ಷ ಅನುಮಾನ ಪ್ರಮಾಣಗಳಿಂದ ಪ್ರತಿಪಾದಿತವಾದ ಭೇದವನ್ನು ದೃಢಪಡಿಸುವವು. ಒಂದು ಪ್ರಮಾಣವು ತಿಳಿಸಿದಮೇಲೆ ಮಾತ್ರ ಅದನ್ನೇ ತಿಳಿಸಿದರೆ ಅನುವಾದವಾಗುವದು ಆದರೆ ದುರ್ಬಲಪ್ರಮಾಣಗಳು ತಿಳಿಸಿದ್ದನ್ನು ಪ್ರಬಲಪ್ರಮಾಣಗಳು ದೃಢಪಡಿಸಿದರೆ ಅದು

ಅನುವಾದವಾಗುವದಿಲ್ಲ. ಆದ್ದರಿಂದ ಭೇದಶ್ರುತಿಗಳು ಅನುವಾದಕ ಆದ್ದರಿಂದ ದುರ್ಬಲ ಎಂಬ ಅದ್ವೈತಿಗಳು ಮಾಡಿದ ಆಕ್ಷೇಪ ಸರಿಯಲ್ಲ. ತದ್ವಿರುದ್ಧವಾಗಿ ಜೀವೇಶ್ವರಭೇದವು ಪ್ರತ್ಯಕ್ಷ ಅನುಮಾನರೂಪ ಪ್ರಮಾಣಾಂತರದಿಂದ ಸಿದ್ಧ ಎಂಬ ಅವರ ವಾದದಿಂದ ಭೇದವು ಪ್ರಮಾಣಪ್ರಮಿತವೆಂದು ಅಂಗೀಕಾರ ಮಾಡಿದಂತಾಗಿ ಅಭೇದವು ಅಪ್ರಮಾಣ ಎಂದಾಗಿ ಅವರಿಗೇ ತೊಂದರೆಯಾಗುವದು

**ಉಪಜೀವ್ಯಗಳಾದ ಪ್ರತ್ಯಕ್ಷ ಅನುಮಾನಗಳು ಆಗಮಕ್ಕಿಂತ ಪ್ರಬಲವಾದವು.**

**20. ಪ್ರತ್ಯಕ್ಷಾದೇಃ ಆಗಮಸ್ಯ ಪ್ರಾಬಲ್ಯೇಽಪಿ ನ ಉಪಜೀವ್ಯಪ್ರಮಾಣ-ವಿರೋಧೇ ಪ್ರಾಮಾಣ್ಯಮ್ । ವಿಷಯಾಭಾವೇ ಸ್ವಸ್ಯೈವ ಅಪ್ರಾಮಾಣ್ಯಪ್ರಾಪ್ತೇಃ । ತೇನೈವ ಹಿ ಅನುಮಾನಾದಿನಾ ಆಗಮಸ್ಯ ವಿಷಯಃ ಸಿದ್ಧ್ಯತಿ ತತ್ಪಕ್ಷೇಽಪಿ । ಅನುಮಾನೇನ ಹಿ ಅನುವಾದಿತ್ವಪಕ್ಷೇ ಈಶ್ವರಃ ಬೋದ್ಧವ್ಯಃ ಪ್ರತ್ಯಕ್ಷೇಣ ಚ ಆಗಮಃ । ಅತಃ ತಯೋಃ ವಿರೋಧೇ ಪ್ರಾಮಾಣ್ಯಂ ನ ಸ್ಯಾತ್ । ಅನುಮಾನ-ಸಿದ್ಧೇಶ್ವರಾಚ್ಚ ಭೇದಃ ಅನುಭವತಃ ಏವ ಸಿದ್ಧಃ ಜೀವಸ್ಯ ಅಸರ್ವಕರ್ತೃತ್ವೇನ ಅನುಭವಾತ್ ।**

**ಅನುವಾದ**—(ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಜೀವೇಶ್ವರಭೇದವು ಸಿದ್ಧವಾಗುವದರಿಂದ ಅಭೇದವಾಕ್ಯಗಳು ಅಪ್ರಮಾಣ ಎಂದು ಮೇಲೆ ವಿವರಿಸಿದರು ಇದನ್ನೇ ಪುಷ್ಟೀಕರಿಸುತ್ತ ಪ್ರತ್ಯಕ್ಷ ಮತ್ತು ಅನುಮಾನಗಳು ಈ ವಿಷಯದಲ್ಲಿ ಉಪಜೀವ್ಯಪ್ರಮಾಣಗಳಾಗಿರುವದರಿಂದ ಪ್ರಬಲವಾಗಿವೆ ಎಂದು ಈಗ ತೋರಿಸುವರು). ಆಗಮವು ಪ್ರತ್ಯಕ್ಷಾದಿಗಳಿಗಿಂತ ಪ್ರಬಲವಾದುದು ಎಂಬುದು ಸಾಮಾನ್ಯನಿಯಮವಾದರೂ ಅವು ಉಪಜೀವ್ಯಪ್ರಮಾಣವಾಗಿದ್ದಾಗ ಅವುಗಳ ವಿರೋಧ ಬಂದರೆ ಆಗಮವು ಪ್ರಮಾಣವಾಗುವದಿಲ್ಲ ಯಾಕಂದರೆ (ಉಪಜೀವಕವಾದ ಆಗಮಕ್ಕೆ ವಿಷಯವನ್ನು ಒದಗಿಸುವ ಉಪಜೀವ್ಯಪ್ರಮಾಣಗಳಾದ ಪ್ರತ್ಯಕ್ಷ ಮತ್ತು ಅನುಮಾನಗಳು ಅಪ್ರಮಾಣವಾದರೆ ಆಗಮಪ್ರಮಾಣಕ್ಕೆ) ವಿಷಯವೇ ಇಲ್ಲವಂತಾಗಿ ಆ ಆಗಮಪ್ರಮಾಣವೇ ವಿಷಯಬೋಧಕವಾಗದೆ ಅಪ್ರಮಾಣವಾಗುವದು ಅದ್ವೈತಮತದ ಪ್ರಕಾರವಾಗಿಯೂ (ಶ್ರುತಿಯಲ್ಲಿ ಅಭೇದವನ್ನು ಪ್ರತಿಪಾದಿಸಲು ಅಗತ್ಯವಾದ ಜೀವ ಮತ್ತು ಈಶ್ವರ ಎಂಬ) ವಿಷಯಗಳು ಅನುಮಾನಾದಿಗಳಿಂದಲೇ ಒದಗುವವು. ಭೇದವಾಕ್ಯಗಳು ಅನುವಾದಕ ಎಂದು ಹೇಳಲು ಈಶ್ವರನು ಅನುಮಾನದಿಂದ ಸಿದ್ಧಿಸುವನು, ಜೀವನು ಪ್ರತ್ಯಕ್ಷದಿಂದ ಸಿದ್ಧಿಸುವನು ಎಂದು ಅವರೇ ಹೇಳಿರುವರು. (ಈ ಜೀವ, ಈಶ್ವರರು ಅಭೇದವನ್ನು ಹೇಳಲೂ ಬೇಕಾಗುವದರಿಂದ ಇವರು ಪ್ರತ್ಯಕ್ಷ ಮತ್ತು ಅನುಮಾನದಿಂದ ಸಿದ್ಧರಾಗಿರುವರು ಎಂಬುದು ಅವರಿಗೂ ಅನ್ವಯಿಸುವದು ಆದುದರಿಂದ ಇವು ಅವರಿಗೂ ಉಪಜೀವ್ಯಪ್ರಮಾಣಗಳಾಗಿರುವವು) ಆದ್ದರಿಂದ ಈ ಪ್ರತ್ಯಕ್ಷ ಅನುಮಾನಗಳಿಂದ ಪ್ರತಿಪಾದಿತವಾದುದ್ದಕ್ಕೆ (ಅಂದರೆ ಜೀವೇಶ್ವರಭೇದಕ್ಕೆ) ವಿರುದ್ಧವಾದ ಅಭೇದವಾಕ್ಯಗಳು ಪ್ರಮಾಣವಾಗಲಾರವು. ಅನುಮಾನದಿಂದ

ಸಿದ್ಧನಾಗುವ ಈಶ್ವರನಿಗೂ ಪ್ರತ್ಯಕ್ಷದಿಂದ (ತಿಳಿಯುವ) ಜೀವನಿಗೂ ಇರುವ ಭೇದವು ಜೀವನು ತಾನು ಸರ್ವಕರ್ತನಲ್ಲವೆಂಬ ಪ್ರತ್ಯಕ್ಷ ಅನುಭವವುಳ್ಳವನಾದ್ದರಿಂದ ಅವನ ಈ ಅನುಭವದಿಂದಲೇ ಸಿದ್ಧವಾಗುವದು (ಆದ್ದರಿಂದ ಉಪಜೀವ್ಯಪ್ರಮಾಣಗಳಾದ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಭೇದವು ಸಿದ್ಧವಾದ್ದರಿಂದ ಉಪಜೀವಕ ಪ್ರಮಾಣ ವಾದ ಆಗಮವು ಅಭೇದದಲ್ಲಿ ಪ್ರಮಾಣವಾಗಲಾರದು).

**ವಿವರಣೆ**—ಭೇದಶ್ರುತಿಗಳು ಕೇವಲ ಅನುವಾದ, ಅವು ಪ್ರಮಾಣವಲ್ಲ ಎಂದು ಸಾಧಿಸಲು ಅದ್ವೈತಿಗಳು ಜೀವನು ಪ್ರತ್ಯಕ್ಷದಿಂದ ಸಿದ್ಧನಾಗಿರುವನು ಈಶ್ವರನು ಅನುಮಾನದಿಂದ ಸಿದ್ಧನಾಗುವನು ಈ ಜೀವೇಶ್ವರಭೇದವು ಪ್ರತ್ಯಕ್ಷಾನುಮಾನಗಳಿಂದ ಸಿದ್ಧವಾಗಿರುವದು ಎಂದು ಹೇಳುವರು ಹೀಗೆ ಪ್ರತ್ಯಕ್ಷ ಮತ್ತು ಅನುಮಾನದಿಂದ ಜೀವೇಶ್ವರಭೇದವು ಸಿದ್ಧವಾಗಿದ್ದರೆ ಅಭೇದವು ಅಪ್ರಮಾಣವಾಗುವದಿಲ್ಲವೇ ಎಂಬುದಕ್ಕೆ ಅಭೇದಶ್ರುತಿಗಳು ಆಗಮವಾದ್ದರಿಂದ ಪ್ರಬಲಪ್ರಮಾಣ, ಭೇದವನ್ನು ಪ್ರತಿಪಾದಿಸುವ ಪ್ರತ್ಯಕ್ಷ ಮತ್ತು ಅನುಮಾನಗಳು ದುರ್ಬಲ, ಈ ದುರ್ಬಲಪ್ರಮಾಣದಿಂದ ಸಿದ್ಧವಾದ ಭೇದವನ್ನು ಅನುವಾದಮಾಡುವ ಭೇದಶ್ರುತಿಗಳೂ ದುರ್ಬಲ ಎಂದು ಹೇಳುವರು. ಆದ್ದರಿಂದ ಇಲ್ಲಿ ಪ್ರಮಾಣಗಳ ಪ್ರಾಬಲ್ಯ–ದೌರ್ಬಲ್ಯಗಳನ್ನು ವಿಚಾರಮಾಡಿದ್ದಾರೆ. ಪ್ರತ್ಯಕ್ಷಾದಿಗಳಿಗಿಂತ ಆಗಮವು ಪ್ರಬಲವು ಎಂಬುದು ಸಾಮಾನ್ಯನಿಯಮ ಆದರೆ ಪ್ರತ್ಯಕ್ಷಾದಿಗಳು ಉಪಜೀವ್ಯಪ್ರಮಾಣವಾಗಿದ್ದಾಗ ಅವೇ ಪ್ರಬಲವಾಗುವವು ಯಾವ ಪ್ರಮಾಣದಿಂದ ಇನ್ನೊಂದು ಪ್ರಮಾಣದ ವಿಷಯವು ಒದಗಿಸಲ್ಪಡುವದೋ ಅದು ಆ ಇನ್ನೊಂದು ಪ್ರಮಾಣಕ್ಕೆ ಉಪಜೀವ್ಯವು ಪ್ರಕೃತದಲ್ಲಿ ಜೀವೇಶ್ವರ ಅಭೇದವನ್ನು ಹೇಳುವ ಶ್ರುತಿಗಳಿಗೆ ಜೀವ ಮತ್ತು ಈಶ್ವರ ಈ ವಿಷಯಗಳು ಪ್ರತ್ಯಕ್ಷ ಮತ್ತು ಅನುಮಾನ ದಿಂದ ಒದಗಿಸಲ್ಪಡುತ್ತವೆ ಎಂದು ಅದ್ವೈತಿಗಳೇ ಹೇಳುತ್ತಾರೆ ಅಂದಮೇಲೆ ಈ ಪ್ರತ್ಯಕ್ಷ ಅನುಮಾನಗಳು ಇಲ್ಲಿ ಉಪಜೀವ್ಯಪ್ರಮಾಣಗಳು ಆದುದರಿಂದ ಅವು ಪ್ರಬಲ ಪ್ರಮಾಣ ಗಳು ಯಾಕಂದರೆ ಉಪಜೀವ್ಯಪ್ರಮಾಣಗಳಿಂದ ಜೀವ ಮತ್ತು ಈಶ್ವರ ಎಂಬ ವಿಷಯವೇ ಒದಗದಿದ್ದರೆ ಉಪಜೀವಕಪ್ರಮಾಣವು ತನ್ನ ಕಾರ್ಯವನ್ನೇ (ಅವುಗಳ ಅಭೇದವನ್ನು ಹೇಳುವ ಕಾರ್ಯವನ್ನೇ) ನಿರ್ವಹಿಸಲಾರದು. ಉಪಜೀವ್ಯಗಳೂ ಪ್ರಬಲವೂ ಆದ ಪ್ರತ್ಯಕ್ಷ ಮತ್ತು ಅನುಮಾನಗಳು ಜೀವ, ಈಶ್ವರ ಮತ್ತು ಅವರ ಭೇದವನ್ನು ಪ್ರತಿಪಾದಿಸಿದ ಮೇಲೆ ಆಗಮವು ಅದಕ್ಕೆ ವಿರುದ್ಧವಾಗಿ ಅಭೇದವನ್ನು ಪ್ರತಿಪಾದಿಸಿದರೆ ಅಪ್ರಮಾಣವಾಗುವದು

ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಕೇವಲ ಜೀವ ಮತ್ತು ಈಶ್ವರರ ಸ್ವರೂಪ ಮಾತ್ರ ತಿಳಿಯುವದು ಅವುಗಳ ಭೇದವಲ್ಲ. ಆದ್ದರಿಂದ ಭೇದವು ಉಪಜೀವ್ಯ ಪ್ರಮಾಣದಿಂದ ತಿಳಿದಿಲ್ಲ ಎಂಬುದು ಸರಿಯಲ್ಲ ಯಾಕಂದರೆ ಅವುಗಳಿಂದ ಭೇದವೂ ತಿಳಿಯುವದು ಜೀವನು ತಾನು ಸರ್ವಕರ್ತನಲ್ಲವೆಂಬುದನ್ನು ಸ್ವತಃ ಅನುಭವದಿಂದ

ಬಲ್ಲನು. ಆದ್ದರಿಂದ ಸರ್ವಕರ್ತನಾದ ಈಶ್ವರನಿಂದ ಭಿನ್ನನು ಎಂಬುದನ್ನೂ ಅನುಭವದಿಂದಲೇ ಬಲ್ಲನು ಹೀಗೆ ಉಪಜೀವ್ಯಗಳಾದ ಪ್ರತ್ಯಕ್ಷ ಅನುಮಾನಪ್ರಮಾಣಗಳಿಂದ ಭೇದವು ಸಿದ್ಧವಾದ್ದರಿಂದ ಉಪಜೀವಕವಾದ ಅಭೇದಾಗಮಗಳು ಅಪ್ರಮಾಣ ಅಲ್ಲದೆ ಭೇದಪ್ರಪಂಚದ ಮಿಥ್ಯಾತ್ವವನ್ನು ಬೋಧಿಸುವದೆಂದು ಹೇಳುವ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯ ಪ್ರತ್ಯಕ್ಷವೂ (ಶ್ರೋತ್ರೇಂದ್ರಿಯದಿಂದ ಈ ಶ್ರುತಿಯ ಸ್ವರೂಪಗ್ರಹಣವೂ) ಉಪಜೀವ್ಯಪ್ರಮಾಣವು ಅಂದರೆ ಈ ಶ್ರುತಿಯನ್ನು ಗ್ರಹಿಸಿ ಒದಗಿಸುವಂಥದು ಈ ಉಪಜೀವ್ಯಪ್ರಮಾಣದಿಂದ ಈ ಶ್ರುತಿಯ ಸತ್ಯತ್ವಸಿದ್ಧವಾದಮೇಲೆ ಇದು ತನ್ನ ಮಿಥ್ಯಾತ್ವವನ್ನು ಬೋಧಿಸಲಾರದು ಹೀಗೆ ಇದು ತನ್ನ ವಿಷಯದಲ್ಲಿಯೇ ಅಪ್ರಮಾಣವಾದ್ದರಿಂದ ಇತರ ಭೇದಪ್ರಪಂಚದ ಮಿಥ್ಯಾತ್ವವನ್ನೂ ಬೋಧಿಸಲಾರದು 'ಪ್ರತ್ಯಕ್ಷೇಣ ಆಗಮಃ' ಎಂದು ಇದನ್ನು ಹೇಳಿರುವರು ಸ್ವಸತ್ತಾಗ್ರಾಹಿಶ್ರೋತ್ರೇಂದ್ರಿಯ ಪ್ರತ್ಯಕ್ಷವೆಂಬ ಉಪಜೀವ್ಯಪ್ರಮಾಣದ ವಿರೋಧವಿರುವದರಿಂದ 'ನೇಹ ನಾನಾಸ್ತಿ' ಎಂಬ ಆಗಮವು ಅಪ್ರಮಾಣವು (ಅಂದರೆ ಅದನ್ನು ಮಿಥ್ಯಾತ್ವ ಪ್ರತಿಪಾದನ ಪರತಯಾ ವ್ಯಾಖ್ಯಾನಮಾಡಿದರೆ ಅಪ್ರಮಾಣವು) ಎಂದು ಸೂಚಿಸಿರುವರು ಇದೇ ವಾಕ್ಯದಿಂದ 'ಆಗಮಃ' ಅಂದರೆ 'ಜೀವ' ಎಂಬ ಅರ್ಥವಿಟ್ಟುಕೊಂಡು ಪ್ರತ್ಯಕ್ಷವೆಂಬ ಉಪಜೀವ್ಯಪ್ರಮಾಣದಿಂದ ಜೀವನು ಸಿದ್ಧಿಸುವನು ಎಂಬುದನ್ನೂ ಹೇಳಿರುವರು ಅಥವಾ 'ಚ' ಶಬ್ದದಿಂದ ಜೀವನನ್ನು ತೆಗೆದುಕೊಂಡು 'ಆಗಮಃ' ಎಂಬುದರಿಂದ 'ನೇಹ ನಾನಾಸ್ತಿ' ಎಂಬ ಆಗಮವನ್ನು ಮಾತ್ರ ಇಟ್ಟುಕೊಳ್ಳಬಹುದು

**ಅನುಭವಕ್ಕೆ ವಿರುದ್ಧವಾದ ಆಗಮವು ಪ್ರಮಾಣವಾಗಲಾರದು.**

**21. ನ ಚ ಅನುಭವವಿರೋಧೇ ಆಗಮಸ್ಯ ಪ್ರಾಮಾಣ್ಯಮ್ । ಆಗಮಪ್ರಾಮಾಣ್ಯಾನುಭವಸ್ಯಾಪಿ ಅಪ್ರಾಮಾಣ್ಯಪ್ರಾಪ್ತೇಃ । ಬಹುಪ್ರಮಾಣಸಂವಾದಶ್ಚ ದಾರ್ಢ್ಯಹೇತುರೇವ । ಬಹೂನಾಂ ವಚನೇ ತಸ್ಯೈವ ದರ್ಶನೇ ದಾರ್ಢ್ಯಸ್ಯೈವ ದೃಷ್ಟೇಃ ।**

**ಅನುವಾದ**—(ಜೀವನಿಗೆ ತಾನು ಸರ್ವಕರ್ತನಲ್ಲವೆಂಬುದು ಅನುಭವಸಿದ್ಧವಾದ್ದರಿಂದ ಈಶ್ವರನಿಗೂ ತನಗೂ ಇರುವ ಭೇದವೂ ಅನುಭವಸಿದ್ಧವಾಗಿದೆ ಹೀಗೆ ಅನುಭವಸಿದ್ಧವಾದ ಭೇದಕ್ಕೆ ವಿರುದ್ಧವಾದ್ದರಿಂದ ಅಭೇದಾಗಮಗಳು ಪ್ರಮಾಣವಲ್ಲ ಎಂದು ಮೇಲೆ ವಿವರಿಸಿರುವರು. ಆದರೆ ಈ ಭೇದಾನುಭವವೇ ಅಪ್ರಮಾಣವೆಂದು ಹೇಳಿ ಅಭೇದಾಗಮವೇ ಪ್ರಮಾಣ ಎಂದು ಏಕೆ ಹೇಳಬಾರದು ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸುವರು). ಅನುಭವಕ್ಕೆ ವಿರುದ್ಧವಾದಾಗ ಆಗಮವು ಪ್ರಮಾಣವಾಗಲಾರದು. (ಅನುಭವವೇ ಎಲ್ಲ ಪ್ರಮಾಣಗಳ ಪ್ರಾಮಾಣ್ಯವನ್ನು ನಿಶ್ಚಯಿಸುವಂಥದು. ಅದು ಜೀವೇಶ್ವರಭೇದದ ವಿಷಯದಲ್ಲಿ ಅಪ್ರಮಾಣವೆಂದಾದರೆ) ಅಭೇದಾಗಮಗಳ ಪ್ರಾಮಾಣ್ಯದ ವಿಷಯದಲ್ಲಿಯೂ ಅಪ್ರಮಾಣವಾಗಬೇಕಾಗುವದು (ಆದ್ದರಿಂದ ಅನುಭವವು ವ್ಯಭಿಚರಿತವಾಗಿರುವದಿಲ್ಲ

ಎಂಬ ನಿಯಮವನ್ನು ಒಪ್ಪಿ ಜೀವೇಶ್ವರಭೇದದ ವಿಷಯದಲ್ಲಿ ಅದರ ಪ್ರಾಮಾಣ್ಯವನ್ನು ಒಪ್ಪುವದೇ ಉಚಿತವು)

ಅಲ್ಲದೆ, ಅನೇಕ ಪ್ರಮಾಣಗಳ ಸಂವಾದವು ದೃಢತೆಯನ್ನುಂಟುಮಾಡುವದು. (ಭೇದದ ವಿಷಯದಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಭೇದಶ್ರುತಿಗಳಿರುವದರಿಂದ ದಾರ್ಢ್ಯ ವಿರುವದು) ಅನೇಕರು (ಒಂದೇ ವಿಷಯವನ್ನು ಕುರಿತು) ಹೇಳಿದಾಗ, ಅದನ್ನೇ ಕಂಡಾಗ ದೃಢತೆಯಿರುವದು ಕಂಡುಬಂದಿದೆ

**ವಿವರಣೆ**—ಸಾಕ್ಷಿಯ ಅನುಭವಕ್ಕೆ ವಿರುದ್ಧವಾದ ಆಗಮವು ಪ್ರಮಾಣವಾಗ ಲಾರದು ಎಲ್ಲ ಅನುಭವಗಳ ಪ್ರಾಮಾಣ್ಯವನ್ನು ಸಾಕ್ಷಿಯೇ ನಿಶ್ಚಯಿಸುವದು ಒಂದು ವಿಷಯದಲ್ಲಿ ಅದರ ಅನುಭವವು ಅಪ್ರಮಾಣವಾದರೆ ಇನ್ನೊಂದು ವಿಷಯದಲ್ಲಿ ಅದರ ಅನುಭವದ ಪ್ರಾಮಾಣ್ಯದಲ್ಲಿ ವಿಶ್ವಾಸವುಂಟಾಗಲಾರದು ಜೀವನಿಗೆ ತಾನು ಸರ್ವಕರ್ತನಲ್ಲ ಎಂದು ತಿಳಿದಿರುವದರಿಂದ ಈಶ್ವರನೊಡನೆ ತನಗಿರುವ ಭೇದದ ಅನುಭವವು ಇದೆ ಅಭೇದಾಗಮಗಳಿಂದ ಈ ಅನುಭವ ಅಪ್ರಮಾಣವೆಂದಾದರೆ ಈ ಅಭೇದಾಗಮಗಳ ಪ್ರಾಮಾಣ್ಯದ ಅನುಭವವೂ ಅಪ್ರಮಾಣವಾಗಿರಬಹುದು ಎಂಬ ಅವಿಶ್ವಾಸಕ್ಕೆ ಕಾರಣ ವಾಗುತ್ತದೆ. ಸಾಕ್ಷಿಗೆ ಬಂದ ಒಂದು ವಿಷಯದ ಅನುಭವವು ಅಪ್ರಮಾಣವಾದರೆ ಇನ್ನೊಂದು ವಿಷಯದ ಅನುಭವವೂ ಅಪ್ರಮಾಣ ಆಗಿರಬಹುದು ಎಂಬ ಶಂಕೆಗೆ ಅವಕಾಶ ವುಂಟಾಗುತ್ತದೆ ಆದ್ದರಿಂದ ಸಾಕ್ಷಿಯ ಅನುಭವದ ಪ್ರಾಮಾಣ್ಯವು ಅವ್ಯಭಿಚರಿತ ಎಂದು ಒಪ್ಪಲೇಬೇಕು ಆದ್ದರಿಂದ ಸಾಕ್ಷಿಗೆ ಬಂದ ಜೀವೇಶ್ವರ ಭೇದಾನುಭವವು ಅಭೇದಾಗಮ ಗಳಿಂದ ಅಪ್ರಮಾಣವಾಗಲಾರದು ಈ ಭೇದಾನುಭವಕ್ಕೆ ವಿರುದ್ಧವಾದ್ದರಿಂದ ಅಭೇದಾಗಮಗಳೇ ಅಪ್ರಮಾಣವಾದವುಗಳು (ಅಂದರೆ ಅವನ್ನು ಅಭೇದ ಪರತಯಾ ವ್ಯಾಖ್ಯಾನಮಾಡಿದರೆ ಅಪ್ರಮಾಣವಾಗುವವು)

**ಬಹು ಪ್ರಮಾಣಗಳಿಂದ ದಾರ್ಢ್ಯವುಂಟಾಗುವದು.**

ಇನ್ನು ಭೇದಕ್ಕೆ ಪ್ರತ್ಯಕ್ಷ, ಭೇದಶ್ರುತಿ ಇತ್ಯಾದಿ ಅನೇಕ ಪ್ರಮಾಣಗಳಿರುವದು ಅನುಕೂಲವೇ ಹೊರತು ಪ್ರತಿಕೂಲವಲ್ಲ ಅನೇಕ ಪ್ರಮಾಣಗಳಿದ್ದಾಗ ಎರಡನೆಯದು ಕೇವಲ ಮೊದಲನೆಯದರ ಅನುವಾದಕ, ಆದ್ದರಿಂದ ದುರ್ಬಲ, ಎಂದು ಹೇಳುವದು ಸರಿಯಲ್ಲ. ಒಂದೇ ವಿಷಯದಲ್ಲಿ ಅನೇಕ ಪ್ರಮಾಣಗಳನ್ನು ಹೇಳುವದು ಪ್ರಯೋಜನ ವಿದ್ದಾಗ ಕೇವಲ ಅನುವಾದವಾಗುವದಿಲ್ಲ ಒಂದು ವಿಷಯದಲ್ಲಿ ಒಂದು ಪ್ರಮಾಣವನ್ನು ಹೇಳಿದಾಗ ಪುನಃ ಶಂಕೆ ಬಂದರೆ ಮತ್ತೊಂದು ಪ್ರಮಾಣವನ್ನು ಹೇಳುವದು ಕಂಡುಬರು ತ್ತದೆ. ಆದ್ದರಿಂದ ಭೇದಶ್ರುತಿಗಳು ಪ್ರತ್ಯಕ್ಷಸಿದ್ಧವಾದ ಭೇದವನ್ನು ದೃಢಪಡಿಸುವವು

**ಸರ್ವಸಮ್ಮತವಾದ ವಿಷಯದಲ್ಲಿ ಮಾತ್ರ ಮತ್ತೆ ಹೇಳಿದ ಪ್ರಮಾಣವು ಅನುವಾದಕವು.**

**22. ಸರ್ವಾವಿವಾದಸ್ಥಲೇ ಏವ ಕಥಂಚಿದನುವಾದಕತ್ವಮ್ । ನ ಚಾತ್ರ ಸರ್ವಾವಿವಾದಃ । ಏಕತ್ವವಾದಿನಾಮೇವ ವಿವಾದದರ್ಶನಾತ್ ।**

**ಬಹುಪ್ರಮಾಣವಿರೋಧೇ ಚ ಏಕಸ್ಯ ಅಪ್ರಾಮಾಣ್ಯಂ ದೃಷ್ಟಂ ಶುಕ್ತಿ-ರಜತಾದೌ । ನ ಚ ದೋಷಜನ್ಯತ್ವಾದೇವ ದುರ್ಬಲತ್ವಮಿತಿ ವಿರೋಧಃ । ಬಹು-ಪ್ರಮಾಣವಿರುದ್ಧಾನಾಂ ದೋಷಜನ್ಯತ್ವನಿಯಮಾತ್ । ದೋಷಜನ್ಯತ್ವಂ ಚ ಬಲವತ್ಪ್ರಮಾಣವಿರೋಧಾದೇವ ಜ್ಞಾಯತೇ ।**

ಅನುವಾದ—ಎಲ್ಲರಿಗೂ ವಿವಾದಾಸ್ಪದವಲ್ಲದ ವಿಷಯದಲ್ಲಿ ಮಾತ್ರ (ಮತ್ತೊಂದು ಪ್ರಮಾಣವನ್ನು ಹೇಳುವದು) ಅನುವಾದಕವಾಗಬಹುದು (ಪ್ರಕೃತವಾದ ಜೀವೇಶ್ವರ ಭೇದದ ವಿಷಯದಲ್ಲಿ) ಎಲ್ಲರಿಗೂ ವಿವಾದವಿಲ್ಲ ಎಂದು ಹೇಳಲು ಬರುವದಿಲ್ಲ ಅಭೇದ ವಾದಿಗಳಿಂದಲೇ ವಿವಾದವಿರುವದು ಕಂಡುಬರುತ್ತದೆ (ಆದುದರಿಂದ ಅವರ ಆಕ್ಷೇಪಗಳನ್ನು ಪರಿಹರಿಸುವ ಭೇದಶ್ರುತಿಗಳು ಅನುವಾದಕವಲ್ಲ).

ಅನೇಕ ಪ್ರಮಾಣಗಳ ವಿರೋಧ ಬಂದಾಗ ಒಂದು ಪ್ರಮಾಣವು ಅಪ್ರಮಾಣ ವಾದದ್ದು ಶುಕ್ತಿರಜತದ ಅನುಭವದಲ್ಲಿ ಕಂಡುಬಂದಿದೆ ಅದು (ಶುಕ್ತಿರಜತದ ಪ್ರತ್ಯಕ್ಷವು) ದೋಷಜನ್ಯವಾದ್ದರಿಂದ ದುರ್ಬಲವು (ಅನೇಕ ಪ್ರಮಾಣವಿರುದ್ಧವಾದ್ದರಿಂದ ದುರ್ಬಲವಲ್ಲ) ಎಂದು ಹೇಳುವದು ಸರಿಯಲ್ಲ ಯಾಕಂದರೆ ಬಹುಪ್ರಮಾಣವಿರುದ್ಧವಾಗಿರುವವು ದೋಷಜನ್ಯವೇ ಆಗಿರುತ್ತವೆ ದೋಷಜನ್ಯವಾಗಿದೆ ಎಂಬುದು ಬಲವತ್ಪ್ರಮಾಣದ ವಿರೋಧ ದಿಂದಲೇ ತಿಳಿದುಬರುತ್ತದೆ

ವಿವರಣೆ—ಒಂದು ಪ್ರಮಾಣದಿಂದ ತಿಳಿದ ವಿಷಯವನ್ನು ಇನ್ನೊಂದು ಪ್ರಮಾಣವು ಮತ್ತೊಮ್ಮೆ ತಿಳಿಸಿದಮಾತ್ರದಿಂದ ಆ ಎರಡನೆಯ ಪ್ರಮಾಣವು ಅನುವಾದಕವಾಗುವದಿಲ್ಲ ಆದರೆ ಎಲ್ಲಿ ಮೊದಲನೆಯ ಪ್ರಮಾಣದಿಂದ ತಿಳಿಸಿದ ವಿಷಯವು ಸರ್ವಸಮ್ಮತವಾಗಿದೆಯೋ ಅಲ್ಲಿ ಮಾತ್ರ ಮತ್ತೊಮ್ಮೆ ಹೇಳುವ ಅಗತ್ಯವಿಲ್ಲದ್ದರಿಂದ ಅನುವಾದಕವಾಗುವದು ಇದೂ ಪರಾರ್ಥಾನುಮಾನ, ವಾಕ್ಯ ಇತ್ಯಾದಿ ಪ್ರಮಾಣಗಳಿಗೆ ಮಾತ್ರ ಆಗುವದು. ಯಾಕಂದರೆ ಈ ಪ್ರಮಾಣಗಳಿಂದ ಹೀಗೆ ಮತ್ತೊಮ್ಮೆ ಹೇಳಿದರೆ ವೈಯರ್ಥ್ಯದೋಷ ಬರುವದು ಆದರೆ ಸ್ವಾರ್ಥಾನುಮಾನ, ಪ್ರತ್ಯಕ್ಷ ಇತ್ಯಾದಿಗಳಲ್ಲಿ ಬರುವದಿಲ್ಲ. ಅವು ಪುರುಷಾಧೀನವಾಗಿಲ್ಲ. ಯಾವ ವಿಷಯಗಳಲ್ಲಿ ವಾದಿಗಳಲ್ಲಿ ವಿವಾದವಿರುವದೋ ಅಂಥ ವಿಷಯಗಳಿಗೆ ಮತ್ತೊಂದು ಪ್ರಮಾಣವನ್ನು ಹೇಳುವದು ಅನುವಾದವಾಗುವದಿಲ್ಲ ವಾದಿಗಳು ಮಾಡುವ ಶಂಕೆ ಮತ್ತು ಆಕ್ಷೇಪಗಳ ಪರಿಹಾರ ಮಾಡಿ ನಿಃಶಂಕಪ್ರವೃತ್ತಿಯನ್ನುಂಟುಮಾಡಲು ಸಹಾಯಕ ವಾಗುವದು. ಪ್ರಕೃತ ಜೀವೇಶ್ವರಭೇದದ ವಿಷಯದಲ್ಲಿ ಅಭೇದವಾದಿಗಳೊಡನೆ ವಿವಾದ

ವಿರುವದರಿಂದ ಭೇದವು ಪ್ರತ್ಯಕ್ಷಸಿದ್ಧವಾದರೂ ಅದನ್ನು ದೃಢಪಡಿಸುವ ಭೇದಶ್ರುತಿಗಳು ಅನುವಾದಕವಲ್ಲ

**ಶುಕ್ತಿರಜತಪ್ರತ್ಯಕ್ಷವು ಬಹುಪ್ರಮಾಣವಿರುದ್ಧವಾದ್ದರಿಂದ ಅಪ್ರಮಾಣವಾಗಿದೆ**

ಅಲ್ಲದೆ, ಅನೇಕ ಪ್ರಮಾಣಗಳ ವಿರೋಧ ಬಂದಾಗ ಒಂದೇ ಪ್ರಮಾಣದಿಂದ ತಿಳಿದು ಬಂದುದು ಅಪ್ರಮಾಣವೆಂಬುದು ಶುಕ್ತಿರಜತದೃಷ್ಟಾಂತದಲ್ಲಿ ಕಂಡುಬಂದಿದೆ ಶುಕ್ತಿಯು ರಜತವೆಂದು ಪ್ರತ್ಯಕ್ಷದಿಂದ ಮಾತ್ರ ಭಾಸವಾಗುವದು ಆದರೆ 'ಇದು ರಜತವಲ್ಲ' ಎಂಬ ಆಪ್ತವಾಕ್ಯ, ಸಮೀಪಕ್ಕೆ ಹೋದಮೇಲೆ 'ಇದು ಶುಕ್ತಿ' ಎಂಬ ಪ್ರತ್ಯಕ್ಷ, ಮುರಿಯುವದು, ಸುಟ್ಟುಹೋಗುವದು ಇತ್ಯಾದಿ ಲಿಂಗಗಳು ಹೀಗೆ ಅನೇಕ ಪ್ರಮಾಣಗಳು ರಜತಪ್ರತ್ಯಕ್ಷಕ್ಕೆ ವಿರುದ್ಧವಾದ್ದರಿಂದ ಅದು ಅಪ್ರಮಾಣವು ಎಂಬುದು ಸ್ಪಷ್ಟವಿದೆ ಇನ್ನು ಈ ರಜತಪ್ರತ್ಯಕ್ಷವು ಅಪ್ರಮಾಣವಾಗಿರುವದಕ್ಕೆ ಇದು ದೋಷಜನ್ಯವಾಗಿರುವದೇ ಕಾರಣವೇ ಹೊರತು, ಅನೇಕ ಪ್ರಮಾಣಗಳಿಗೆ ವಿರುದ್ಧವಾಗಿರುವದು ಕಾರಣವಲ್ಲ ಎಂದು ವಾದಿಸಬಹುದು ಆದರೆ ಬಹುಪ್ರಮಾಣವಿರುದ್ಧವಾಗಿರುವದರಿಂದಲೇ ಈ ದೋಷಜನ್ಯತ್ವವು ತಿಳಿದುಬರುವದು. ಆದ್ದರಿಂದ ಬಹುಪ್ರಮಾಣವಿರುದ್ಧವಾದ ಅಭೇದವಾಕ್ಯಗಳಿಂದುಂಟಾದ ಜ್ಞಾನವೂ ಪೂರ್ವೋತ್ತರಪರಾಮರ್ಶಶೂನ್ಯತೆಯೆಂಬ ದೋಷಜನ್ಯವೇ ಆಗಿರುವದು ಮತ್ತು ಅಪ್ರಮಾಣವಾಗಿರುವದು ಇಲ್ಲಿ 'ಐಕ್ಯವಾಕ್ಯಂ ಅಪ್ರಮಾಣಂ ಬಹುಪ್ರಮಾಣವಿರುದ್ಧತ್ವಾತ್' ಎಂಬ ಅನುಮಾನವು ಅಭಿಪ್ರೇತವಾಗಿದೆ ಇದಕ್ಕೆ 'ದೋಷಜನ್ಯತ್ವಂ ಉಪಾಧಿಃ' ಎಂದು ಹೇಳಿದರೆ ಐಕ್ಯವಾಕ್ಯಗಳಿಂದುಂಟಾದ ಜ್ಞಾನವೂ ಪೂರ್ವೋತ್ತರಪರಾಮರ್ಶ ಶೂನ್ಯತ್ವರೂಪವಾದ ದೋಷಜನ್ಯವೇ ಆದ್ದರಿಂದ ಸಾಧನ ಅವ್ಯಾಪಕತ್ವವು ಬರುವದಿಲ್ಲ. ಆದ್ದರಿಂದ ಹೇತುವು ನೋಪಾಧಿಕವಾಗುವದಿಲ್ಲ ಎಂದು ವಿವರಿಸಬಹುದು ಪ್ರಮಾಣಗಳ ಬಲವತ್ತ್ವವು ಮೂರು ವಿಧ—ಉಪಜೀವ್ಯತ್ವ, ನಿರವಕಾಶತ್ವ, ಬಹುತ್ವ ಈ ಮೂರು ದೃಷ್ಟಿಯಿಂದಲೂ ಭೇದಸಾಧಕ ಪ್ರಮಾಣಗಳು ಪ್ರಬಲವಾಗಿದ್ದುದರಿಂದ ಅಭೇದಾಗಮಗಳು ಅಪ್ರಮಾಣವಾಗಿವೆ

**ಪ್ರತ್ಯಕ್ಷಾದಿ ಪ್ರಮಾಣಸ್ವರೂಪನಿರೂಪಣ ಮತ್ತು ಬಲಾಬಲವಿಚಾರ.**

**23.** ಅದುಷ್ಟಮಿಂದ್ರಿಯಂ ತು ಅಕ್ಷಮ್, ತರ್ಕೋಽದುಷ್ಟಃ
ತಥಾನುಮಾ ।
ಆಗಮೋಽದುಷ್ಟವಾಕ್ಯಂ ಚ ಸ್ವದೃಕ್ ಚಾನುಭವಃ ಸ್ಮೃತಃ ॥
ಬಲವತ್ಪ್ರಮಾಣತಶ್ಚೈವ ಜ್ಞೇಯಾ ದೋಷಾಃ ನ ಚಾನ್ಯಥಾ ।
ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ ॥
ತಯೋಃ ಸ್ವಭಾವೋ ಬಲವಾನುಪಜೀವ್ಯಾದಿಕಶ್ಚ ಸಃ ॥

**ಅನುವಾದ**—ದೋಷರಹಿತವಾದ ಮತ್ತು ಅರ್ಥಸನ್ನಿಕೃಷ್ಟವಾದ ಚಕ್ಷುರಾದಿ ಜ್ಞಾನೇಂದ್ರಿಯಗಳು ಪ್ರತ್ಯಕ್ಷಪ್ರಮಾಣಗಳು. ದೋಷರಹಿತವಾದ, ತರ್ಕ ಅಂದರೆ ಉಪಪತ್ತಿ, ಯುಕ್ತಿ ಇತ್ಯಾದಿ ಶಬ್ದವಾಚ್ಯವಾದ ಲಿಂಗವು ಅನುಮಾನಪ್ರಮಾಣವು ದೋಷರಹಿತವಾದ ವಾಕ್ಯವು ಆಗಮಪ್ರಮಾಣವು ಆತ್ಮಸ್ವರೂಪಭೂತವಾದ ಸಾಕ್ಷಿ ಜ್ಞಾನವು ಅನುಭವರೂಪಪ್ರಮಾಣವು (ವೃತ್ತಿಜ್ಞಾನವಲ್ಲ). ಇಂದ್ರಿಯಾದಿಗಳ ದೋಷಗಳು ಪ್ರಬಲಪ್ರಮಾಣಗಳಿಂದ ತಿಳಿಗುಬರುವವು ಬೇರೆ ರೀತಿಯಿಂದ ತಿಳಿದುಬರುವದಿಲ್ಲ ಪ್ರಬಲಪ್ರಮಾಣಗಳ ಪ್ರಾಬಲ್ಯವು ಎರಡು ವಿಧವಾಗಿರುವದು ಒಂದು ಬಹುತ್ವ ಅಂದರೆ ಅನೇಕ ಪ್ರಮಾಣಗಳಿರುವದು ಇನ್ನೊಂದು ಸ್ವಭಾವತಃ ಒಂದು ಪ್ರಮಾಣವು ಇನ್ನೊಂದಕ್ಕಿಂತ ಪ್ರಬಲವಾಗಿರುವದು ಅನೇಕ ಪ್ರಮಾಣಗಳಿರುವದು ಮತ್ತು ಸ್ವಭಾವತಃ ಪ್ರಬಲವಾದ ಪ್ರಮಾಣವಿರುವದು ಇವೆರಡರಲ್ಲಿಯೂ ಸ್ವಭಾವತಃ ಪ್ರಬಲವಾದ ಪ್ರಮಾಣವಾಗಿರುವದೇ ಹೆಚ್ಚು ಬಲವಾದದ್ದು ಉಪಜೀವ್ಯತ್ವ, ನಿರವಕಾಶತ್ವಾದಿಗಳೇ ಸ್ವಭಾವ ಪ್ರಾಬಲ್ಯವು

**ವಿವರಣೆ**—ಬ್ರಹ್ಮತರ್ಕವಚನವನ್ನು ಉಲ್ಲೇಖಿಸಿ ಪ್ರತ್ಯಕ್ಷಾದಿಪ್ರಮಾಣಗಳ ಸ್ವರೂಪ ಮತ್ತು ಬಲಾಬಲಗಳನ್ನು ಇಲ್ಲಿ ಹೇಳಿರುವರು. ಇಂದ್ರಿಯಗಳು ದೋಷಯುಕ್ತವಾಗಿದ್ದರೆ ಅವು ಜ್ಞಾನವನ್ನೇ ಹುಟ್ಟಿಸುವದಿಲ್ಲ ಅಥವಾ ವಿಪರೀತಜ್ಞಾನವನ್ನು ಹುಟ್ಟಿಸುವವು. ಆದ್ದರಿಂದ ದೋಷರಹಿತವಾದ ಚಕ್ಷುರಾದಿ ಜ್ಞಾನೇಂದ್ರಿಯಗಳು ಪ್ರತ್ಯಕ್ಷಪ್ರಮಾಣಗಳು ತರ್ಕಶಬ್ದವು ವ್ಯಾಪಕವಾದ ಅರ್ಥದಲ್ಲಿ ಎಲ್ಲ ವಿಧವಾಗ ಯುಕ್ತಿಗಳನ್ನೂ ಒಳಗೊಳ್ಳುವದು 'ತರ್ಕ್ಯತೇ ಅನುಮೀಯತೇ ಅನೇನ' ಎಂಬ ವ್ಯುತ್ಪತ್ತಿಯಿಂದ ತರ್ಕಶಬ್ದಕ್ಕೆ ಅನುಮಾನ ಪ್ರಮಾಣ ಎಂಬ ಅರ್ಥವಿರುವದು ಈ ಅನುಮಾನವೂ ಕೂಡ ವಿರೋಧ, ಅಸಂಗತಿ ಇತ್ಯಾದಿ ದೋಷಯುಕ್ತವಾಗಿದ್ದರೆ ಸರಿಯಾದ ಜ್ಞಾನವನ್ನು ಹುಟ್ಟಿಸುವದಿಲ್ಲ. ಆದುದರಿಂದ ಪ್ರಮಾಣವಾಗುವದಿಲ್ಲ ವಿರೋಧ, ಅಸಂಗತಿ ಇತ್ಯಾದಿ ದೋಷಗಳಿಲ್ಲದ ಅನುಮಾನವೇ ಪ್ರಮಾಣವು ತರ್ಕಶಬ್ದಕ್ಕೆ 'ವ್ಯಾಪ್ಯವಾದದ್ದನ್ನು ಅಂಗೀಕಾರ ಮಾಡಿದರೆ ಅನಿಷ್ಟವಾದ ವ್ಯಾಪಕವನ್ನು ಅಂಗೀಕಾರಮಾಡಬೇಕಾಗುವ ಪ್ರಸಂಗ ಬರುವದು' ಎಂಬ ವಿಶೇಷಾರ್ಥವೂ ಇದೆ 'ಪರ್ವತದಲ್ಲಿ ಅಗ್ನಿಯಿಲ್ಲವೆಂದು ಹೇಳಿದರೆ ಧೂಮವೂ ಇಲ್ಲವೆಂದು ಹೇಳಬೇಕಾಗುವದು' ಎಂದು ಪ್ರಸಂಗಮಾಡುವದು ತರ್ಕವು ಪರ್ವತದಲ್ಲಿ ಧೂಮವು ಪ್ರತ್ಯಕ್ಷ ಕಾಣುವದರಿಂದ ಇಲ್ಲವೆಂದು ಹೇಳಲು ಬರುವದಿಲ್ಲ ಆದ್ದರಿಂದ ಅಗ್ನಿಯನ್ನೂ ಒಪ್ಪಿಕೊಳ್ಳಬೇಕು ಎಂಬುದು ಇದರ ಫಲಿತವು ಹೀಗೆ ಪ್ರಸಂಗ ಅಥವಾ ತರ್ಕರೂಪವಾದ ಅನುಮಾನಗಳು ಒಂದು ವಿಧ. ಸಾಧನರೂಪವಾದ ಅನುಮಾನಗಳು ಇನ್ನೊಂದು ವಿಧ ಇವೆರಡನ್ನೂ ತರ್ಕ ಮತ್ತು ತಥಾ ಎಂಬ ಶಬ್ದಗಳಿಂದ ತೆಗೆದುಕೊಂಡರೆ ಈ ಎರಡನ್ನೂ ಈ ಬ್ರಹ್ಮತರ್ಕ ವಚನದಲ್ಲಿ ಹೇಳಿದ್ದು ಕಂಡುಬರುವದು ಪ್ರಸಂಗರೂಪವಾದ ತರ್ಕವು ಪ್ರಮಾಣವೇ ಅಲ್ಲವೆಂದು ನೈಯಾಯಿಕರು ಹೇಳುವರು. (ತರ್ಕದಲ್ಲಿ ವಾದಕ್ಕಾಗಿ ಇಲ್ಲದೇ ಇರುವದರ

ಆರೋಪಮಾಡಿರುವದರಿಂದ ಇದು ಅಯಥಾರ್ಥಜ್ಞಾನದ ಒಂದು ಪ್ರಕಾರವು, ಪ್ರಮಾಣ ವಲ್ಲ ಎಂದು ನೈಯಾಯಿಕರ ಅಭಿಪ್ರಾಯವು) ತರ್ಕವು ಒಂದು ಪ್ರತ್ಯೇಕಪ್ರಮಾಣ ಎಂದು ಜೈನರು ಹೇಳುವರು ಆದ್ದರಿಂದ ಪ್ರಸಂಗರೂಪವಾದ ತರ್ಕವೂ ಅನುಮಾನದ ಒಂದು ಪ್ರಕಾರ, ಅದೂ ಪ್ರಮಾಣ ಎಂಬ ಸಿದ್ಧಾಂತದ ಅಭಿಪ್ರಾಯವನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ

ಅಜ್ಞಾನ, ವಿಪ್ರಲಂಭ ಇತ್ಯಾದಿ ದೋಷರಹಿತವಾದ ವಾಕ್ಯವು ಪ್ರಮಾಣವು. ಪೌರುಷೇಯವಾಕ್ಯಗಳಲ್ಲಿ ಈ ದೋಷಗಳಿಗೆ ಅವಕಾಶವಿರುವದು ಅಪೌರುಷೇಯವಾದ ವೇದಗಳಲ್ಲಿ ಈ ದೋಷಗಳ ಪ್ರಸಕ್ತಿಯಿಲ್ಲ 'ಸ್ವದೃಕ್' ಎಂದರೆ ಸ್ವರೂಪಭೂತವಾದ ಜ್ಞಾನವು. 'ಸ್ವಾ ಚ ಸಾ ದೃಕ್ ಚ ಸ್ವದೃಕ್' ಎಂದು ವಿಗ್ರಹವು. ಆತ್ಮನ ಸ್ವರೂಪ-ಭೂತಜ್ಞಾನವೆಂದರೆ ಸಾಕ್ಷಿಜ್ಞಾನವು ಇದು ಅನುಭವರೂಪಪ್ರಮಾಣವು ಇಲ್ಲಿ 'ಅನುಭವ' ಶಬ್ದದಿಂದ ವೃತ್ತಿಜ್ಞಾನವನ್ನು ತೆಗೆದುಕೊಳ್ಳಬಾರದು ಸಾಕ್ಷಿಜ್ಞಾನವನ್ನು ಮಾತ್ರ ತೆಗೆದು ಕೊಳ್ಳಬೇಕು ಈ ಸಾಕ್ಷಿಜ್ಞಾನರೂಪವಾದ ಪ್ರಮಾಣವು ಕೇವಲ ಪ್ರಮಾಣವು ಮೇಲೆ ಹೇಳಿದ ಪ್ರತ್ಯಕ್ಷಾದಿ ಮೂರು ಪ್ರಮಾಣಗಳು ಅನುಪ್ರಮಾಣಗಳು ಸಾಕ್ಷಿಜ್ಞಾನರೂಪ ಈ ಅನುಭವಪ್ರಮಾಣಕ್ಕೆ ನಿರ್ದುಷ್ಟ ಎಂಬ ವಿಶೇಷಣವನ್ನು ಕೊಡುವ ಅಗತ್ಯವಿಲ್ಲ ಸಾತ್ತ್ವಿಕಜೀವರ ಸಾಕ್ಷಿಜ್ಞಾನವು ನಿರ್ದುಷ್ಟವಾಗಿಯೇ ಇರುವದು

ಸ್ವರೂಪಾಸಿದ್ಧಿಗಳೇ ಮೊದಲಾದ ಅನುಮಾನದೋಷಗಳು ನೇರವಾಗಿ ತಿಳಿದು ಬಂದರೂ ಇಂದ್ರಿಯಾದಿಗಳ ದೋಷಗಳು ಪ್ರಬಲಪ್ರಮಾಣಗಳ ವಿರೋಧದಿಂದ ಕಂಡುಬರು ವವು ಪ್ರಮಾಣಗಳಲ್ಲಿಯ ಪ್ರಾಮಾಣ್ಯಕ್ಕಿಂತ ಭಿನ್ನವಾದ ಬಲವತ್ವವೆಂದರೆ ಅನೇಕ ಪ್ರಮಾಣಗಳಿರುವದು ಅಥವಾ ವಿರೋಧಿಯಾದ ಪ್ರಮಾಣವು ಸ್ವಭಾವತಃ ಪ್ರಬಲವಾಗಿರು ವದು ಒಂದು ಪ್ರಮಾಣದಿಂದ ತಿಳಿದುಬಂದ ವಿಷಯವು ಅನೇಕ ಪ್ರಮಾಣಗಳಿಗೆ ವಿರುದ್ಧ ವಾಗಿದ್ದರೆ ಆಗ ಆ ಮೊದಲಿನ ಪ್ರಮಾಣವು ನಿರ್ದುಷ್ಟವಲ್ಲವೆಂದು ತಿಳಿಯಬೇಕು. ಇದು ಪ್ರಮಾಣಗಳ ಬಹುತ್ವಪ್ರಯುಕ್ತವಾದ ಪ್ರಾಬಲ್ಯವು ಆದರೆ ಅನೇಕ ಪ್ರಮಾಣಗಳಿಂದ ಒಂದು ವಿಷಯ ತಿಳಿದುಬಂದಿದ್ದರೂ ಸ್ವಭಾವತಃ ಪ್ರಬಲವಾದ ಒಂದೇ ಪ್ರಮಾಣವು ಅದಕ್ಕೆ ವಿರುದ್ಧವಾಗಿದ್ದರೆ ಆ ಅನೇಕ ಪ್ರಮಾಣಗಳು ನಿರ್ದುಷ್ಟವಲ್ಲವೆಂದು ತಿಳಿಯಬೇಕು. ಇದು ಪ್ರಮಾಣಗಳ ಸ್ವಭಾವ ಪ್ರಾಬಲ್ಯವು ಸ್ವಭಾವದ ಈ ಪ್ರಾಬಲ್ಯವು ಉಪಜೀವ್ಯತ್ವ, ನಿರವಕಾಶತ್ವ, ಶ್ರುತಿತ್ವ, ಉಪಪತ್ತಿತ್ವ ಹೀಗೆ ಅನೇಕ ವಿಧವಾಗಿರುವದು ಉಪಜೀವಕ ಪ್ರಮಾಣಕ್ಕಿಂತ ಉಪಜೀವ್ಯವು ಪ್ರಬಲವು ಸಾವಕಾಶಕ್ಕಿಂತ ನಿರವಕಾಶವು ಪ್ರಬಲವು ಲಿಂಗಾದಿಗಳಿಗಿಂತ ಶ್ರುತಿಯು ಪ್ರಬಲವು ಇತ್ಯಾದಿ ಈ ಸ್ವಭಾವ ಪ್ರಾಬಲ್ಯವನ್ನು ಅಲ್ಲಲ್ಲಿ ಕಂಡುಹಿಡಿದುಕೊಳ್ಳಬೇಕು.

**ಪ್ರಮಾಣಗಳ ಸಾಮಾನ್ಯಲಕ್ಷಣ, ಅನುಭವ ಮತ್ತು ಆಗಮಗಳ ಪ್ರಾಬಲ್ಯ.**

**24. ಯಾಥಾರ್ಥ್ಯಮೇವ ಪ್ರಾಮಾಣ್ಯಂ ತನ್ಮುಖ್ಯಂ ಜ್ಞಾನಶಬ್ದಯೋಃ।**
**ಜ್ಞಾನಂ ಚ ದ್ವಿವಿಧಂ ಬಾಹ್ಯಂ ತಥಾsನುಭವರೂಪಕಮ್ ॥**

**ಬಲ್ಯೇವಾನುಭವಸ್ತತ್ರ ನಿರ್ದೋಷಂ ತ್ವಕ್ಷಜಾದಿಕಮ್ ।**
**ಅನುಪ್ರಮಾಣತಾಂ ಯಾತಿ ತಥಾಕ್ಷಾದಿತ್ರಯಂ ತತಃ ॥**
**ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್ ।**
**ಉಪಜೀವ್ಯವಿರೋಧೇ ತು ನ ಪ್ರಾಮಾಣ್ಯಮಮುಷ್ಯ ಚ ॥**

**ಅನುವಾದ**—ಯಾಥಾರ್ಥ್ಯ ಅಂದರೆ ಪದಾರ್ಥಗಳು ಹೇಗೆ ಇರುವವೋ ಹಾಗೆಯೇ ಅವುಗಳನ್ನು ವಿಷಯೀಕರಿಸುವದೇ ಪ್ರಾಮಾಣ್ಯವು ಇಂಥ ಪ್ರಾಮಾಣ್ಯವು ಜ್ಞಾನಕ್ಕೆ ಮುಖ್ಯವಾಗಿರುವದು ಶಬ್ದಕ್ಕೂ ಇಂದ್ರಿಯ-ಲಿಂಗಾದಿಗಳಿಗಿಂತ ಮುಖ್ಯವಾಗಿರುವದು ಜ್ಞಾನವು ಎರಡು ವಿಧವಾದುದು ಅನುಭವರೂಪವಾದುದು ಅಂದರೆ ಸ್ವರೂಪಭೂತ ವಾದುದು ಒಂದು ಬಾಹ್ಯ ಅಂದರೆ ಮನೋವೃತ್ತಿರೂಪವಾದುದು ಇನ್ನೊಂದು. ಇವುಗಳಲ್ಲಿ ಅನುಭವರೂಪವಾದುದು ನಿರ್ದುಷ್ಟವಾದ್ದರಿಂದ ಪ್ರಬಲವು ಮನೋವೃತ್ತಿರೂಪವಾದ ಬಾಹ್ಯಜ್ಞಾನವು ಇಂದ್ರಿಯ, ಲಿಂಗ, ಶಬ್ದ ಇವುಗಳಿಂದ ಉಂಟಾಗುವದು ಪ್ರತ್ಯಕ್ಷ, ಅನುಮಾನ, ಆಗಮ ಈ ಮೂರೂ ಅನುಪ್ರಮಾಣಗಳು ಇವುಗಳಲ್ಲಿ ಔತ್ಸರ್ಗಿಕವಾಗಿ ಆಗಮವೇ ಪ್ರಬಲವು ಆದರೆ ಉಪಜೀವ್ಯಪ್ರಮಾಣದಿಂದ ವಿರೋಧವುಂಟಾದಾಗ ಆಗಮವೂ ಪ್ರಮಾಣವಾಗಲಾರದು (ಅದಕ್ಕೆ ಸಾವಕಾಶತ್ವವನ್ನು ಕಲ್ಪಿಸಬೇಕು)

**ವಿವರಣೆ**—ಅರ್ಥ ಅಂದರೆ ಪದಾರ್ಥಗಳು, ಅವು 'ಯಥಾ' ಅಂದರೆ ಹೇಗೆ ಇರುವವೋ ಹಾಗೆಯೇ ವಿಷಯೀಕರಿಸುವದು ಯಾಥಾರ್ಥ್ಯವು. ಉದಾಹರಣೆಗೆ 'ಹೂವಿನಮಾಲೆ' ಎಂಬ ಪದಾರ್ಥವನ್ನು 'ಹೂವಿನಮಾಲೆ' ಎಂದೇ ವಿಷಯೀಕರಿಸಿ ಜ್ಞಾನವುಂಟಾದರೆ ಅದು ಯಥಾರ್ಥವು ಆದರೆ 'ಹಗ್ಗದ ತುಂಡನ್ನು' 'ಹೂವಿನಮಾಲೆ' ಎಂದು ವಿಷಯೀಕರಿಸಿದರೆ ಅದು ಅಯಥಾರ್ಥವು ಈ ಯಾಥಾರ್ಥ್ಯವೇ ಪ್ರಾಮಾಣ್ಯವು. ಪದಾರ್ಥಗಳನ್ನು ಹೀಗೆ ವಿಷಯೀಕರಿಸುವದು ಜ್ಞಾನದ ಧರ್ಮವು ಆದ್ದರಿಂದ ಪ್ರಾಮಾಣ್ಯವು ಜ್ಞಾನಕ್ಕೇ ಮುಖ್ಯವಾದುದು ಅಂದರೆ ಜ್ಞಾನವೇ ಮುಖ್ಯವಾದ ಪ್ರಮಾಣವು ಇಂದ್ರಿಯ, ಲಿಂಗ ಮತ್ತು ಶಬ್ದಗಳು ಜ್ಞಾನದ್ವಾರಾ ಪದಾರ್ಥಗಳನ್ನು ವಿಷಯೀಕರಿಸುವದರಿಂದ ಅವುಗಳಿಗಿರುವ ಪ್ರಾಮಾಣ್ಯವು ಅಮುಖ್ಯವಾದುದು ಅಂದರೆ ಅವು ಆಯಾ ಜ್ಞಾನದ್ವಾರಾ ಪ್ರಮಾಣಗಳು. ಹೀಗೆ ಜ್ಞಾನ ಮತ್ತು ಜ್ಞಾನಕರಣಗಳಾದ ಇಂದ್ರಿಯಾದಿಗಳು ಇವೆರಡೂ ಪ್ರಮಾಣಗಳು. ಪದಾರ್ಥಗಳನ್ನು ವಿಷಯೀಕರಿಸುವದು ಎರಡಕ್ಕೂ ಇರುವದು ಆದರೆ ಜ್ಞಾನವು ಸಾಕ್ಷಾತ್ತಾಗಿ ವಿಷಯೀಕರಿಸುವದು ; ಆದುದರಿಂದ ಮುಖ್ಯವಾಗಿ ಪ್ರಮಾಣವು. ಇಂದ್ರಿಯ, ಲಿಂಗ, ಶಬ್ದಗಳು ಜ್ಞಾನದ್ವಾರಾ ವಿಷಯೀಕರಿಸುವವು ; ಆದ್ದರಿಂದ ಅಮುಖ್ಯವಾಗಿ ಜ್ಞಾನಕರಣರೂಪವಾದ ಪ್ರಮಾಣಗಳು. ಇಂದ್ರಿಯ, ಲಿಂಗ, ಶಬ್ದಗಳಲ್ಲಿಯೂ ಶಬ್ದ ಅಂದರೆ ಅಪೌರುಷೇಯಾಗಮರೂಪವಾದ ಶಬ್ದವು ಇಂದ್ರಿಯ ಮತ್ತು ಲಿಂಗಗಳಿಗಿಂತ ಮುಖ್ಯವಾದುದು ಯಾಕಂದರೆ ಇದು ನಿರ್ದುಷ್ಟವಾಗಿರುವದು. ಜ್ಞಾನವು ಸ್ವರೂಪಜ್ಞಾನ ಮತ್ತು ಮನೋವೃತ್ತಿಜ್ಞಾನ ಎಂದು

ಎರಡು ವಿಧ ಇವುಗಳಲ್ಲಿ ಸ್ವರೂಪಜ್ಞಾನವು ಪ್ರಬಲವಾದುದು ಇಂದ್ರಿಯ, ಲಿಂಗ ಮತ್ತು ಶಬ್ದಗಳು ಅನುಪ್ರಮಾಣಗಳು ಜ್ಞಾನವು ಕೇವಲ ಪ್ರಮಾಣವು ಅನುಪ್ರಮಾಣಗಳಲ್ಲಿ ಆಗಮವು ಔತ್ಸರ್ಗಿಕವಾಗಿ ಪ್ರಮಾಣವು. ಆದರೆ ಉಪಜೀವ್ಯ, ನಿರವಕಾಶಾದಿ ಪ್ರಮಾಣಗಳ ವಿರೋಧವಿದ್ದರೆ ಅದೂ ಪ್ರಮಾಣವಾಗಲಾರದು

**ಪರಾರ್ಥಾನುಮಾನದಲ್ಲಿ ಅವಯುವಸಂಖ್ಯಾನಿಯಮ ಅಗತ್ಯವಿಲ್ಲ.**

**25. ಯಾಮಾಹುರನುಮಾಂ ಕೇಚಿತ್ ತ್ರಿಯಾದ್ಯವಯಾತ್ಮಿಕಾಮ್ ।**
**ಸಾ ವ್ಯರ್ಥಾ ನೋಪಪತ್ತ್ಯಾಹಿ ವಿನಾ ಸಾಪಿ ಪ್ರಮಾಣತಾಮ್ ।**
**ಯಾತ್ಯತೋ ಯುಕ್ತಿರೇವೈಕಾ ಪ್ರಮಾಣಮನುಮಾತ್ಮಕಮ್ ।**
**ಯುಕ್ತಿಃ ಪ್ರತಿಜ್ಞಾರೂಪಾ ಚ ಹೇತುದೃಷ್ಟಾಂತರೂಪಿಕಾ ।**
**ತಥೋಪನಯರೂಪಾ ಚ ಪರಾ ನಿಗಮನಾತ್ಮಿಕಾ ।**
**ಪೃಥಕ್ ಪೃಥಕ್ ಪ್ರಮಾಣತ್ವಂ ಯಾತಿ ಯುಕ್ತಿತಯೈವ ತು ।**

**ಅನುವಾದ**—ಪರರಿಗೆ ವ್ಯಾಪ್ತ್ಯಾದಿಜ್ಞಾನವನ್ನು ಮಾಡಿಕೊಡುವ ಉಪದೇಶ ವಾಕ್ಯರೂಪವಾದ ಪರಾರ್ಥಾನುಮಾನವು ಮೂರು ಅವಯುವಗಳಿಂದ ಕೂಡಿರಬೇಕು ಎಂದು ಕೆಲವರು ಹೇಳುವರು ಹೀಗೆ ಇಷ್ಟೇ ಅವಯುವಗಳಿರಬೇಕೆಂದು ಹೇಳುವದು ವ್ಯರ್ಥವು ಯಾಕಂದರೆ ವ್ಯಾಪ್ತ್ಯಾದಿವಿಶಿಷ್ಟವಾದ. ಹೇತುವೇ ಉಪಪತ್ತಿ ಅಥವಾ ಯುಕ್ತಿಯು ಈ ಯುಕ್ತಿಯ ಸ್ಮರಣೆ ಅಥವಾ ಜಿಜ್ಞಾಸೆಯನ್ನುಂಟುಮಾಡಿಯೇ ಪರಾರ್ಥಾನುಮಾನದ ಉಪದೇಶವಾಕ್ಯವು ಪ್ರಯೋಜನಕಾರಿಯಾಗುವದು ಆದ್ದರಿಂದ ಈ ವ್ಯಾಪ್ತ್ಯಾದಿವಿಶಿಷ್ಟಹೇತುರೂಪವಾದ ಯುಕ್ತಿಯ ಸ್ಮರಣ ಅಥವಾ ಜಿಜ್ಞಾಸೆಯನ್ನು ಮಾಡಿಕೊಡಲು ಎಷ್ಟು ಅಗತ್ಯವೋ ಅಷ್ಟು ಮಾತ್ರವಾದ ಪರೋಪದೇಶರೂಪವಾದ ವಾಕ್ಯವು ಪರಾರ್ಥಾನುಮಾನವು. ವ್ಯಾಪ್ತ್ಯಾದಿವಿಶಿಷ್ಟರೂಪವಾದ ಹೇತುರೂಪವಾದ ಈ ಯುಕ್ತಿಯ ಸ್ಮರಣೆ ಅಥವಾ ಜಿಜ್ಞಾಸೆಯು ಕೆಲವು ಕಡೆ ಕೇವಲ ಪ್ರತಿಜ್ಞಾವಾಕ್ಯದಿಂದ ಆಗಬಹುದು, ಕೆಲವು ಕಡೆ ಕೇವಲ ಹೇತು, ಉದಾಹರಣ, ಉಪನಯ ಅಥವಾ ನಿಗಮನ ವಾಕ್ಯದಿಂದ ಆಗಬಹುದು ಆದ್ದರಿಂದ ಇವು ಪ್ರತಿಯೊಂದೂ ಯುಕ್ತಿಯ ಸ್ಮರಣೆ ಅಥವಾ ಜಿಜ್ಞಾಸೆಗೆ ಕಾರಣವಾಗಿ ಪ್ರತ್ಯೇಕ ಪ್ರತ್ಯೇಕವಾಗಿಯೇ ಉಪಯುಕ್ತವಾಗುವವು (ಆದ್ದರಿಂದ ಪರಾರ್ಥಾನುಮಾನದಲ್ಲಿ ಐದು ಅವಯುವಗಳು ನಿಯಮೇನ ಇರಬೇಕು. ಅಥವಾ ಮೂರಾದರೂ ನಿಯಮೇನ ಇರಬೇಕು ಎಂದು ಹೇಳುವದು ಸರಿಯಲ್ಲ)

**ವಿವರಣೆ**—ಅನುಮಾನವು ಸ್ವಾರ್ಥ, ಪರಾರ್ಥ ಎಂದು ಎರಡು ವಿಧ ಸ್ವತಃ ತಾನೇ ವ್ಯಾಪ್ತಿಯನ್ನು ತಿಳಿದುಕೊಂಡು, ವ್ಯಾಪ್ಯವಾದದ್ದನ್ನು ಕಂಡು ವ್ಯಾಪ್ತಿಯ ಸ್ಮರಣೆಯನ್ನು ಪಡೆದು, ವ್ಯಾಪ್ಯತ್ವದ ಅನುಸಂಧಾನವನ್ನು ಮಾಡಿಕೊಂಡು ವ್ಯಾಪಕದ ಪ್ರಮಿತಿಯನ್ನು ಪಡೆಯುವದು ಸ್ವಾರ್ಥಾನುಮಾನವು ಉದಾಹರಣೆಗೆ ವಹ್ನಿ ಮತ್ತು ಧೂಮಗಳ

ವ್ಯಾಪ್ತಿಜ್ಞಾನವನ್ನು ಮಾಡಿಕೊಂಡು, ಪರ್ವತದ ಮೇಲೆ ವ್ಯಾಪ್ಯವಾದ ಧೂಮವನ್ನು ಕಂಡು, ಅದು ವಹ್ನಿಯೊಡನೆ ವ್ಯಾಪ್ತಿಯುಳ್ಳದ್ದಾಗಿದೆ ಎಂದು ವ್ಯಾಪ್ತಿಸ್ಮರಣವನ್ನು ಮಾಡಿಕೊಂಡು, ವ್ಯಾಪ್ಯವಾದ ಧೂಮದಿಂದ ವ್ಯಾಪಕವಾದ ವಹ್ನಿಯ ಪ್ರಮಿತಿಯನ್ನು ಪಡೆಯುವದು ಇದು ಸ್ವಾರ್ಥಾನುಮಾನವು ಇದರಲ್ಲಿ ಪರರಿಂದ ಉಪದೇಶವಿರುವದಿಲ್ಲ. ಪರಾರ್ಥಾನುಮಾನವು ಪರೋಪದೇಶದಿಂದ ಆಗುವದು. ಇದರಲ್ಲಿ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ ಎಂಬ ಐದು ಅವಯವಗಳು ಅಥವಾ ಅವಾಂತರ ವಾಕ್ಯಗಳಿರುವವು ಪ್ರತಿಜ್ಞಾ ಅಂದರೆ ಪರ್ವತದ ಮೇಲೆ ವಹ್ನಿಯಿದೆ ಎಂದು ಪ್ರತಿಜ್ಞೆ ಮಾಡುವದು ಹೇತು ಅಂದರೆ ಯಾಕೆಂದರೆ ಅಲ್ಲಿ ಧೂಮವಿದೆ ಎಂದು ಹೇತುವನ್ನು ಕೊಡುವದು. ಉದಾಹರಣ ಅಂದರೆ ಧೂಮವಿದ್ದಲ್ಲೆಲ್ಲ ವಹ್ನಿಯಿದ್ದದ್ದು ಕಂಡುಬರುತ್ತದೆ, ಅಡಿಗೆ ಮನೆಯಲ್ಲಿ ಇದು ಕಂಡುಬಂದಿದ ಎಂದು ಒಂದು ದೃಷ್ಟಾಂತವನ್ನು ವ್ಯಾಪ್ತಿಪ್ರದರ್ಶನ ಪೂರ್ವಕವಾಗಿ ಕೊಡುವದು ಉಪನಯ ಅಂದರೆ ಪರ್ವತದಲ್ಲಿಯೂ ವಹ್ನಿಯಿಂದ ವ್ಯಾಪ್ತಿಯನ್ನು ಪಡೆದ ಧೂಮವಿದೆ ಎಂದು ತಿಳಿಸುವದು ನಿಗಮನ ಅಂದರೆ ಆದ್ದರಿಂದ ಪರ್ವತದಲ್ಲಿಯೂ ವಹ್ನಿಯಿದೆ ಎಂಬ ನಿರ್ಣಯಕ್ಕೆ ಬರುವದು. ಈ ಐದೂ ಅವಯವ ಅಥವಾ ಅವಾಂತರವಾಕ್ಯಗಳು ಅತ್ಯಗತ್ಯ ಎಂದು ಕೆಲವರ ಅಭಿಪ್ರಾಯ ಈ ಐದರಲ್ಲಿ ಪ್ರತಿಜ್ಞಾ, ಹೇತು, ಉದಾಹರಣ ಈ ಮೂರು ಇದ್ದರೆ ಸಾಕು ಎಂದು ಇನ್ನು ಕೆಲವರ ಮತ ಉದಾಹರಣ, ಉಪನಯ, ನಿಗಮನ ಈ ಮೂರಿದ್ದರೆ ಸಾಕು ಎಂದು ಇನ್ನೂ ಕೆಲವರ ಮತ. ಉದಾಹರಣ, ಉಪನಯ ಎರಡೇ ಸಾಕು ಎಂದು ಕೆಲವರ ಅಭಿಪ್ರಾಯ ಹೀಗೆ ಐದೇ ಅಥವಾ ಮೂರೇ ಅಥವಾ ಎರಡೇ ಇರಬೇಕೆಂಬ ನಿಯಮವೇ ಅಗತ್ಯವಿಲ್ಲ ಎಂಬುದು ಶ್ರೀಮದಾಚಾರ್ಯರ ಮತ.

ಪರಾರ್ಥಾನುಮಾನದ ಪರೋಪದೇಶವು ಈಗಾಗಲೇ ವ್ಯಾಪ್ತ್ಯಾದಿಗಳನ್ನು ತಿಳಿದವ ನಿಗೆ ಅದರ ನೆನಪು ಮಾಡಿಕೊಡುವದು ತಿಳಿಯದಿದ್ದವರಿಗೆ ಅದರ ವಿಷಯದಲ್ಲಿ ಜಿಜ್ಞಾಸೆ ಯನ್ನು ಹುಟ್ಟಿಸುವದು.

ವ್ಯಾಪ್ತ್ಯಾದಿವಿಶಿಷ್ಟವಾದ ಹೇತುವೇ ನಿಜವಾದ ಅನುಮಿತಿಜನಕವು. ಆದ್ದರಿಂದ ಈ ವ್ಯಾಪ್ತ್ಯಾದಿವಿಶಿಷ್ಟವಾದ ಹೇತುವಿನ ಸ್ಮರಣೆಯನ್ನು ಮಾಡಿಕೊಡಲು ಅಥವಾ ಅದರ ಜಿಜ್ಞಾಸೆಯನ್ನು ಹುಟ್ಟಿಸಲು ಯಾವ ಅವಯವ ವಾಕ್ಯವು ಬೇಕೋ ಅಥವಾ ಎಷ್ಟು ಅವಯವ ವಾಕ್ಯಗಳು ಬೇಕೋ ಅಷ್ಟಿದ್ದರೆ ಸಾಕು ಐದೂ ಇರಬೇಕು, ಮೂರೇ ಇರಬೇಕು, ಅಥವಾ ಎರಡೇ ಇರಬೇಕು ಎಂದು ನಿಯಮನ ಮಾಡುವದು ನಿರರ್ಥಕವಾದುದು ಎಂಬುದು ಶ್ರೀಮದಾಚಾರ್ಯರ ಅಭಿಪ್ರಾಯವು. ಹೀಗೆ ಅಗತ್ಯವಾದುದು ಕೆಲವು ಕಡೆ ಪ್ರತಿಜ್ಞೆ ಮಾತ್ರ ಇರಬಹುದು. ಉದಾಹರಣೆಗೆ ಪರ್ವತದಲ್ಲಿ ವಹ್ನಿಯಿದೆ ಎಂದು ಪ್ರತಿಜ್ಞೆ ಯನ್ನು ಮಾಡಿದಕೂಡಲೇ ಒಬ್ಬನಿಗೆ ವಹ್ನಿಧೂಮಗಳ ವ್ಯಾಪ್ತ್ಯಾದಿಗಳೆಲ್ಲವೂ ನೆನಪಾಗಿ ಅನುಮಿತಿಯುಂಟಾಗಬಹುದು. ಇನ್ನೊಬ್ಬನಿಗೆ ಹೇತುವಾದ ಧೂಮವಿರುವದನ್ನು ಹೇಳು ವದರಿಂದ ಎಲ್ಲವೂ ನೆನಪಾಗಬಹುದು. ಮತ್ತೆ ಕೆಲವರಿಗೆ ಒಂದಕ್ಕಿಂತ ಹೆಚ್ಚಿನ ಅಥವಾ

ಐದೂ ಅವಯವ ವಾಕ್ಯಗಳ ಅಗತ್ಯವಿರಬಹುದು ಆದ್ದರಿಂದ ವ್ಯಾಪ್ತ್ಯಾದಿವಿಶಿಷ್ಟವಾದ ಹೇತುವಿನ ಬೋಧವು ಒದಗಲು ಎಷ್ಟು ಬೇಕೋ ಅಷ್ಟು ಇರುವ ಪರೋಪದೇಶದಿಂದ ಒದಗುವ ಯುಕ್ತಿ ಅಂದರೆ ವ್ಯಾಪ್ತ್ಯಾದಿವಿಶಿಷ್ಟವಾದ ಹೇತುವೇ ಪರಾರ್ಥಾನುಮಾನವೆಂದು ಹೇಳುವದು ಉಚಿತವು

**ಪ್ರತಿಜ್ಞಾದಿಗಳು ಪ್ರತ್ಯೇಕವಾಗಿಯೇ ಉಪಪತ್ತಿಸ್ಮಾರಕಗಳಾಗಬಲ್ಲವು.**

**26.** ಪ್ರತಿಜ್ಞಾ ಹೇತುಗರ್ಭೈವ ಪೃಥಕ್‌ಪ್ರಾಮಾಣ್ಯಮೇಷ್ಯತಿ ।
ಸಿದ್ಧತ್ವೇನ ಪ್ರತಿಜ್ಞಾಯಾ ಹೇತುಮಾನಂ ಪೃಥಗ್‌ಭವೇತ್ ॥
ಪ್ರತಿಜ್ಞಾsವಯವತ್ವಾತ್ತು ಸ್ವಾತಂತ್ರ್ಯೇಣೈವ ಮಾನತಾಮ್ ।
ದೃಷ್ಟಾಂತೋ ಯಾತ್ಯುಪನಯೋ ವ್ಯಾಪ್ತಿಮಾಶ್ರಿತ್ಯ ಕೇವಲಮ್ ॥
ವ್ಯಾಪ್ತಿಸ್ತು ಕೇವಲಾಪಿ ಸ್ಯಾತ್ ಪ್ರಮಾಣಂ ನಿಯಮಾಶ್ರಯಾತ್ ।
ತಥಾ ನಿಗಮನಂ ಚೋಪಸಂಹಾರೈಕಸ್ವರೂಪತಃ ॥
ಪ್ರಾಮಾಣ್ಯಂ ಯಾತ್ಯನುಭವೋ ಜ್ಞಾಪಯತ್ಯುಪಪತ್ತಿತಾಮ್ ॥

**ಅನುವಾದ**—ಪ್ರತಿಜ್ಞೆಯು ಹೇತುವನ್ನು ತಿಳಿಸುವ ವಿಶೇಷಣದಿಂದ ಕೂಡಿದಾಗ ಅವಯವಾಂತರಗಳ ಅಪೇಕ್ಷೆಯಿಲ್ಲದೆ ವ್ಯಾಪ್ತ್ಯಾದಿವಿಶಿಷ್ಟಹೇತುಸ್ಮಾರಕ ಪರಾರ್ಥಾನುಮಾನ ವಾಗುವದು. ವಿವಾದದ ವಿಷಯರೂಪವಾಗಿ ಅಥವಾ ಪ್ರಶ್ನವಾಕ್ಯದಿಂದ ಪ್ರತಿಜ್ಞೆಯು ಬುದ್ಧಿಸ್ಥವಾದಾಗ ಹೇತುವಾಕ್ಯವು ಅವಯವಾಂತರಗಳ ಅಪೇಕ್ಷೆಯಿಲ್ಲದ ಮಾನ ಅಂದರೆ ವ್ಯಾಪ್ತ್ಯಾದಿವಿಶಿಷ್ಟವಾದ ಹೇತುಸ್ಮಾರಕ ಪರಾರ್ಥಾನುಮಾನವಾಗುವದು. ವಿವಾದ ವಿಷಯವಾಗಿ ಅಥವಾ ಪ್ರಶ್ನವಾಕ್ಯದಿಂದ ಬುದ್ಧಿಸ್ಥವಾದ ಪ್ರತಿಜ್ಞೆಯು ಸಹಕಾರವಿದ್ದು, ಈ ಪ್ರತಿಜ್ಞೆಯು ಹೇತುಗರ್ಭವಾಗಿದ್ದು, ಹೇತುವಿನ ಉಪಸ್ಥಿತಿಯೂ ಇದ್ದಾಗ ದೃಷ್ಟಾಂತ ಅಂದರೆ ಉದಾಹರಣ ವಾಕ್ಯವು ಅವಯವಾಂತರಗಳ ಅಪೇಕ್ಷೆಯಿಲ್ಲದೆ ಪರಾರ್ಥಾನುಮಾನ ರೂಪಪ್ರಮಾಣವಾಗುವದು ಉಪನಯವೂ ಕೂಡ ವ್ಯಾಪ್ತಿವಚನವುಳ್ಳದ್ದಾಗಿದ್ದರೆ, ದೃಷ್ಟಾಂತದ ಅಪೇಕ್ಷೆಯಿಲ್ಲದೆ ಪರಾರ್ಥಾನುಮಾನವಾಗುವದು ಇದು ಒಂದು ವಿಧವು. ವ್ಯಾಪ್ತಿವಚನವಿಲ್ಲದೆಯೇ ಉಪನಯವು ಪರಾರ್ಥಾನುಮಾನವಾಗುವದು ಇನ್ನೊಂದು ವಿಧವು ನಿಗಮನವೂ ಕೂಡ ಸರ್ವಾರ್ಥಸಂಗ್ರಾಹಕವಾದ್ದರಿಂದ ಅವಯವಾಂತರಗಳ ಅಪೇಕ್ಷೆಯಿಲ್ಲದೆ ಪರಾರ್ಥಾನುಮಾನವಾಗುವದು ಹೀಗೆ ಒಂದೊಂದೇ ಅವಯವಗಳು ಪ್ರತ್ಯೇಕ ಪ್ರತ್ಯೇಕವಾಗಿ ವ್ಯಾಪ್ತ್ಯಾದಿವಿಶಿಷ್ಟಹೇತುಸ್ಮಾರಕವಾಗಿ ಪರಾರ್ಥಾನುಮಾನ ವಾಗಿರುವದು ಅನುಭವದಿಂದ ಸಿದ್ಧವಾಗಿರುವದು

**ವಿವರಣೆ**—ಪರಾರ್ಥಾನುಮಾನದ ಅಂಗವಾಗಿ ಐದೂ ಅವಯವವಾಕ್ಯಗಳು, ಮೂರು ಅವಯವವಾಕ್ಯಗಳು, ಅಥವಾ ಎರಡಾದರೂ ಅವಯವವಾಕ್ಯಗಳು ಇರಬೇಕೆಂಬ ನಿಯಮವಿಲ್ಲ. ಒಂದೊಂದೇ ಪ್ರತ್ಯೇಕ ಪ್ರತ್ಯೇಕವಾಗಿ ಪರಾರ್ಥಾನುಮಾನವಾಗಬಹುದು

ಎಂದು ಮೇಲೆ ಹೇಳಿದರು ಈಗ ಅದನ್ನು ಸಮರ್ಥಿಸುವರು. ಅನುಮಾನಕ್ಕೆ ಮುಖ್ಯವಾಗಿ ಬೇಕಾದವು ವ್ಯಾಪ್ತಿಜ್ಞಾನ, ಪಕ್ಷಧರ್ಮತಾಜ್ಞಾನ. ಇವುಗಳನ್ನು ಪ್ರತಿಯೊಂದು ಪರಾರ್ಥಾನುಮಾನದಲ್ಲಿಯೂ ಒಂದೊಂದು ಪ್ರತ್ಯೇಕವಾಕ್ಯದಿಂದ (ಅಂದರೆ ಅವಯವವಾಕ್ಯದಿಂದ) ಹೇಳಲೇಬೇಕೆಂಬ ನಿಯಮವಿಲ್ಲ. ಇವುಗಳ ಬೋಧವಾದರೆ ಸಾಕು ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ ಇವು ಒಂದೊಂದೂ ಈ ಕಾರ್ಯವನ್ನು ಮಾಡಬಲ್ಲವು. ಉದಾಹರಣೆಗೆ 'ಧೂಮವಾನ್ ಪರ್ವತಃ ವಹ್ನಿಮಾನ್' ಎಂಬ ಪ್ರತಿಜ್ಞಾವಾಕ್ಯದಿಂದ ಈ ಕಾರ್ಯವಾಗುವದು ಇದು ಹೇತುಗರ್ಭವಾದ ಪ್ರತಿಜ್ಞಾವಾಕ್ಯವು. ಇದರಿಂದ ವ್ಯಾಪ್ತಿಸ್ಮರಣ, ಪಕ್ಷಧರ್ಮತಾಜ್ಞಾನ, ವ್ಯಾಪ್ತಿವಿಶಿಷ್ಟಪಕ್ಷಧರ್ಮತಾಜ್ಞಾನ ಆಗುವವು ಆದ್ದರಿಂದ ಇದು ವ್ಯಾಪ್ತ್ಯಾದಿವಿಶಿಷ್ಟಹೇತುಸ್ಮಾರಕಯುಕ್ತಿರೂಪವಾದ ಪರಾರ್ಥಾನುಮಾನವು ಇದರಂತೆಯೇ 'ಧೂಮಾತ್' ಎಂಬ ಹೇತುವಾಕ್ಯವನ್ನು ಹೇಳಿದಾಗ 'ಪರ್ವತಸ್ಯ ಅಗ್ನಿಮತ್ತ್ವಂ ಕುತಃ' ಎಂಬ ಪ್ರಶ್ನವಾಕ್ಯದಿಂದ ಪ್ರತಿಜ್ಞೆಯು ಈಗಾಗಲೇ ಬುದ್ಧಿಸ್ಥವಾಗಿರುವದರಿಂದ ವ್ಯಾಪ್ತಿಸ್ಮರಣ, ಪಕ್ಷಧರ್ಮತಾಜ್ಞಾನಾದಿಗಳಾಗಿ ಪರಾರ್ಥಾನುಮಾನವುಂಟಾಗುವದು ಬೇರೆ ಅವಯವಗಳ ಪೃಥಕ್ ನಿರ್ದೇಶನ ಅಗತ್ಯವಿಲ್ಲ. ಇದರಂತೆಯೇ ಉದಾಹರಣ, ಉಪನಯ, ನಿಗಮನ ವಾಕ್ಯಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಪರಾರ್ಥಾನುಮಾನವಾಗಬಲ್ಲವು ಎಂಬುದು ಅನುಭವಸಿದ್ಧವಾಗಿದೆ

**ವಿರೋಧಾದಿ ಉಪಪತ್ತಿದೋಷಗಳ ನಿರೂಪಣೆ.**

**27.** **ವಿರೋಧಶ್ಚ ತಥಾಧಿಕ್ಯಂ ನ್ಯೂನತಾಸಂಗತಿಸ್ತಥಾ ।**
**ಉಪಪತ್ತಿದೋಷಾ ವಿಜ್ಞೇಯಾ ವಿರೋಧಶ್ಚ ಸ್ವತೋಽನ್ಯತಃ ॥**
**ಜನಕಸ್ಯಾತ್ಯಯೋ ಜಾತಿಃ ಸ್ವಸ್ಯ ವಾಽನ್ಯಸ್ಯ ವಾ ಭವೇತ್ ।**
**ಜನಕಂ ಪ್ರಮಾಣಮುದ್ದಿಷ್ಟಂ ಸ್ವಸ್ಯಾರ್ಥಸ್ಯ ಪ್ರಕಾಶನಾತ್ ।**
**ನಿಗ್ರಹಾ ಏತ ಏವ ಸ್ಯುಃ ಸಂವಾದಾನುಕ್ತಿಸಂಯುತಾಃ ॥**

**ಅನುವಾದ**—ವಿರೋಧ, ಆಧಿಕ್ಯ, ನ್ಯೂನತಾ ಮತ್ತು ಅಸಂಗತಿ ಇವು ಉಪಪತ್ತಿ ಅಥವಾ ಯುಕ್ತಿಯ ದೋಷಗಳು ವಿರೋಧವು ಸ್ವತಃ ವಿರೋಧವು ಮತ್ತು ಪ್ರಮಾಣಾಂತರದಿಂದ ವಿರೋಧವು ಎಂದು ಎರಡು ವಿಧವಾದುದು ಸ್ವವ್ಯಾಹತಿಯು ಜಾತಿಯು, (ಸ್ವಸ್ಯ ಅಂದರೆ ಸ್ವವಚನದ, ಅನ್ಯಸ್ಯ ಅಂದರೆ ಸ್ವಕ್ರಿಯೆಯ ಮತ್ತು ಸ್ವನ್ಯಾಯದ ಜನಕಸ್ಯ ಅಂದರೆ ಈ ಎರಡು ವಿಧವಾದ ಜ್ಞಾಪಕಗಳ ಅತಿ ಅಂದರೆ ಅತಿಕ್ರಮಣ ಮಾಡುವದೇ ಜಾತಿಯು. ಅಂದರೆ ಸ್ವವಚನ, ಸ್ವಕ್ರಿಯಾ ಮತ್ತು ಸ್ವನ್ಯಾಯಗಳ ಅತಿಕ್ರಮಣರೂಪವಾದ ಸ್ವವ್ಯಾಹತಿಯೇ ಜಾತಿಯು) ಜನಕ ಅಂದರೆ ಜ್ಞಾಪಕವು, ತನ್ನ ಅರ್ಥವನ್ನು ಪ್ರಕಾಶಿಸುವದು ಎಂದು ಅರ್ಥವು. ನಿಗ್ರಹಸ್ಥಾನಗಳೂ ಕೂಡ ಸಂವಾದ, ಅನುಕ್ತಿಸಹಿತವಾದ ಮೇಲೆ ಹೇಳಿದ ವಿರೋಧಾದಿಗಳಲ್ಲಿಯೇ ಅಂತರ್ಭಾವವನ್ನು ಹೊಂದುವವು

**ವಿವರಣೆ**—ನಿರ್ದುಷ್ಟವಾದ ಉಪಪತ್ತಿಯು ಅನುಮಾನ ಎಂದು ಹೇಳಿದ ಮೇಲೆ ಉಪಪತ್ತಿದೋಷಗಳು ಯಾವವು ಎಂದು ಹೇಳುವದು ಕ್ರಮಪ್ರಾಪ್ತವಾಗುವದು ಆದ್ದರಿಂದ ಅವುಗಳನ್ನು ಈಗ ಹೇಳುವರು ಪರಸ್ಪರ ಅನ್ವಯವಾಗುವ ಯೋಗ್ಯತೆ ಇಲ್ಲದೇ ಇರುವದೇ ವಿರೋಧವು ಆಕಾಂಕ್ಷೆಯು ಪೂರ್ತಿಯಾದ ಮೇಲೆಯೂ ಅಧಿಕವಾಗಿ ಹೇಳುವದು ಆಧಿಕ್ಯವು. ಹೇಳಬೇಕಾದ್ದನ್ನು ಪೂರ್ತಿಯಾಗಿ ಹೇಳದೇ ಇರುವದು ನ್ಯೂನತೆಯು ಪದಗಳಿಗೆ ಪರಸ್ಪರ ಆಕಾಂಕ್ಷೆಯಿಲ್ಲದಿರುವದು ಅಸಂಗತಿಯು. ಇವುಗಳಲ್ಲಿ ವಿರೋಧ ಮತ್ತು ಅಸಂಗತಿಗಳು ಅರ್ಥದೋಷಗಳು ಅರ್ಥದ್ವಾರಾ ಶಬ್ದದೋಷಗಳೂ ಆಗುವವು ನ್ಯೂನತೆ ಮತ್ತು ಆಧಿಕ್ಯಗಳು ಶಬ್ದದೋಷಗಳು ಶಬ್ದದ್ವಾರಾ ಅರ್ಥದೋಷಗಳೂ ಆಗುವವು ವಿರೋಧವು ಎರಡು ವಿಧವಾದುದು ಸ್ವತಃ ವಿರುದ್ಧವಾದುದು ಮತ್ತು ಪ್ರಮಾಣಾಂತರದಿಂದ ವಿರುದ್ಧವಾದುದು ಸ್ವವಚನ ವಿರೋಧ, ಸ್ವಕ್ರಿಯಾವಿರೋಧ, ಸ್ವನ್ಯಾಯವಿರೋಧ, ಸ್ವಾಭ್ಯುಪಗಮವಿರೋಧ ಅಂದರೆ ತಾನು ಅಂಗೀಕರಿಸಿದ್ದಕ್ಕೇ ವಿರುದ್ಧವಾಗಿರುವದು ಇವೆಲ್ಲ ಸ್ವತಃ ವಿರುದ್ಧವಾಗುವದರ ಪ್ರಕಾರಗಳು ಕಾಲಾತ್ಯಯಾಪದಿಷ್ಟವೇ ಮೊದಲಾದ ಅನುಮಾನದೋಷಗಳು ಇವುಗಳಲ್ಲಿಯೇ ಅಂತರ್ಭಾವವಾಗುವವು ಉದಾಹರಣೆಗೆ 'ಜಾತಿ' ಎಂಬ ದೋಷವನ್ನು ಇಲ್ಲಿ ಪರಿಶೀಲಿಸಲಾಗಿದೆ. 'ಜಾತಿ' ಎಂಬ ಪದದಲ್ಲಿಯ 'ಜ' ಅಂದರೆ ಜ್ಞಾಪಕವಾಕ್ಯವು, ಅತಿ ಅಂದರೆ ಅತಿಕ್ರಮಿಸುವದು ತನ್ನ ಅಂದರೆ ಸ್ವವಚನದ, ಅನ್ಯದ್ ಅಂದರೆ ಸ್ವಕ್ರಿಯೆ, ಸ್ವನ್ಯಾಯಗಳ ಜ್ಞಾಪಕವಾದ ವಾಕ್ಯವು ಅತಿ ಅಂದರೆ ಅದಕ್ಕೆ ವಿರುದ್ಧವಾದುದನ್ನು ಹೇಳಿದರೆ ಅದು 'ಜಾತಿ' ಎಂಬ ದೋಷವೆನಿಸುವದು. ಇದು ಸ್ವವಚನ ವಿರೋಧ, ಸ್ವಕ್ರಿಯಾವಿರೋಧ ಮತ್ತು ಸ್ವನ್ಯಾಯವಿರೋಧ ಎಂದು ಮೂರು ವಿಧವಾಗಿ ಇರುವದು ಆದ್ದರಿಂದ ಈ 'ಜಾತಿ' ಎಂಬ ದೋಷವು 'ಸ್ವತಃ ವಿರೋಧ' ಎಂಬ ಮೇಲೆ ಹೇಳಿದ ವಿರೋಧದ ಪ್ರಕಾರದಲ್ಲಿಯೇ ಬರುವದು ನಿಗ್ರಹಸ್ಥಾನಗಳೂ ಈ ವಿರೋಧಾದಿ ದೋಷಗಳಲ್ಲಿಯೇ ಅಂತರ್ಭೂತವಾಗುವವು ಮೇಲೆ ಹೇಳಿದ ವಿರೋಧ, ಅಧಿಕ, ನ್ಯೂನ ಮತ್ತು ಅಸಂಗತಿಗಳ ಜೊತೆಗೆ ಸಂವಾದ ಮತ್ತು ಅನುಕ್ತಿಗಳನ್ನೂ ಸೇರಿಸಿಕೊಳ್ಳಬೇಕು.

**ಅರ್ಥಾಪತ್ತ್ಯಾದಿಪ್ರಮಾಣಗಳ ಅಂತರ್ಭಾವ.**

**28.** **ಅರ್ಥತಃ ಪ್ರಾಪ್ತಿರೇವಾರ್ಥಾಪತ್ತಿರಿತ್ಯಭಿಧೀಯತೇ ।**
**ದೃಷ್ಟ್ವಾ ಸದೃಶಮೇವಾನ್ಯಂ ಪೂರ್ವದೃಷ್ಟೇ ತು ವಸ್ತುನಿ ॥**
**ಏತತ್ಸದೃಶತಾಜ್ಞಾನಮುಪಮಾನಂ ಪ್ರಕೀರ್ತಿತಮ್ ।**
**ಅಭಾವಸ್ಯ ಪರಿಜ್ಞಾನಂ ದ್ವಿವಿಧಂ ಸಮುದಾಹೃತಮ್ ।**
**ಏಕಂ ತತ್ರಾನುಭವತೋ ಯೋಗ್ಯಸ್ಯಾನುಪಲಬ್ಧಿತಃ ॥**
**ದ್ವಿತೀಯಮಪಿ ವಿಜ್ಞೇಯಂ ಸುಖಾದ್ಯೇ ಚ ಘಟಾದಿಕೇ ।**
**ಏಕಂ ಪ್ರತ್ಯಕ್ಷರೂಪಂ ಸ್ಯಾದ್ ದ್ವಿತೀಯಮನುಮಾತ್ಮಕಮ್ ।**
**ಕ್ವಚಿದ್ಘಟಾದ್ಯಭಾವೋಽಪಿ ಪ್ರತ್ಯಕ್ಷೇಣಾವಗಮ್ಯತೇ ।**

**ಝ್ಯಟಿತ್ಯೇವ ಪರಿಜ್ಞಾನಾತ್ ನ ಲಿಂಗೋದ್ಭವತಾ ಮತಾ ।**
**ಅರ್ಥಾಪತ್ತಿಶ್ಚೋಪಮಾ ಚ ಹಿ ಅನುಮಾಭೇದ ಏವ ತು ॥**

**ಅನುವಾದ**—ಅನುಪಪದ್ಯಮಾನವಾದ ಅರ್ಥವನ್ನು ಉಪಪಾದಿಸಲು ಅದಕ್ಕೆ ಉಪಪಾದಕವಾದ ಇನ್ನೊಂದು ಅರ್ಥವನ್ನು ಕಲ್ಪಿಸುವದು ಅರ್ಥಾಪತ್ತಿಯು (ಹಗಲು ಊಟಮಾಡದಿದ್ದರೂ ದೇವದತ್ತನು ದಷ್ಟಪುಷ್ಟನಾಗಿರುವದನ್ನು ಉಪಪಾದಿಸಲು ಅವನು ರಾತ್ರಿ ಊಟಮಾಡುವನು ಎಂದು ಕಲ್ಪಿಸುವದು ಅರ್ಥಾಪತ್ತಿಯು) ಸದೃಶವಾದ ಇನ್ನೊಂದು ವಸ್ತುವನ್ನು ನೋಡಿ ಈ ಮೊದಲು ನೋಡಿದ್ದರಲ್ಲಿರುವ ಅದರ ಸಾದೃಶ್ಯ ಜ್ಞಾನವು ಉಪಮಾನವು (ಗ್ರಾಮದಲ್ಲಿರುವ ಆಕಳಿಗೆ ಸದೃಶವಾದ ಅಡವಿಯ ಆಕಳನ್ನು ನೋಡಿ ಗ್ರಾಮದಲ್ಲಿರುವ ಆಕಳಿನಲ್ಲಿದ್ದ ಅಡವಿಯ ಆಕಳದ ಸಾದೃಶ್ಯದ ಜ್ಞಾನವನ್ನು ಪಡೆಯುವದು ಉಪಮಾನವು ಎದುರಿಗಿದ್ದ ಅಡವಿಯ ಆಕಳದಲ್ಲಿದ್ದ ಗ್ರಾಮದ ಆಕಳದ ಸಾದೃಶ್ಯವು ಪ್ರತ್ಯಕ್ಷವಾಗಿಯೇ ಇದೆ ಆದರೆ ಗ್ರಾಮದ ಆಕಳು ಈಗ ಎದುರಿಗಿಲ್ಲ. ಅದರಲ್ಲಿದ್ದ ಅಡವಿಯ ಆಕಳದ ಸಾದೃಶ್ಯವು ಅದನ್ನೊಂದನ್ನೇ ನೋಡಿದಾಗ ತಿಳಿದಿರಲಿಲ್ಲ. ಈಗ ಅದು ತಿಳಿದುಬರುವದು ಉಪಮಾನವು).

ಅಭಾವದ ಜ್ಞಾನವು ಎರಡು ರೀತಿಯಿಂದ ಆಗುವದು ಸಾಕ್ಷಾತ್ತಾಗಿಯೇ ಸಾಕ್ಷಿ ಜ್ಞಾನದಿಂದ ತಿಳಿದುಬರುವದು ಒಂದು ವಿಧ ಪ್ರತ್ಯಕ್ಷಾದಿಪ್ರಮಾಣಯೋಗ್ಯವಾದ ವಸ್ತುವು ಆ ಪ್ರಮಾಣಗಳು ಇದ್ದರೂ ಕಂಡುಬರದೇ ಇರುವದು ಇನ್ನೊಂದು ವಿಧ ಸಾಕ್ಷಿಗೆ ಸಾಕ್ಷಾತ್ತಾಗಿ ತಿಳಿದುಬರುವ ಸುಖಾದಿಗಳ ಅಭಾವವು ಸಾಕ್ಷಿಯಿಂದಲೇ ತಿಳಿದುಬರುವದು. ಘಟಾದಿಪದಾರ್ಥಗಳ ಅಭಾವವು ಎರಡನೇ ರೀತಿಯಿಂದ ತಿಳಿದುಬರುವದು ಸುಖಾದಿಗಳ ಅಭಾವದ ಜ್ಞಾನವು ಪ್ರತ್ಯಕ್ಷರೂಪವಾದುದು ಘಟಾದಿಪದಾರ್ಥಗಳ ಅಭಾವಜ್ಞಾನವೂ ಕೆಲವು ಸಲ ಪ್ರತ್ಯಕ್ಷರೂಪವಾಗಿರುವದು, ಕೆಲವು ಸಲ ಅನುಮಾನರೂಪವಾಗಿರುವದು. ಎಲ್ಲಿ ಕೂಡಲೇ ಘಟಾದಿಗಳ ಅಭಾವದ ಜ್ಞಾನವಾಗುವದೋ ಅಲ್ಲಿ ಅದು ಅನುಮಾನ ದಿಂದುಂಟಾಯಿತು ಎಂದು ಹೇಳುವ ಅಗತ್ಯವಿಲ್ಲ (ಆದರೆ ಎಲ್ಲಿ ಲಿಂಗಜ್ಞಾನ, ವ್ಯಾಪ್ತಿ ಸ್ಮರಣಾದಿಗಳನ್ನು ಅವಲಂಬಿಸಿ ಆಗುವದೋ ಅಲ್ಲಿ ಅನುಮಾನದಿಂದ ಅಭಾವ ಜ್ಞಾನವು). ಅರ್ಥಾಪತ್ತಿ, ಉಪಮಾನಗಳು ಮಾತ್ರ ಯಾವಾಗಲೂ ಅನುಮಾನದ ಪ್ರಕಾರಗಳೇ ಆಗಿರುವವು.

**ವಿವರಣೆ**—ನ್ಯಾಯವೈಶೇಷಿಕರು ಉಪಮಾನವು ಪ್ರತ್ಯೇಕಪ್ರಮಾಣವೆಂದು ಹೇಳು ವರು. ಮೀಮಾಂಸಕರು ಅರ್ಥಾಪತ್ತಿಯು ಪ್ರತ್ಯೇಕಪ್ರಮಾಣವೆನ್ನುವರು ಅಭಾವವನ್ನು ತಿಳಿದುಕೊಳ್ಳಲು ಅನುಪಲಬ್ಧಿ ಎಂಬ ಪ್ರಮಾಣಾಂತರವನ್ನೇ ಕೆಲವರು ಹೇಳುವರು. ಈ ಮತಗಳನ್ನೆಲ್ಲ ಇಲ್ಲಿ ನಿರಾಕರಿಸಿ ಉಪಮಾನ ಮತ್ತು ಅರ್ಥಾಪತ್ತಿಗಳು ಅನುಮಾನ ದಲ್ಲಿಯೇ ಅಂತರ್ಭಾವವನ್ನು ಹೊಂದುವವೆಂದೂ, ಅಭಾವವು ಕೆಲವು ಸಲ ಪ್ರತ್ಯಕ್ಷದಿಂದಲೂ ಕೆಲವು ಸಲ ಅನುಮಾನದಿಂದಲೂ ತಿಳಿದುಬರುವದೆಂದೂ ಪ್ರತಿಪಾದಿಸುವರು. ಈಗಾಗಲೇ

ಪ್ರಾಮಾಣಿಕವಾಗಿ ತಿಳಿದುಬಂದ ಒಂದು ವಿಷಯುವು ಉಪಪನ್ನವಾಗದಿದ್ದರೆ ಅದನ್ನು ಉಪಪಾದಿಸಲು ಇನ್ನೊಂದು ವಿಷಯುವನ್ನು ಕಲ್ಪಿಸುವದು ಅರ್ಥಾಪತ್ತಿಯು ಉದಾಹರಣೆಗೆ ಒಬ್ಬ ವ್ಯಕ್ತಿಯು ಜೀವಂತನಾಗಿರುವನು ಆದರೆ ಮನೆಯಲ್ಲಿ ಇರುವದಿಲ್ಲ ಎಂದು ತಿಳಿದು ಬಂದಾಗ ಅದನ್ನು ಉಪಪಾದಿಸಲು ಅವನು ಹೊರಗೆ ಎಲ್ಲಿಯೋ ಇರುವನು ಎಂದು ಕಲ್ಪಿಸುವದು. ಇಲ್ಲಿ ಅವನು ಜೀವಿಸಿರುವ ವಿಷಯದಲ್ಲಿಯೇ ಸಂಶಯವಿರುವವರಿಗೆ ಅರ್ಥಾಪತ್ತಿಯಾಗಲಾರದು. ಆದ್ದರಿಂದ ಅಂಥವರ ದೃಷ್ಟಿಯಿಂದ ಅರ್ಥಾಪತ್ತಿಯು ಸ್ವತಂತ್ರ ಪ್ರಮಾಣವೇ ಅಥವಾ ಅನುಮಾನವೇ ಎಂಬ ಪ್ರಶ್ನೆಯೇ ಹುಟ್ಟುವದಿಲ್ಲ ಆದರೆ ಅವನು ಜೀವಿಸಿರುವದು ಪ್ರಮಾಣಪ್ರಮಿತ (ಜಾತಕಾದಿಗಳಿಂದ) ಎಂದಿಟ್ಟುಕೊಂಡಾಗ ಅವನು ಜೀವಿಸಿರುವದು ಸಾಮಾನ್ಯವಾಗಿ ಪ್ರಮಿತವಾಗಿ, ಮನೆಯಲ್ಲಿರುವದು ಪ್ರಸಕ್ತವಾಗಿ ಪ್ರತಿಷಿದ್ಧವಾದ್ದರಿಂದ ಹೊರಗೆ ಇರುವದು ಪರಿಶೇಷದಿಂದ ಸಿದ್ಧವಾಗುವದು ಹೀಗೆ ಪರಿಶೇಷದಿಂದ ಅವನ ಹೊರಗಿರುವದನ್ನು ತಿಳಿದುಕೊಳ್ಳುವದು ಅನುಮಾನವೇ ಆಗಿದೆ ಆದ್ದರಿಂದ ಅರ್ಥಾಪತ್ತಿಯು ಅನುಮಾನದಲ್ಲಿಯೇ ಅಂತರ್ಭೂತವಾಗುವದು, ಪ್ರತ್ಯೇಕಪ್ರಮಾಣವಲ್ಲ

ಉಪಮಾನದಲ್ಲಿಯೂ ಕೂಡ ಗ್ರಾಮದಲ್ಲಿಯ ಆಕಳಿನಲ್ಲಿದ್ದ ಅಡವಿಯ ಆಕಳದ ಸಾದೃಶ್ಯವನ್ನು (ಅದನ್ನೊಂದನ್ನೇ ನೋಡಿದಾಗ ತಿಳಿಯದೇ ಇದ್ದದ್ದನ್ನು) ಎದುರಿಗಿದ್ದ ಅಡವಿಯ ಆಕಳದಲ್ಲಿದ್ದ ಪ್ರತ್ಯಕ್ಷವಾಗಿ ಕಾಣುವ ಗ್ರಾಮದಲ್ಲಿಯ ಆಕಳದ ಸಾದೃಶ್ಯದಿಂದ ಅನುಮಾನ ಮಾಡಲಾಗುವುದು ಸಾಧ್ಯವಾದ ಅಡವಿಯ ಆಕಳದ ಸಾದೃಶ್ಯವು ಗ್ರಾಮದ ಆಕಳದಲ್ಲಿಯೂ ಹೇತುವಾದ ಗ್ರಾಮದ ಆಕಳದ ಸಾದೃಶ್ಯವು ಅಡವಿಯ ಆಕಳದಲ್ಲಿಯೂ ಇದ್ದು ಹೇತು–ಸಾಧ್ಯಗಳು ವ್ಯಧಿಕರಣವಾಗಿರುವದು ದೋಷವಲ್ಲ ಯಾವಾಗಲೂ ಹೇತುಸಾಧ್ಯಗಳಿಗೆ ಸಾಮಾನಾಧಿಕರಣ್ಯವಿರಬೇಕೆಂಬ ನಿಯಮವಿಲ್ಲ ಕೆಳಗಿನ ಗ್ರಾಮಗಳಲ್ಲಿ ನದಿಯು ತುಂಬಿ ಹರಿಯುವದನ್ನು ನೋಡಿ ಮೇಲಿನ ಗ್ರಾಮಗಳಲ್ಲಿ ಮಳೆಯಾದದ್ದರ ಅನುಮಾನ ಮಾಡುವದು ಕಂಡುಬರುತ್ತದೆ ಅವಳಿ ಜವಳಿ ಮಕ್ಕಳಲ್ಲಿ ಒಬ್ಬನ ಸಾದೃಶ್ಯವನ್ನು ನೋಡಿ ಇನ್ನೊಬ್ಬನಲ್ಲಿಯ ಸಾದೃಶ್ಯದ ಅನುಮಾನ ಮಾಡಲು ಬರುತ್ತದೆ. ಆದ್ದರಿಂದ ಉಪಮಾನವೂ ಪ್ರತ್ಯೇಕ ಪ್ರಮಾಣವಲ್ಲ ಅದು ಅನುಮಾನದಲ್ಲಿಯೇ ಅಂತರ್ಭೂತವಾಗುತ್ತದೆ.

ಅಭಾವವನ್ನು ತಿಳಿದುಕೊಳ್ಳಲು ಅನುಪಲಬ್ಧಿ ಎಂಬ ಪ್ರತ್ಯೇಕ ಪ್ರಮಾಣದ ಆಗತ್ಯವಿಲ್ಲ ಅಥವಾ ಅಭಾವದ ಜ್ಞಾನವು ಎಲ್ಲ ಕಡೆಗೂ ಪ್ರತ್ಯಕ್ಷ ಅಥವಾ ಎಲ್ಲ ಕಡೆಗೂ ಅನುಮಾನ ಎಂಬುದೂ ಸರಿಯಲ್ಲ ಸಾಕ್ಷಿಗೇ ತಿಳಿದುಬರುವ ಸುಖಾದಿಗಳ ಅಭಾವವು ಸಾಕ್ಷಿಯಿಂದಲೇ ತಿಳಿದುಬರುವುದು ಘಟಾದಿ ಪದಾರ್ಥಗಳ ಅಭಾವವು ಚೆನ್ನಾಗಿ ಬೆಳಕು ಇದ್ದು ಕಣ್ಣುಗಳು ಪಟುವಾಗಿದ್ದು ತಕ್ಷಣ ಘಟವಿಲ್ಲವೆಂದು ತಿಳಿದುಬರುವ ಸ್ಥಳಗಳಲ್ಲೆಲ್ಲ ಪ್ರತ್ಯಕ್ಷವಾಗಿಯೇ ತಿಳಿದುಬರುವದು. ಕಣ್ಣಿಗೂ ಅಭಾವಕ್ಕೂ ಸಂಯೋಗವೇ ಸಂಬಂಧವು. ಅಥವಾ ಯಥೋಚಿತವಾದ ಇನ್ನೊಂದು ಸಂಬಂಧವನ್ನೂ ಕಲ್ಪಿಸಬಹುದು. ಆದರೆ ಕತ್ತಲಲ್ಲಿ ಎಲ್ಲ ಕಡೆಗೂ ಕೈಯಾಡಿಸಿ ಘಟವು ಈ ಕೋಣೆಯಲ್ಲಿ ಇದ್ದರೆ ಕೈಗೆ ಹತ್ತುತ್ತಿತ್ತು.

ಕೈಗೆ ಹತ್ತದೇ ಇರುವದರಿಂದ ಇಲ್ಲ ಎಂದು ತಿಳಿದುಕೊಳ್ಳುವುದು ಅನುಮಾನವು. ಹೀಗೆ ಆಯಾ ಸನ್ನಿವೇಶಕ್ಕನುಸರಿಸಿ ಘಟಾದಿಗಳ ಅಭಾವದ ಜ್ಞಾನವು ಪ್ರತ್ಯಕ್ಷ ಅಥವಾ ಅನುಮಾನದಿಂದ ಆಗುವದು ಪ್ರತ್ಯೇಕ ಪ್ರಮಾಣವನ್ನು ಕಲ್ಪಿಸುವ ಅಗತ್ಯವಿಲ್ಲ.

**ಆಗಮವು ಸ್ವತಂತ್ರ ಪ್ರಮಾಣ, ಪ್ರತ್ಯಕ್ಷ ಪ್ರಮಾಣದ ವಿಭಾಗಗಳು.**

29. ಆಗಮೋ ದ್ವಿವಿಧೋ ಜ್ಞೇಯೋ ನಿತ್ಯೋಽನಿತ್ಯಸ್ತಥೈವ ಚ ।
ಪ್ರತ್ಯಕ್ಷಂ ತ್ರಿವಿಧಂ ಜ್ಞೇಯಮೈಶ್ವರಂ ಯೌಗಿಕಂ ತಥಾ
ಅಯೌಗಿಕಂ ಚೇತಿ ತಥಾ ಸರ್ವಮಕ್ಷಾತ್ಮಕಂ ಮತಮ್ ॥
ಅಕ್ಷಾಣಿ ಚ ಸ್ವರೂಪಾಣಿ ನಿತ್ಯಜ್ಞಾನಾತ್ಮಕಾನಿ ಚ ।
ವಿಷ್ಣೋಃ ಶ್ರಿಯಃ ತಥೈವೋಕ್ತಾನ್ಯನ್ಯೇಷಾಂ ದ್ವಿವಿಧಾನಿ ತು ॥
ದೈವಾಸುರಾಣಿ ಮಧ್ಯಾನೀತ್ಯೇತತ್ಪ್ರತ್ಯಕ್ಷಮೀರಿತಮ್ ।
ವಿಷಯಾನ್ ಪ್ರತಿ ಸ್ಥಿತಂ ಹಿ ಅಕ್ಷಂ ಪ್ರತ್ಯಕ್ಷಮಿತಿ ಕೀರ್ತಿತಮ್ ॥
ಅಕ್ಷಯಂ ಪುರುಷಸ್ಯಾಕ್ಷಂ ಸ್ವರೂಪೇ ಮುಖ್ಯಮೇವ ತು ।
ಉಪಚಾರಸ್ತದನ್ಯತ್ರ ಸೃಷ್ಟಾವುಪಚಯೋ ಯತಃ ॥
ಉಪಪತ್ತಿಸ್ವರೂಪತ್ವಾದನುಮಾ ಸಂಭವಾದಿಕಮ್ ।
ಪ್ರತ್ಯಕ್ಷಾಗಮಮಾಹಾತ್ಮ್ಯಾದನುಮಾನಂ ಪ್ರಮಾಣತಾಮ್ ।
ಯಾತಿ ನೈವಾನ್ಯಥಾ ತಸ್ಯ ನಿಯತತ್ವಂ ಕ್ವಚಿದ್ ಭವೇತ್ ॥

ಇತಿ ಬ್ರಹ್ಮತರ್ಕೇ

**ಅನುವಾದ**—ಆಗಮವು ಪೌರುಷೇಯ ಮತ್ತು ಅಪೌರುಷೇಯ ಎಂದು ಎರಡು ವಿಧ ಪ್ರತ್ಯಕ್ಷವು ವಿಷ್ಣು ಮತ್ತು ಲಕ್ಷ್ಮಿಯರ ಪ್ರತ್ಯಕ್ಷ, ಯೋಗಿಗಳ ಪ್ರತ್ಯಕ್ಷ, ಮತ್ತು ಯೋಗಿಗಳಲ್ಲದವರ ಪ್ರತ್ಯಕ್ಷ ಎಂದು ಮೂರು ವಿಧ ಈ ಮೂರು ಪ್ರತ್ಯಕ್ಷಗಳೂ ಅಕ್ಷಾತ್ಮಕ ಅಂದರೆ ಇಂದ್ರಿಯ ಮೂಲಕವಾದವೇ ವಿಷ್ಣು ಮತ್ತು ಲಕ್ಷ್ಮಿಯ ಇಂದ್ರಿಯಗಳು ಸ್ವರೂಪಭೂತವಾದುವು, ನಿತ್ಯವಾದವು ಮತ್ತು ಜ್ಞಾನಾತ್ಮಕವಾದುವು. ಇನ್ನಿತರರಿಗೆ ಸ್ವರೂಪಭೂತ ಇಂದ್ರಿಯಗಳೂ ಇರುವವು, ಭಿನ್ನವಾದ ಜಡ ಇಂದ್ರಿಯಗಳೂ ಇರುವುವು ಭಿನ್ನವಾದ ಜಡ ಇಂದ್ರಿಯಗಳು ದೈವ, ಅಸುರ, ಮಧ್ಯ ಎಂದು ಮೂರು ವಿಧ. (ಸಮ್ಯಗ್‌ಜ್ಞಾನ ಪ್ರಚುರವಾದವು ದೈವ, ಮಿಥ್ಯಾಜ್ಞಾನ ಪ್ರಚುರವಾದವು ಅಸುರ, ಉಭಯವೂ ಸಮನಾದವು ಮಧ್ಯ) ವಿಷಯಗಳಿಗೆ ಸನ್ನಿಕೃಷ್ಟವಾದ ಅಕ್ಷ ಅಂದರೆ ಇಂದ್ರಿಯಗಳಿಗೆ ಪ್ರತ್ಯಕ್ಷ ಎಂದು ಹೆಸರು ಇವು ಮೇಲೆ ವಿವರಿಸಿದಂತೆ ಮೂರು ವಿಧವಾಗಿವೆ ಅಕ್ಷಯ ಅಂದರೆ ನಿತ್ಯವಾದುದರಿಂದ 'ಅಕ್ಷ' ಎಂದು ಹೆಸರು ಸ್ವರೂಪೇಂದ್ರಿಯಗಳು (ನಿತ್ಯವಾದುದರಿಂದ) ಮುಖ್ಯವಾಗಿ ಅಕ್ಷಶಬ್ದವಾಚ್ಯವಾದವು ಭಿನ್ನವಾದ ಜಡ ಇಂದ್ರಿಯಗಳು ಸೃಷ್ಟಿಕಾಲದಲ್ಲಿ ಭೌತಿಕ ಅಹಂಕಾರದ ಅವಯವಗಳ ಉಪಚಯವನ್ನು

ಪಡೆಯುವದರಿಂದ ಉತ್ಪತ್ತಿಯುಳ್ಳವಾಗಿವೆ (ಪ್ರಲಯ ಕಾಲದಲ್ಲಿ ಈ ಅವಯವಗಳ ಅಪಚಯರೂಪ ನಾಶವುಳ್ಳವಾಗಿವೆ) ಆದ್ದರಿಂದ ಅವುಗಳಿಗೆ 'ಅಕ್ಷ' ಶಬ್ದ ಪ್ರಯೋಗವು ಔಪಚಾರಿಕವು.

'ಸಂಭವ' ಇತ್ಯಾದಿ ಪ್ರಮಾಣಗಳು ಉಪಪತ್ತಿರೂಪವಾದ್ದರಿಂದ ಅನುಮಾನದಲ್ಲಿಯೇ ಅಂತರ್ಗತವಾಗುತ್ತವೆ ಪ್ರತ್ಯಕ್ಷ ಮತ್ತು ಆಗಮಗಳ ಅನುಕೂಲತೆಯಿದ್ದಾಗಲೇ ಅನುಮಾನವು ಪ್ರಮಾಣ ಅಂದರೆ ಅರ್ಥನಿಶ್ಚಾಯಕವಾಗುವುದು ಇಲ್ಲದಿದ್ದರೆ ಅದು ಅರ್ಥ ನಿಶ್ಚಯಹೇತುವಾಗುವದಿಲ್ಲ ಈ ಮೇಲಿನ ವಿವರಗಳು ಬ್ರಹ್ಮತರ್ಕದಲ್ಲಿ ಹೇಳಲ್ಪಟ್ಟಿವೆ.

**ವಿವರಣೆ**—ಅಪೌರುಷೇಯ ವಾಕ್ಯವು ಪ್ರಮಾಣವೆಂದು ಚಾರ್ವಾಕಾದಿಗಳು ಒಪ್ಪುವುದಿಲ್ಲ ಅವರ ಮತವನ್ನು ಖಂಡಿಸಿ ಅಪೌರುಷೇಯ ವೇದವು ಪ್ರಮಾಣವೆಂದು ಈಗಾಗಲೇ ಸಮರ್ಥಿಸಲಾಗಿದ ಪೌರುಷೇಯ ವಾಕ್ಯವು ಪ್ರತ್ಯೇಕ ಪ್ರಮಾಣವಲ್ಲ ಅದು ಅನುಮಾನದಲ್ಲಿಯೇ ಅಂತರ್ಭೂತವಾಗುವುದು ಎಂದು ಪ್ರಾಭಾಕರ ಮೀಮಾಂಸಕರ ವಾದ ಇದೂ ಸರಿಯಲ್ಲ ಶಬ್ದಗಳು ಅನ್ವಿತವಾದ ಅರ್ಥವನ್ನು ಬೋಧಿಸುವದರಿಂದ ಪ್ರತ್ಯೇಕ ಪ್ರಮಾಣಗಳಾಗಿವೆ. ಅವು ಮಾತನಾಡುವವನ ಅಭಿಪ್ರಾಯದ ಅನುಮಾಪಕ ಎಂದು ಹೇಗಾದರೂ ಮಾಡಿ ಬಲಾತ್ಕಾರದಿಂದ ಅನುಮಾನದಲ್ಲಿ ಅಂತರ್ಭಾವಗೊಳಿಸುವು ದಾದರೆ ಪ್ರತ್ಯಕ್ಷವನ್ನೂ ಅನುಮಾನದಲ್ಲಿ ಅಂತರ್ಭಾವಗೊಳಿಸಬಹುದೆಂದು ವಾದಿಸಬಹುದು ಪ್ರತ್ಯಕ್ಷಕ್ಕೂ ಅನುಮಾನಕ್ಕೂ ಸಾಮಗ್ರೀ ಭೇದವಿದೆಯೆಂದರೆ ಆಗಮ ಮತ್ತು ಅನುಮಾನ ಗಳಿಗೂ ಸಾಮಗ್ರೀ ಭೇದವಿದೆ

'ಐಶ್ವರಪ್ರತ್ಯಕ್ಷ' ಎಂಬುದರಿಂದ ವಿಷ್ಣುವಿನ ಪ್ರತ್ಯಕ್ಷ, ಲಕ್ಷ್ಮೀ ಪ್ರತ್ಯಕ್ಷ ಎರಡನ್ನೂ ತೆಗೆದುಕೊಳ್ಳಬೇಕು ಪರಮಾತ್ಮನನ್ನು 'ಸರ್ವೇಂದ್ರಿಯ ವಿವರ್ಜಿತ' ಎಂದು ವರ್ಣಿಸಿದ್ದನ್ನು 'ಜಡಸರ್ವೇಂದ್ರಿಯ ವಿವರ್ಜಿತ' ಎಂಬ ಅರ್ಥದಲ್ಲಿ ತೆಗೆದುಕೊಳ್ಳಬೇಕು. ಪರಮಾತ್ಮನಿಗೂ ಲಕ್ಷ್ಮಿಗೂ ಸ್ವರೂಪೇಂದ್ರಿಯಗಳು ಇರುವುವು. ಸ್ವರೂಪೇಂದ್ರಿಯಗಳಿಂದ ಅಭಿವ್ಯಕ್ತ ವಾಗುವ ಅನುಭವವು ಪ್ರತ್ಯಕ್ಷದಲ್ಲಿಯೇ ಅಂತರ್ಗತವಾಗುವುದು ಸಂಭವ, ಪರಿಶೇಷಗಳು ಅನುಮಾನದಲ್ಲಿ ಅಂತರ್ಗತವಾಗುವವು 'ಐತಿಹ್ಯ' ಎಂಬ ಪ್ರಮಾಣವು ಆಗಮದಲ್ಲಿ ಅಂತರ್ಗತವಾಗುವದು ಪ್ರತ್ಯಕ್ಷ ಮತ್ತು ಆಗಮಗಳಿಂದ ಉಪಾಧಿ, ಪ್ರತಿಪಕ್ಷ ಇತ್ಯಾದಿ ದೋಷಗಳ ನಿವಾರಣೆಯಾದಾಗ ಮಾತ್ರ ಅನುಮಾನವು ಪ್ರಮಾಣ ಅಂದರೆ ಅರ್ಥ ನಿಶ್ಚಾಯಕವಾಗುವದು ಆದುದರಿಂದಲೇ ಇದಕ್ಕೆ 'ಅನು' ಅಂದರೆ 'ಅನುಸರಿಸಿ' 'ಮಾನ' ಪ್ರಮಾಣ ಎಂಬರ್ಥದಲ್ಲಿ ಅನುಮಾನ ಎಂದು ಹೆಸರು ಕೊಡಲಾಗಿದೆ. 'ಆ ಸಮಂತಾತ್ ಗಮ್ಯತೇ ಇತಿ ಆಗಮಃ' ಎಲ್ಲ ರೀತಿಯಿಂದಲೂ ತಿಳಿಸಿಕೊಡುವುದು ಎಂದು ಆಗಮಕ್ಕೆ 'ಆಗಮ' ಎಂದು ಹೆಸರು

ಭೇದದ ಪ್ರಮಾಣಗಳು ಉಪಜೀವ್ಯವಾದ್ದರಿಂದ ಪ್ರಬಲವಾದವು.

30. ಅತ್ರ ಚ ಉಪಜೀವ್ಯತ್ವೇನ ಪ್ರಮಾಣಪ್ರಾಬಲ್ಯಾತ್ ಭೇದ ಏವ ತಾತ್ಪರ್ಯಂ ಯುಕ್ತಮ್ । ಕಥಂ ಚ ಅನುವಾದಕತ್ವಂ ಭೇದಸ್ಯ ಪ್ರಮಾಣೇನ ಅಸಿದ್ಧೌ । ಸಿದ್ಧೌ ಚ ಕಥಮಭೇದವಾಕ್ಯಸ್ಯ ಅಬಾಧಃ । ನ ಚ ಅಪ್ರಮಾಣಸಿದ್ಧೇನ ಅನುವಾದಕತ್ವಂ ಪ್ರಮಾಣಸ್ಯ ಭವತಿ । ದುರ್ಬಲತ್ವೇ ಚ ಭೇದಪ್ರಮಾಣಸ್ಯ ಆಭಾಸತ್ವಾತ್ ನ ಭೇದವಾಕ್ಯಾನಾಮನುವಾದಿತ್ವಮ್ । ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಮ್ ।

ಸರ್ವಪ್ರಮಾಣವಿರುದ್ಧವಚನಾನಾಮೇವ ಪ್ರಾಬಲ್ಯಾಂಗೀಕಾರೇ 'ಇದಂ ವಾ ಅಗ್ರೇ ನೈವ ಕಿಂಚನಾಸೀತ್ ಅಸತಃ ಸದಜಾಯತ' ಇತ್ಯಾದೀನಾಮೇವ ಅವಿಚಾರೇಣ ಪ್ರತೀಯಮಾನಸ್ಯ ಅರ್ಥಸ್ಯ ಸರ್ವಪ್ರಮಾಣ ವಿರುದ್ಧತ್ವಾತ್ ತತ್ರ ಸರ್ವಾಗಮಾನಾಂ ಮಹಾತಾತ್ಪರ್ಯಂ ಪ್ರಸಜ್ಯೇತ । ನ ಚ ತತ್ರ ಯುಕ್ತಿವಿರೋಧ ಇತಿ ವಾಚ್ಯಮ್ । ತಸ್ಮಿನ್ ಪಕ್ಷೇ ಯುಕ್ತಿವಿರುದ್ಧತ್ವೇನ ಅನನುವಾದಿತ್ವಮಿತಿ ಗುಣ ಏವ ಸ್ಯಾತ್ । ಯುಕ್ತಿಸಿದ್ಧತ್ವೇ ಹಿ ಅನುವಾದಿತ್ವಂ ಸ್ಯಾತ್ । ಅತಃ ಪ್ರಮಾಣಸಿದ್ಧತ್ವೇ ತದಪಲಾಪಾಯುಕ್ತೇಃ, ಅಪ್ರಮಾಣಸಿದ್ಧತ್ವೇ ಚ ಭೇದಪ್ರಮಾಣಸ್ಯ ಅನುವಾದಿತ್ವಾಭಾವಾಚ್ಚ ನ ಭೇದವಾಕ್ಯಾನಾಂ ದೌರ್ಬಲ್ಯಮ್ ।

ಅನುವಾದ—ಇಲ್ಲಿ ಉಪಜೀವ್ಯವಾದ್ದರಿಂದ (ಭೇದವನ್ನು ಹೇಳುವ) ಪ್ರಮಾಣವು ಪ್ರಬಲವಾಗಿದೆ ಆದ್ದರಿಂದ (ಆಪಾತತಃ ಅದ್ವೈತಪರವೆಂದು ತೋರುವ ಆಗಮಕ್ಕೂ) ಭೇದದಲ್ಲಿಯೇ ತಾತ್ಪರ್ಯವು. ಭೇದವು (ಪ್ರತ್ಯಕ್ಷ) ಪ್ರಮಾಣದಿಂದ ಸಿದ್ಧವಾಗಿಲ್ಲವಾದರೆ ಭೇದಶ್ರುತಿಗಳು ಅನುವಾದಕ ಎಂದು ಹೇಗೆ ಹೇಳುವಿರಿ? ಪ್ರತ್ಯುತ ಭೇದವು (ಪ್ರತ್ಯಕ್ಷಾದಿ) ಪ್ರಮಾಣದಿಂದ ಸಿದ್ಧವಾಗಿದ್ದರೆ ಅಭೇದವಾಕ್ಯಗಳ ಬಾಧವಾಗದೇ ಇರುವದು ಹೇಗೆ? ಒಂದು ಪ್ರಮಾಣದಿಂದ ಸಿದ್ಧವಾಗದೇ ಇರುವದನ್ನು ಇನ್ನೊಂದು ಪ್ರಮಾಣವು ಅನುವಾದ ಮಾಡುತ್ತದೆಂದು ಹೇಳಲು ಬರುವದಿಲ್ಲ. ಭೇದವನ್ನು ಹೇಳುವ (ಪ್ರತ್ಯಕ್ಷ) ಪ್ರಮಾಣವು ದುರ್ಬಲವಾಗಿದ್ದರೆ ಅದು ಪ್ರಮಾಣಾಭಾಸವಾದ್ದರಿಂದ (ಅದರಿಂದ ಪ್ರತಿಪಾದಿತವಾದ ಭೇದವನ್ನು ಹೇಳುವ) ಭೇದಶ್ರುತಿಗಳು ಅನುವಾದಕವಾಗುವದಿಲ್ಲ ಆದ್ದರಿಂದ ಭೇದಶ್ರುತಿಗಳೇ ಪ್ರಬಲವಾದವು.

ಸರ್ವಪ್ರಮಾಣಗಳಿಗೆ ವಿರುದ್ಧವಾದ ವಚನಗಳೇ (ಅವು ಪ್ರಮಾಣಾಂತರಪ್ರಾಪ್ತವಾದದ್ದರ ಅನುವಾದಕವಲ್ಲವಾದ್ದರಿಂದ ಅಪೂರ್ವತಾಲಿಂಗವುಳ್ಳವುಗಳಾದ್ದರಿಂದ) ಪ್ರಮಾಣ ಎಂದು ವಾದಿಸುವದಾದರೆ 'ಇದಂ ವಾ ಅಗ್ರೇ' ಇತ್ಯಾದಿ ಶ್ರುತಿಗಳ ಆಪಾತತಃ ಪ್ರತೀಯಮಾನವಾದ (ಶೂನ್ಯವೇ ಜಗತ್ಕಾರಣ ಎಂಬ) ಅರ್ಥವು ಸರ್ವಪ್ರಮಾಣವಿರುದ್ಧವಾದ್ದರಿಂದ (ಅಪೂರ್ವತಾರೂಪಲಿಂಗವುಳ್ಳದ್ದಾಗಿ) ಆಗಮದ ಮಹಾತಾತ್ಪರ್ಯವೆಂದು ಹೇಳುವ ಪ್ರಸಂಗ ಬರುವುದು ಹೀಗೆ ಹೇಳಲು ಯುಕ್ತಿಯ ವಿರೋಧವಿದೆಯೆಂದರೆ, ಯುಕ್ತಿಗೆ

ವಿರುದ್ಧವಾದ್ದರಿಂದಲೇ ಅನನುವಾದಕವಾಗುವದರಿಂದ (ಅಪೂರ್ವತೆಯನ್ನು ಪಡೆದು) ಗುಣವೇ ಆಗುವದು (ಶೂನ್ಯವು ಜಗತ್ಕಾರಣ ಎಂಬುದು) ಯುಕ್ತಿಸಿದ್ಧವಾಗಿದ್ದರೆ (ಅದನ್ನು ಹೇಳುವ ಇದಂ ವಾ ಅಗ್ರೇ ಎಂಬ ಶ್ರುತಿಯು) ಅನುವಾದಕವಾಗುತ್ತಿತ್ತು ಆದ್ದರಿಂದ ಭೇದವು (ಪ್ರತ್ಯಕ್ಷಾದಿ) ಪ್ರಮಾಣದಿಂದ ಸಿದ್ಧವೆಂದು ಒಪ್ಪಿಕೊಂಡರೆ ಅದರ ಅಪಲಾಪವನ್ನು (ಭೇದಶ್ರುತಿಗಳು ಅದರ ಅನುವಾದವನ್ನು ಮಾತ್ರ ಮಾಡುವವು ಆದ್ದರಿಂದ ಅವು ಪ್ರಮಾಣವಲ್ಲ ಎಂದು ಹೇಳಿ ಅದರ ಅಪಲಾಪವನ್ನು) ಮಾಡಲು ಬರುವದಿಲ್ಲ ಪ್ರತ್ಯುತ ಭೇದವು (ಪ್ರತ್ಯಕ್ಷಾದಿ) ಪ್ರಮಾಣಸಿದ್ಧವಲ್ಲವೆಂದು ಹೇಳಿದರೆ ಭೇದಶ್ರುತಿಗಳು ಅನುವಾದಕವಾಗದೇ ಇರುವದರಿಂದ ಅವು (ಅಭೇದಶ್ರುತಿಗಳಿಗಿಂತ) ದುರ್ಬಲವಾಗುವದಿಲ್ಲ

**ವಿವರಣೆ**—ಭೇದವನ್ನು ಬೋಧಿಸುವ ಪ್ರತ್ಯಕ್ಷಾದಿ ಪ್ರಮಾಣಗಳು ಉಪಜೀವ್ಯ ಪ್ರಮಾಣಗಳು ಎಂದು ಮೇಲೆ (ಬ್ರಹ್ಮತರ್ಕವನ್ನು ಉಲ್ಲೇಖಿಸುವದಕ್ಕೆ ಮೊದಲು) ಹೇಳಿದ್ದಾರೆ ಅದನ್ನು ನಿರ್ದೇಶಿಸಿ ಉಪಜೀವ್ಯ ಪ್ರಮಾಣಗಳು ಪ್ರಬಲವಾದ್ದರಿಂದ ಅದಕ್ಕೆ ವಿರುದ್ಧವಾಗದಂತೆ ಆಪಾತತಃ ಅದ್ವೈತಪರವೆಂದು ತೋರುವ 'ತತ್ತ್ವಮಸಿ' ಇತ್ಯಾದಿ ವಾಕ್ಯಗಳಿಗೂ ಭೇದದಲ್ಲಿಯೇ ತಾತ್ಪರ್ಯವು ಎಂದು ಇಲ್ಲಿ ಹೇಳುವರು ಇನ್ನು 'ದ್ವಾ ಸುಪರ್ಣಾ' ಇತ್ಯಾದಿ ಭೇದಶ್ರುತಿಗಳು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದ ಭೇದವನ್ನು ಹೇಳುವದರಿಂದ ಅನುವಾದಕ ಅನುವಾದಕವಾದ ಶ್ರುತಿಗಳಿಗೆ ಅಪೂರ್ವತಾ ಇಲ್ಲದೇ ಇರುವದರಿಂದ ಅವು ದುರ್ಬಲ ಆದ್ದರಿಂದ ಭೇದಶ್ರುತಿಗಳು ದುರ್ಬಲವಾದ್ದರಿಂದ ಅಪ್ರಮಾಣ ಅದ್ವೈತಶ್ರುತಿಗಳು ಅಪೂರ್ವವಾಗಿ ಅಭೇದವನ್ನು ಹೇಳುವದರಿಂದ ಪ್ರಬಲ ಎಂದು ಅದ್ವೈತಿಗಳು ವಾದಿಸುವರು ಇದೂ ಸರಿಯಲ್ಲ ಭೇದವು ಪ್ರತ್ಯಕ್ಷಾದಿಗಳಿಂದ ಸಿದ್ಧವೆಂದು ಅಂಗೀಕರಿಸುವಿರೋ ಇಲ್ಲವೋ ? ಸಿದ್ಧವಲ್ಲ ಎಂದು ಹೇಳಿದರೆ ಆಗ ಭೇದಶ್ರುತಿಗಳು ಪ್ರಮಾಣಾಂತರಪ್ರಾಪ್ತವಾದದ್ದರ ಅನುವಾದಕವಾಗುವದಿಲ್ಲ ಅಂದಮೇಲೆ ಅವು ದುರ್ಬಲವಾಗುವದಿಲ್ಲ ಭೇದವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿದೆ ಎಂದು ಅಂಗೀಕರಿಸಿದರೆ ಆಗ ಹೀಗೆ ಪ್ರಮಾಣಸಿದ್ಧವಾದ ಭೇದದ ವಿರೋಧವಿರುವದರಿಂದ ಅಭೇದ-ಶ್ರುತಿಗಳಿಗೇ ಬಾಧ ಬರುವದು. ಅಂದರೆ ಆಪಾತತಃ ಅವುಗಳಿಗೆ ತೋರುವ ಅಭೇದಪರವಾದ ಅರ್ಥವು ಸರಿಯಲ್ಲವೆಂದು ಕಂಡುಬರುವದು

ಇನ್ನು ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಭೇದವು ವ್ಯಾವಹಾರಿಕವು ಆದರಿಂದ ಅಭೇದ ಶ್ರುತಿಗೆ ಬಾಧವುಂಟಾಗಲಾರದು ಎಂದರೆ, ಹೀಗೆ ವ್ಯಾವಹಾರಿಕ ಭೇದವನ್ನು ಹೇಳುವ ಪ್ರತ್ಯಕ್ಷಾದಿ ಪ್ರಮಾಣಗಳು ಅಪ್ರಾಮಾಣಿಕವಾದ್ದರಿಂದ ಭೇದಶ್ರುತಿಗಳು ಅನುವಾದಕವಾಗುವದಿಲ್ಲ ಪ್ರಮಾಣ ಪ್ರಾಪ್ತವಾದದ್ದನ್ನು ಮತ್ತೆ ಹೇಳುವದೇ ಅನುವಾದಕತ್ವವು ಭೇದಶ್ರುತಿಗಳು ಸ್ವತಂತ್ರವಾಗಿಯೇ ಭೇದವನ್ನು ಹೇಳುವವು. ಆದ್ದರಿಂದ ಪ್ರಬಲವಾಗಿಯೇ ಇರುವವು ಅಲ್ಲದೆ ಅಭೇದಪರವೆಂದು ಅದ್ವೈತಿಗಳು ತಿಳಿದುಕೊಂಡಿರುವ

ಶ್ರುತಿಗಳು ಅಭೇದಪರವೆಂದು ಸಿದ್ಧವಾದರೆ ಪ್ರತ್ಯಕ್ಷಾದಿ ಸಿದ್ಧವಾದ ಭೇದವು ವ್ಯಾವಹಾರಿಕವೆಂದು ಸಿದ್ಧವಾಗುವದು ಭೇದವು ವ್ಯಾವಹಾರಿಕವೆಂದು ಸಿದ್ಧವಾದರೆ ಇವುಗಳ ವಿರೋಧವಿಲ್ಲದ್ದರಿಂದ ಆ ಶ್ರುತಿಗಳು ಅಭೇದಪರವೆಂದು ಸಿದ್ಧವಾಗುವದು ಹೀಗೆ ಅನ್ಯೋನ್ಯಾಶ್ರಯ ದೋಷಬರುವದರಿಂದ ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಭೇದವು ವ್ಯಾವಹಾರಿಕವೆಂದು ಹೇಳಿ ಪಾರಾಗಲು ಬರುವದಿಲ್ಲ ಹಾಗೆ ಹೇಳಿದರೆ ಭೇದಶ್ರುತಿಗಳು ಅನುವಾದಕವಲ್ಲವೆಂದು ಸಿದ್ಧವಾಗಿ ಭೇದವೇ ಸಮರ್ಥಿತವಾಗುವದೆಂಬುದನ್ನು ಈಗಾಗಲೇ ತೋರಿಸಿದ್ದೇವೆ ಅಂತೂ ಪ್ರತ್ಯಕ್ಷಾದಿ ಉಪಜೀವ್ಯ ಪ್ರಮಾಣಗಳ ವಿರೋಧವಿರುವದರಿಂದಲೂ ಭೇದಶ್ರುತಿಗಳು ಪ್ರಬಲವಾಗಿರುವದರಿಂದಲೂ ಆಪಾತತಃ ಅಭೇದಪರವೆಂದು ತೋರುವ ಶ್ರುತಿಗಳಿಗೂ ಭೇದದಲ್ಲಿಯೇ ತಾತ್ಪರ್ಯವಿರುವದು

ಅಭೇದಶ್ರುತಿಗಳು ಭೇದವನ್ನು ಹೇಳುವ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿರುದ್ಧವಾಗಿರುವದನ್ನು ಹೇಳುವದರಿಂದ ಅಪೂರ್ವವಾಗಿದ್ದು ಪ್ರಬಲವಾಗಿವೆ ಎಂದು ವಾದಿಸುವದು ಸರಿಯಲ್ಲ ಹಾಗೆಂದರೆ 'ಇದಂ ವಾ ಅಗ್ರೇ ನೈವ ಕಿಂಚನ ಆಸೀತ್' ಎಂಬ ಶ್ರುತಿಯಲ್ಲಿ ಸರ್ವಪ್ರಮಾಣಗಳಿಗೆ ವಿರುದ್ಧವಾದ 'ಶೂನ್ಯವು ಜಗತ್ಕಾರಣ' ಎಂದು ಹೇಳಲಾಗಿದೆ. ಇದು ಅಪೂರ್ವವಾಗಿದೆ ಆದ್ದರಿಂದ ಈ ಶ್ರುತಿಯೇ ಪ್ರಬಲವಾಗಿದ್ದು 'ಶೂನ್ಯವೇ ಜಗತ್ಕಾರಣ' ಎಂದು ವಾದಿಸುವದೂ ಸರಿಯಾಗುವ ಪ್ರಸಂಗ ಬರುವದು ಇದು ಯುಕ್ತಿಗೆ ವಿರುದ್ಧವೆಂದರೆ 'ಯುಕ್ತಿಸಿದ್ಧವಾದದ್ದು ಅಪೂರ್ವವಲ್ಲ' ಯುಕ್ತಿವಿರುದ್ಧವಾದದ್ದೇ ಅಪೂರ್ವ ಎಂದು ವಾದಿಸಬಹುದು ಆದ್ದರಿಂದ ಅಪೂರ್ವತೆಯು ಪ್ರಮಾಣಾಂತರ ವಿರೋಧವಿಲ್ಲದಾಗ ಮಾತ್ರ ಉಪೋದ್ಬಲಕವಾಗುವುದು ಪ್ರಮಾಣಾಂತರ ವಿರೋಧವಿದ್ದಾಗ ಅಪೂರ್ವತೆಯೇ ಒಂದು ಸಾಧಕವಾಗಲಾರದು ಜೀವೇಶ್ವರ ಅಭೇದಕ್ಕೆ ಪ್ರತ್ಯಕ್ಷಾದಿ ಪ್ರಮಾಣಗಳ ವಿರೋಧವೂ ಭೇದಶ್ರುತಿಗಳ ವಿರೋಧವೂ ಇರುವದರಿಂದ ಆಪಾತತಃ ಅಭೇದಪರವೆಂದು ತೋರುವ ಶ್ರುತಿಗಳು ಭೇದಪರವೆಂದೇ ತಾತ್ಪರ್ಯವನ್ನು ತೋರಿಸಬೇಕು ಪ್ರಮಾಣಸಿದ್ಧವಾದ ಭೇದವನ್ನು ವ್ಯಾವಹಾರಿಕವೆಂದು ಅಪಲಾಪ ಮಾಡಲು ಬರುವದಿಲ್ಲ ಭೇದವು ಪ್ರತ್ಯಕ್ಷಾದಿ ಪ್ರಮಾಣಸಿದ್ಧವಲ್ಲವೆಂದರೂ ಭೇದಶ್ರುತಿಗಳು ಅನುವಾದಕವಾಗದೆ ಪ್ರಬಲವೆನಿಸುವವು

**31.** **ನ ಚ ಪ್ರಮಾಣಬಹುತ್ವೇ ದೌರ್ಬಲ್ಯಮ್ । ದಾರ್ಢ್ಯಮೇವ ಹಿ ಬಹುವಾಕ್ಯಸಂವಾದೇ ದೃಷ್ಟಮ್ । ತಥಾ ಸತಿ ಅಭ್ಯಾಸಾದೇಃ ಅಪ್ರಾಮಾಣ್ಯ-ಹೇತುತ್ವಂ ಸ್ಯಾತ್ । ಅಭ್ಯಾಸಸ್ಯ ತಾತ್ಪರ್ಯಲಿಂಗತ್ವಂ ಸರ್ವೇಷಾಂ ಸಿದ್ಧಮ್ । ತದನಂಗೀಕಾರೇ ತತ್ಪಕ್ಷೇಽಪಿ ನವಕೃತ್ವಃ ತತ್ತ್ವಮಸೀತಿ ಅಭ್ಯಾಸಸ್ಯ ಅನುವಾದಕ-ತ್ವೇನ ಅಪ್ರಾಮಾಣ್ಯಂ ಸ್ಯಾತ್ । ಪ್ರಥಮವಾಕ್ಯೇನೈವ ಯಸ್ಯ ಅಸಿದ್ಧಂ ತದರ್ಥ-ಮುಪರಮಿತ್ಯುಕ್ತೇಃ ಪ್ರತ್ಯಕ್ಷಾದಿನಾ ಭೇದೋ ಯೇನ ಅನಿಶ್ಚಿತಃ ತದರ್ಥಮುಪರಂ ವಾಕ್ಯಮಿತ್ಯುತ್ತರಮ್ । ತಸ್ಮಾದ್ ಬಹು ಪ್ರಮಾಣಸಂವಾದಿತ್ವೇ ಪ್ರಾಬಲ್ಯಮೇವ ।**

**ಅತಃ ಸರ್ವಪ್ರಮಾಣವಿರುದ್ಧತ್ವಾತ್ ನ ಅಭೇದೇ ತಾತ್ಪರ್ಯಂ ವಾಕ್ಯಸ್ಯ ಕಿಂತು ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್ ||**

**ಅನುವಾದ**—(ಒಂದೇ ವಿಷಯದಲ್ಲಿ) ಒಂದಕ್ಕಿಂತ ಹೆಚ್ಚು ಪ್ರಮಾಣಗಳಿದ್ದರೆ (ದ್ವಿತೀಯಾದಿ ಪ್ರಮಾಣಗಳು ಅನುವಾದಕವಾದ್ದರಿಂದ ಅವುಗಳಿಗೆ) ದೌರ್ಬಲ್ಯ ಬರುವದು ಎಂಬುದು ಸರಿಯಲ್ಲ ಯಾಕಂದರೆ ಅನೇಕ ವಾಕ್ಯಗಳ ಸಂವಾದವಿದ್ದಾಗ ದಾರ್ಢ್ಯವೇ (ನಿಃಶಂಕ ಪ್ರಮಿತಿಯೇ) ಉಂಟಾಗಿರುವದು ಕಂಡುಬರುತ್ತದೆ (ಇಂಥ ಬಹುವಾಕ್ಯ ಸಂವಾದವು ವ್ಯರ್ಥವಾದುದರಿಂದ ಉಪೇಕ್ಷಣೀಯ ಎಂದು ಹೇಳಿದರೆ) ಅಭ್ಯಾಸಾದಿಗಳೂ ಉಪೇಕ್ಷಣೀಯವಾಗುವವು ಅಭ್ಯಾಸವು ತಾತ್ಪರ್ಯ ನಿರ್ಣಾಯಕಲಿಂಗವೆಂದು ಎಲ್ಲ ವಾದಿಗಳೂ ಒಪ್ಪಿರುವರು ಅಭ್ಯಾಸವು ತಾತ್ಪರ್ಯ ನಿರ್ಣಾಯಕಲಿಂಗವೆಂಬುದನ್ನು ಅಂಗೀಕರಿಸದಿದ್ದರೆ ಅವರ (ಅದ್ವೈತಿಗಳ) ಪಕ್ಷದಲ್ಲಿಯೂ 'ತತ್ತ್ವಮಸಿ' ಎಂಬುದರ ಒಂಬತ್ತು ಸಲ ಮಾಡಿದ ಉಪದೇಶವು ಅನುವಾದಕವಾಗಿ ಅಪ್ರಮಾಣವಾಗುವದು (ಐಕ್ಯವು ತಿಳಿದುಕೊಳ್ಳಲು ಕಷ್ಟವಾದ್ದರಿಂದ) ಪ್ರಥಮವಾಕ್ಯದಿಂದಲೇ ಯಾರಿಗೆ ಸಿದ್ಧವಾಗುವದಿಲ್ಲವೋ ಅವರಿಗೋಸ್ಕರ ದ್ವಿತೀಯಾದಿವಾಕ್ಯಗಳಿರುವವು ಎಂದು (ಅದ್ವೈತಿಗಳು ಸಮಾಧಾನ) ಹೇಳಿದರೆ, ಪ್ರತ್ಯಕ್ಷಾದಿ ಪ್ರಮಾಣಗಳಿಂದ ಯಾರಿಗೆ ಭೇದವು ನಿಶ್ಚಿತವಾಗಿಲ್ಲವೋ ಅವರಿಗಾಗಿ ಈ ಭೇದವಾಕ್ಯಗಳಿರುವವು ಎಂದು (ನಾವೂ) ಉತ್ತರ ಕೊಡುವೆವು. ಆದ್ದರಿಂದ ಅನೇಕ ಪ್ರಮಾಣಗಳ ಸಂವಾದವಿದ್ದರೆ ಪ್ರಾಬಲ್ಯವೇ ಇರುವದು

ಆದ್ದರಿಂದ ಎಲ್ಲ ಪ್ರಮಾಣಗಳಿಗೂ ವಿರುದ್ಧವಾಗಿರುವದರಿಂದ 'ತತ್ತ್ವಮಸಿ' ಇತ್ಯಾದಿ ವಾಕ್ಯವು ಅಭೇದದಲ್ಲಿ ತಾತ್ಪರ್ಯವುಳ್ಳದ್ದಾಗಿಲ್ಲ ಆದರೆ ಎಲ್ಲ ಆಗಮಗಳು ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ ಮಹಾತಾತ್ಪರ್ಯವುಳ್ಳವುಗಳಾಗಿವೆ.

**ವಿವರಣೆ**—ಭೇದವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿರುವದರಿಂದ ಸಿದ್ಧವಾದದ್ದನ್ನೇ ಹೇಳುವ ಭೇದಶ್ರುತಿಗಳು ಅನುವಾದಕ, ದುರ್ಬಲ ಅಪೂರ್ವವಾದ ಅಭೇದವನ್ನು ಹೇಳುವ ಅಭೇದ ಶ್ರುತಿಗಳು ಪ್ರಬಲ ಎಂಬುದು ಅದ್ವೈತಿಗಳ ವಾದ ಇದಕ್ಕೆ ಈಗಾಗಲೇ ಉತ್ತರ ಹೇಳಿರುವರು ಇನ್ನೂ ಒಂದೆರಡು ಯುಕ್ತಿಗಳನ್ನು ಹೇಳಲು ಇಲ್ಲಿ ಮತ್ತೆ ಪ್ರಸ್ತಾಪಿಸಿರುವರು

ಒಂದೇ ವಿಷಯಲ್ಲಿ ಒಂದಕ್ಕಿಂತ ಹೆಚ್ಚು ಪ್ರಮಾಣಗಳಿದ್ದರೆ ಎರಡನೆಯ, ಮೂರನೆಯ ಪ್ರಮಾಣಗಳು ಮೊದಲನೆಯ ಪ್ರಮಾಣವು ತಿಳಿಸಿದ್ದನ್ನೇ ತಿಳಿಸುವದರಿಂದ ಅವು ಅನುವಾದಕ, ದುರ್ಬಲ ಎಂದು ಅದ್ವೈತಿಗಳ ವಾದ. ಇದು ಅನುಭವಕ್ಕೆ ವಿರುದ್ಧವಾದ ವಾದ ಅನೇಕ ಪ್ರಮಾಣಗಳಿದ್ದಾಗ ದಾರ್ಢ್ಯವೇ ಉಂಟಾಗುವದೇ ಹೊರತು, ಎರಡನೆಯ ಮೂರನೆಯ ಪ್ರಮಾಣಗಳ ಉಪೇಕ್ಷಣೀಯತ್ವ ಬುದ್ಧಿ ಬರುವದಿಲ್ಲ. ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ ಎಂಬ ತಾತ್ಪರ್ಯ ಲಿಂಗಗಳಲ್ಲಿ 'ಅಭ್ಯಾಸ' ಎಂಬ ತಾತ್ಪರ್ಯಲಿಂಗವನ್ನು ಅದ್ವೈತಿಗಳೂ ಒಪ್ಪಿಕೊಂಡಿದ್ದಾರೆ.

ಆದ್ದರಿಂದ ಬಹುಪ್ರಮಾಣಸಂವಾದವನ್ನು ಅವರು ಅಲ್ಲಗಳೆಯಲು ಬರುವದಿಲ್ಲ. ಹಾಗೆ ಅಲ್ಲಗಳೆದರೆ 'ತತ್ತ್ವಮಸಿ' ಎಂಬಲ್ಲಿ ಒಂಬತ್ತು ಸಲ ಅಭೇದವನ್ನು ಉಪದೇಶಿಸಿರುವರು. ಆದ್ದರಿಂದ ಅಭೇದದಲ್ಲಿಯೇ ತಾತ್ಪರ್ಯ ಎಂಬ ಅವರ ವಾದ ಕುಸಿದುಬೀಳುತ್ತದೆ. ಆದ್ದರಿಂದ ಭೇದಕ್ಕೆ ಬಹುಪ್ರಮಾಣ ಸಂವಾದವಿರುವದು ದಾರ್ಢ್ಯಹೇತುವೇ ಆಗಿದ್ದು ದ್ವಿತೀಯಾದಿ ಪ್ರಮಾಣಗಳು ದುರ್ಬಲವಾಗುವದಿಲ್ಲ

ಇಲ್ಲಿ 'ಅಭ್ಯಾಸ' ಎಂಬುದನ್ನು 'ಏಕಪ್ರಕಾರಾ ಅಸಕೃದುಕ್ತಿಃ' ಎಂಬರ್ಥದಲ್ಲಿ ಉಪಯೋಗಿಸಿಲ್ಲ ಆದರೆ 'ಅಭ್ಯಸನ' ಅಂದರೆ ಮತ್ತೆ ಮತ್ತೆ ಬೋಧಿತವಾದದ್ದು ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟದ 'ಅಭ್ಯಾಸಾದಿ' ಎಂಬಲ್ಲಿಯ ಆದಿ ಪದದಿಂದ ನಿಗಮನವನ್ನು ತೆಗೆದುಕೊಳ್ಳಬೇಕು.

**ಎಲ್ಲ ಆಗಮಗಳು ವಿಷ್ಣು ಸರ್ವೋತ್ತಮತ್ವವನ್ನೇ ಹೇಳುವವು ಎಂಬ ವಿಷಯದಲ್ಲಿ ಪ್ರಮಾಣ ವಚನಗಳು.**

**32.** ತಥಾ ಚ ಉಕ್ತಂ ಭಗವತಾ—

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ಇತಿ

ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ
ಮಹಾ-ತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ ।
ಅವಾಂತರಂ ತತ್ಪರತ್ವಂ ತದನ್ಯತ್
ಸರ್ವಾಗಮಾನಾಂ ಪುರುಷಾರ್ಥಃ ತತೋಽತಃ ॥

ಇತಿ ಪೈಂಗಿಶ್ರುತಿಃ ।

ಮುಖ್ಯಂ ಚ ಸರ್ವವೇದಾನಾಂ ತಾತ್ಪರ್ಯಂ ಶ್ರೀಪತೇಃ ಪರಮ್ ।
ಉತ್ಕರ್ಷೇ ತು ತದನ್ಯತ್ರ ತಾತ್ಪರ್ಯಂ ಸ್ಯಾದವಾಂತರಮ್ ॥

ಇತಿ ಮಹಾವಾರಾಹೇ ।

ಅನುವಾದ—(ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ ಎಲ್ಲ ಆಗಮಗಳ ತಾತ್ಪರ್ಯ ವಿರುವದು ಎಂದು ಹಿಂದಿನ ವಾಕ್ಯದಲ್ಲಿ ಹೇಳಿರುವರು. ಈ ಸರ್ವೋತ್ತಮತ್ವವನ್ನು ಸ್ವತಃ

ಭಗವಂತನೇ ಗೀತೆಯಲ್ಲಿ ಹೇಳಿರುವನು ಎಂದು ಗೀತೆಯ ಶ್ಲೋಕಗಳನ್ನು ಉದಾಹರಿಸಿ ಹೇಳುವರು. ಇನ್ನೂ ಕೆಲವು ಪ್ರಮಾಣವಚನಗಳನ್ನೂ ಕೊಡುವರು ) ಸ್ವತಃ ಭಗವಂತನೇ ತನ್ನ ಈ ಸರ್ವೋತ್ತಮತ್ವವನ್ನು ಗೀತೆಯಲ್ಲಿ ಹೀಗೆ ವಿವರಿಸಿರುವನು—ಈ ಲೋಕದಲ್ಲಿ (ಅಂದರೆ ಈ ಲೋಕದಲ್ಲಿಯ ಈಶಿತವ್ಯವರ್ಗದಲ್ಲಿ) ಕ್ಷರ ಮತ್ತು ಅಕ್ಷರ ಎಂಬ ಎರಡು ವಿಧ ವಾದ ಪುರುಷ ಅಂದರೆ ಚೇತನರು ಇರುವದು ಪ್ರಮಾಣಪ್ರಸಿದ್ಧವಾಗಿರುವದು. ಇವುಗಳಲ್ಲಿ ಸರ್ವಾಣಿ ಭೂತಾನಿ ಅಂದರೆ ಬ್ರಹ್ಮಾದಿ ಸಕಲಜೀವರೂ 'ಕ್ಷರ' ಎಂದು ಕರೆಯಲ್ಪಡುವರು (ಯಾಕಂದರೆ ಅವರು 'ಕ್ಷರ' ಅಂದರೆ ನಾಶವುಳ್ಳವರಾಗಿರುವರು) ಕೂಟಸ್ಥ ಅಂದರೆ ಆಕಾಶದಂತೆ ನಿರ್ವಿಕಾರಳಾದ ಲಕ್ಷ್ಮೀದೇವಿಯು 'ಅಕ್ಷರ' ಎಂದು ಕರೆಯಲ್ಪಡುವಳು.

ಈ ಕ್ಷರ ಮತ್ತು ಅಕ್ಷರಗಳಿಂದ ಭಿನ್ನನಾದವನೂ ಪರಮಚೇತನನಾದವನೂ ಆದ ಪರಮಾತ್ಮನು ಉತ್ತಮ ಪುರುಷನೆಂದು ಕರೆಯಲ್ಪಡುತ್ತಾನೆ ಇವನು ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳಲ್ಲಿಯೂ ಇದ್ದು ಅವುಗಳ ಧಾರಣಪೋಷಣಾದಿಗಳನ್ನು ಮಾಡು ವನು ಅವ್ಯಯ ಅಂದರೆ ನಾಶರಹಿತನಾಗಿರುವನು ಈಶ್ವರ ಅಂದರೆ ಅಂಚಿತ್ಯಶಕ್ತಿ ಯುಳ್ಳವನು ಆಗಿರುವನು

ಈ ಕ್ಷರ ಅಂದರೆ ಬ್ರಹ್ಮಾದಿಜೀವರಾಶಿಗಳು, ಅಕ್ಷರ ಅಂದರೆ ಕೂಟಸ್ಥಳಾದ ಲಕ್ಷ್ಮೀ ದೇವಿಯು ಇವರಿಗಿಂತ ಉತ್ತಮೋತ್ತಮನಾಗಿರುವದರಿಂದಲೇ ಲೋಕ ಅಂದರೆ ಪೌರುಷೇಯ ಆಗಮಗಳಲ್ಲಿಯೂ, ವೇದ ಅಂದರೆ ಅಪೌರುಷೇಯ ಆಗಮಗಳಲ್ಲಿಯೂ ನಾನು ಪುರುಷೋತ್ತಮನೆಂದು ಪ್ರಖ್ಯಾತನಾಗಿದ್ದೇನೆ

ಯಾರು ನನ್ನನ್ನು ಈ ರೀತಿಯಾಗಿ ಪುರುಷೋತ್ತಮನೆಂದು ಮೋಹವಿಲ್ಲದೇ (ಈ ಪುರುಷೋತ್ತಮತ್ವವು ಪಾರಮಾರ್ಥಿಕವಲ್ಲ ಎಂಬ ಅಜ್ಞಾನವಿಲ್ಲದೇ) ತಿಳಿದುಕೊಳ್ಳು ವನೋ ಅವನೇ ಸರ್ವಶಾಸ್ತ್ರಗಳ ತಾತ್ಪರ್ಯವನ್ನು ತಿಳಿದುಕೊಂಡವನು ಅವನೇ ಎಲ್ಲ ರೀತಿಯಿಂದ ನನ್ನ ಭಜನೆಯನ್ನು ಮಾಡಬಲ್ಲವನು

ನಿಷ್ಕಲ್ಮಷನಾದ ಅರ್ಜುನ! ಅತಿರಹಸ್ಯವಾದ ಈ ಶಾಸ್ತ್ರಾರ್ಥವನ್ನು ನಿನಗೆ ಹೇಳಿರು ವೆನು. ಇದನ್ನು ತಿಳಿದುಕೊಂಡವನು ಬುದ್ಧಿಮಾನ್ ಅಂದರೆ ಅಪರೋಕ್ಷಜ್ಞಾನಿಯಾಗು ವನು ಕೃತಕೃತ್ಯ ಅಂದರೆ ಮುಕ್ತನಾಗುವನು

ಸರ್ವದೇವೋತ್ತಮನಾದ ವಿಷ್ಣುವಿನ ಸರ್ವೋತ್ಕೃಷ್ಟತ್ವದಲ್ಲಿಯೇ ಎಲ್ಲ ಆಗಮಗಳ ಮಹಾತಾತ್ಪರ್ಯವಿರುವದು ಬೇರೆ ಇನ್ನಾವ ವಿಷಯದಲ್ಲಿಯೂ ಮಹಾತಾತ್ಪರ್ಯ ವಿರುವದಿಲ್ಲ ಇನ್ನಿತರ ಧರ್ಮಾದಿ ವಿಷಯಗಳಲ್ಲಿ ಅವಾಂತರ ತಾತ್ಪರ್ಯವಿರುವದು ಯಾಕೆಂದರೆ ಮೋಕ್ಷರೂಪ ಪುರುಷಾರ್ಥವು ವಿಷ್ಣುವಿನಿಂದಲೇ ದೊರೆಯುವದು ಆದುದ ರಿಂದ ಇದು ಅವನಲ್ಲಿಯೇ ತಾತ್ಪರ್ಯ ಎಂಬುದು ಸತ್ಯವು ಎಂದು ಪೈಂಗಿಶ್ರುತಿಯು ಹೇಳುವದು

ಶ್ರೀಪತಿಯ ಸರ್ವೋತ್ತಮತ್ವದಲ್ಲಿಯೇ ಎಲ್ಲ ವೇದಗಳ ಮುಖ್ಯ ತಾತ್ಪರ್ಯವು ಇನ್ನಿತರ ವಿಷಯಗಳಲ್ಲಿ ಅವಾಂತರ ತಾತ್ಪರ್ಯವು ಎಂದು ಮಹಾವರಾಹದಲ್ಲಿ ಹೇಳಿದೆ

**ವಿವರಣೆ**—ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ ಎಲ್ಲ ಆಗಮಗಳ ತಾತ್ಪರ್ಯ ವಿರುವದು (ಜೀವ ಬ್ರಹ್ಮರ ಅಭೇದದಲ್ಲಿ ಇರುವದಿಲ್ಲ) ಎಂಬುದನ್ನು ಸಮರ್ಥಿಸಲು ಇಲ್ಲಿ ಗೀತೆ, ಪೈಂಗಿಶ್ರುತಿ ಮತ್ತು ಮಹಾವರಾಹ ವಚನಗಳನ್ನು ಉಲ್ಲೇಖಿಸಲಾಗಿದೆ ಅಭೇದದಲ್ಲಿ ತಾತ್ಪರ್ಯವಿಲ್ಲದೇ ಇರಬಹುದು ಆದರೆ ವಿಷ್ಣುಸರ್ವೋತ್ತಮತ್ವದಲ್ಲಿ ತಾತ್ಪರ್ಯವಿದೆ ಎಂದು ಹೇಗೆ ಹೇಳುವಿರಿ ಎಂಬ ಶಂಕೆಯನ್ನು ಪರಿಹರಿಸಲು ಈ ಪ್ರಮಾಣ ವಚನಗಳನ್ನು ಉಲ್ಲೇಖಿಸಲಾಗಿದೆ

**ಮೋಕ್ಷವೇ ಪರಮ ಪುರುಷಾರ್ಥ, ವಿಷ್ಣು ಪ್ರಸಾದದಿಂದಲೇ ಮೋಕ್ಷ.**

33 ಯುಕ್ತಂ ಚ ವಿಷ್ಣೋಃ ಸರ್ವೋತ್ತಮತ್ವೇ ಏವ ಮಹಾತಾತ್ಪರ್ಯಂ
ಸರ್ವಾಗಮಾನಾಮ್ । ಮೋಕ್ಷೋ ಹಿ ಸರ್ವಪುರುಷಾರ್ಥೋತ್ತಮಃ ।
ಧರ್ಮಾರ್ಥಕಾಮಾಃ ಸರ್ವೇऽಪಿ ನ ನಿತ್ಯಾ ಮೋಕ್ಷ ಏವ ಹಿ ।
ನಿತ್ಯಃ ತಸ್ಮಾತ್ ತದರ್ಥಾಯ ಯತೇತ ಮತಿಮಾನ್ ನರಃ ।
ಇತಿ ಭಾಲ್ಲವೇಯ ಶ್ರುತಿಃ

ಅನಿತ್ಯತ್ವಾತ್ ಸದುಃಖತ್ವಾತ್ ನ ಧರ್ಮಾದ್ಯಾಃ ಪರಂ ಸುಖಮ್ ।
ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಮ್ ॥
ಇತಿ ಭಾರತೇ

ಮೋಕ್ಷಶ್ಚ ವಿಷ್ಣುಪ್ರಸಾದೇನ ವಿನಾ ನ ಲಭ್ಯತೇ ।
ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್
ಅಸ್ಮಾತ್ ಸಂಸಾರಾತ್ ಮುಚ್ಯತೇ ನ ಅಪರೇಣ ।
ನಾರಾಯಣೋऽಸೌ ಪರಮೋ ವಿಚಿಂತ್ಯಃ
ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ।
ಇತಿ ನಾರಾಯಣ ಶ್ರುತಿಃ

ನಾಯಮಾತ್ಮಾ ಪ್ರವಚನೇನ ಲಭ್ಯಃ,
ನ ಮೇಧಯಾ, ನ ಬಹುನಾ ಶ್ರುತೇನ ।
ಯಮೇವ ಏಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ।
ಇತಿ ಕಠಶ್ರುತಿಃ

ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ।
ಇತಿ ಭಗವದ್ವಚನಮ್ ।

ಉತ್ಪತ್ತಿಸ್ಥಿತಿಸಂಹಾರಾ ನಿಯತಿಃ ಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ ಸ ಹರಿರೇಕರಾಟ್ ॥
ಇತಿ ಸ್ಕಾಂದೇ

ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ ।
ಆನಂದದಶ್ಚ ಮುಕ್ತಾನಾಂ ಸ ಏವ ಏಕೋ ಜನಾರ್ದನಃ ॥ ಇತಿ ಚ ।
ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ
ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥ ಇತಿ ಚ

**ಅನುವಾದ**—ಎಲ್ಲ ಆಗಮುಗಳೂ ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ ಮಹಾ ತಾತ್ಪರ್ಯವುಳ್ಳವುಗಳಾಗಿವೆ ಎಂಬುದು ಯುಕ್ತವೂ ಆಗಿದೆ. ಯಾಕಂದರೆ ಮೋಕ್ಷವು ಎಲ್ಲ ಪುರುಷಾರ್ಥಗಳಲ್ಲಿಯೂ ಉತ್ತಮವಾದುದು (ಇದು ವಿಷ್ಣುವಿನ ಪ್ರಸಾದವಿಲ್ಲದೆ ದೊರೆಯಲಾರದು) ಧರ್ಮ, ಅರ್ಥ, ಕಾಮ ಈ ಮೂರೂ ನಿತ್ಯವಾದ ಫಲಗಳನ್ನು ಕೊಡ ಲಾರವು ಮೋಕ್ಷವೊಂದೇ ನಿತ್ಯಫಲರೂಪವಾದುದು ಆದ್ದರಿಂದ ವಿವೇಕಿಯಾದವನು ಅದಕ್ಕಾಗಿ ಪ್ರಯತ್ನಿಸಬೇಕು ಎಂದು ಭಾಲ್ಲವೇಯ ಶ್ರುತಿಯಿದೆ

ಅನಿತ್ಯವೂ ದುಃಖಮಿಶ್ರವೂ ಆದ್ದರಿಂದ ಧರ್ಮಾದಿಗಳು ಪರಮಸುಖವನ್ನು ಕೊಡ ಲಾರವು ಸಂಸಾರದಲ್ಲಿ ಬಳಲುವವರಿಗೆ ಮೋಕ್ಷವೊಂದೇ ಪರಮಾನಂದವನ್ನು ಕೊಡುವದು ಎಂದು ಭಾರತದಲ್ಲಿ ಹೇಳಿದೆ.

ಈ ಮೋಕ್ಷವು ವಿಷ್ಣುವಿನ ಪ್ರಸಾದವಿಲ್ಲದೆ ದೊರೆಯಲಾರದು. ನಾರಾಯಣನ ಪ್ರಸಾದದಿಂದಲೇ ಪರಮ ದುಃಖಕರವಾದ ಈ ಸಂಸಾರದಿಂದ ಪಾರಾಗುವನು ಬೇರೆ ಯಾವ ಮಾರ್ಗದಿಂದಲೂ ಸಾಧ್ಯವಿಲ್ಲ ಆದ್ದರಿಂದ ಈ ಕರ್ಮಪಾಶದಿಂದ ಮುಕ್ತಿಯನ್ನು ಪಡೆಯಬೇಕೆನ್ನುವವರು ಸರ್ವೋತ್ತಮನಾದ ನಾರಾಯಣನ ಧ್ಯಾನವನ್ನು ಮಾಡಬೇಕು ಎಂದು ನಾರಾಯಣ ಶ್ರುತಿಯಿದೆ

ಪರಮಾತ್ಮನ ದರ್ಶನವು ಕೇವಲ ಪ್ರವಚನದಿಂದ ಆಗುವದಿಲ್ಲ, ಬುದ್ಧಿಬಲದಿಂದ ಆಗುವದಿಲ್ಲ, ಬಹುಶ್ರವಣದಿಂದ ಆಗುವದಿಲ್ಲ (ಪ್ರಸನ್ನನಾಗಿ) ಯಾರನ್ನ ಆಯ್ದು ಕೊಳ್ಳುವನೋ ಅವನಿಗೆ ತನ್ನ ಸ್ವರೂಪವನ್ನು ವ್ಯಕ್ತಪಡಿಸುವನು ಎಂದು ಕಠಶ್ರುತಿಯು ಹೇಳುತ್ತದೆ.

ಯಾರು ನನ್ನಲ್ಲಿಯೇ ಮನಸ್ಸನ್ನು ಇಡುವರೋ ಅವರನ್ನು ಜನನ-ಮರಣವೆಂಬ ಸಂಸಾರಸಾಗರದಿಂದ ಬೇಗನೇ ಉದ್ಧರಿಸುವೆನು ಎಂದು ಗೀತೆಯಲ್ಲಿ ಭಗವಂತನ ವಚನವಿದೆ.

ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಯಾವ ಪರಮಾತ್ಮನಿಂದ ಆಗುವವೋ ಅವನು ಸರ್ವಸ್ವತಂತ್ರನಾಗಿರುವನು ಎಂದು ಸ್ಕಾಂದದಲ್ಲಿ ಹೇಳಿದೆ.

ವಿಷ್ಣುವು ಅಜ್ಞಾನಿಗಳಿಗೆ ಜ್ಞಾನವನ್ನು ಕೊಡುವನು. ಜ್ಞಾನಿಗಳಿಗೆ ಮೋಕ್ಷವನ್ನು ಕೊಡುವನು. ಸರ್ವೋತ್ತಮನಾದ ಈ ಜನಾರ್ದನನೇ ಮುಕ್ತರಿಗೆ ಸ್ವರೂಪಸುಖರೂಪ ಆನಂದವನ್ನು ಕೊಡುವವನು ಎಂದೂ (ಸ್ಕಾಂದದಲ್ಲಿ) ಹೇಳಿದೆ.

ಸಂಸಾರಪಾಶದಿಂದ ಬಂಧಿಸುವವನೂ, ಆದರಿಂದ ಬಿಡಿಸುವವನೂ, ಕೈವಲ್ಯ ಅಂದರೆ ಸ್ವರೂಪಸುಖರೂಪಮುಕ್ತಿಯನ್ನು ಕೊಡುವವನೂ ಪರಬ್ರಹ್ಮರೂಪನಾದ ವಿಷ್ಣುವೇ ಆಗಿದ್ದಾನೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ ಎಂದೂ (ಸ್ಕಾಂದದಲ್ಲಿ) ಹೇಳಿದೆ

**ವಿವರಣೆ**—ಎಲ್ಲ ಆಗಮಗಳೂ ವಿಷ್ಣುವಿನಲ್ಲಿಯೇ ಮಹಾತಾತ್ಪರ್ಯವುಳ್ಳವುಗಳಾಗಿವೆ ಎಂಬ ಪ್ರಮೇಯಕ್ಕೆ ಶ್ರುತ್ಯುಕ್ತವಾದ ಯುಕ್ತಿಯನ್ನು ಇಲ್ಲಿ ಹೇಳಿದ್ದಾರೆ. ಪುರುಷಾರ್ಥಗಳಲ್ಲಿ ಮೋಕ್ಷವೇ ಉತ್ತಮಪುರುಷಾರ್ಥವು. ಅದು ಭಗವತ್ಪ್ರಸಾದದಿಂದಲೇ ದೊರೆಯುವದು ಶಾಸ್ತ್ರದ ಪ್ರಯೋಜನವು ಮೋಕ್ಷವೆಂಬ ಪುರುಷಾರ್ಥವನ್ನು ಒದಗಿಸುವದು ಆದ್ದರಿಂದ ಅದರ ಪ್ರತಿಪಾದ್ಯವಿಷಯನು ಮೋಕ್ಷವನ್ನು ಕೊಡುವ ವಿಷ್ಣುವೇ ಆಗಿದ್ದಾನೆ ಎಂಬುದನ್ನು ಶ್ರುತಿ, ಸ್ಮೃತಿ, ಪುರಾಣವಚನಗಳಿಂದ ವಿವರಿಸಿದ್ದಾರೆ.

**ವಿಷ್ಣುವಿನ ಸರ್ವೋತ್ತಮತ್ವಜ್ಞಾನದಿಂದಲೇ ಅವನ ಪ್ರಸಾದವು ದೊರೆಯುವದು.**

**34. ಪ್ರೀತಿಶ್ಚ ಗುಣೋತ್ಕರ್ಷಜ್ಞಾನಾದೇವ ವಿಶೇಷತೋ ದೃಷ್ಟಾ, ನ ಅಭೇದಜ್ಞಾನಾತ್ । ಅಭೇದಜ್ಞಾನಾತ್ ಅಪ್ರೀತಿರೇವ ಉತ್ತಮಾನಾಂ ಭವತಿ । ಘಾತಯಂತಿ ಹಿ ರಾಜಾನೋ ರಾಜಾಹಮಿತಿ ವದಂತಮ್ । ದದತಿ ಚ ಸರ್ವಮಭಿಪ್ರೇತಂ ಗುಣೋತ್ಕರ್ಷಂ ವದತಃ ।**

**ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ**
**ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।**
**ತತ್ಪ್ರೀಣನಾತ್ ಮೋಕ್ಷಮಾಪ್ನೋತಿ ಸರ್ವಃ**
**ತತೋ ವೇದಾಃ ತತ್ಪರಾಃ ಸರ್ವ ಏವ ॥**

**ಇತಿ ಸೌಪರ್ಣಶ್ರುತಿಃ**

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥**

**ಇತಿ ಗುಣೋತ್ಕರ್ಷಜ್ಞಾನಾದೇವ ಪರಮಾ ಪ್ರೀತಿಃ ಭಗವತ್ಯೈವ ಅಭಿಹಿತಾ । ಅತಃ ವಿಷ್ಣೋಃ ಗುಣೋತ್ಕರ್ಷ ಏವ ಸರ್ವಶ್ರುತಿಸ್ಮೃತೀನಾಂ ತಾತ್ಪರ್ಯಮ್ । ನ ಚ ಅಭೇದೇ ತಾತ್ಪರ್ಯಮಿತ್ಯತ್ರ ಕಿಂಚಿತ್ ಮಾನಮ್ ।**

**ಅನುವಾದ**—(ವಿಷ್ಣುವಿನ) ಪ್ರೀತಿಯು (ಅವನ) ಉತ್ಕೃಷ್ಟಗುಣಗಳ ಜ್ಞಾನದಿಂದಲೇ ಆಗುವದು (ಅವನು ಉತ್ಕೃಷ್ಟಗುಣಗಳುಳ್ಳವನು ಎಂಬ ಜ್ಞಾನ, ತತ್ಪೂರ್ವಕ ಆರಾಧನೆಯಿಂದಲೇ ಅವನಿಗೆ ಸಾಧಕನ ಮೇಲೆ ಪ್ರೀತಿಯುಂಟಾಗುವದು) ಇದು (ಗುಣೋತ್ಕರ್ಷಜ್ಞಾನದಿಂದ ಪ್ರೀತಿಯುಂಟಾಗುವದು) ವಿಶೇಷವಾಗಿ ಕಂಡುಬಂದಿದೆ.

ಆದರೆ ಅಭೇದಜ್ಞಾನದಿಂದ ಪ್ರೀತಿಯುಂಟಾಗುವದು ಕಂಡುಬಂದಿಲ್ಲ ಪ್ರತ್ಯುತ ಉತ್ತಮ ರಾದವರ ಅಭೇದಜ್ಞಾನದಿಂದ (ಅಧಮರು ತಾವು ಉತ್ತಮರಾದವರೊಡನೆ ಅಭಿನ್ನರು, ಅವರಿಗೆ ಸಮಾನರು ಎಂದು ತಿಳಿದುಕೊಂಡದ್ದರಿಂದ) ಉತ್ತಮರಿಗೆ ಅಪ್ರೀತಿಯೇ ಆಗುವದು ಯಾರಾದರೂ ತಾನೇ ರಾಜನೆಂದು ಹೇಳಿಕೊಂಡರೆ ರಾಜರು ಅವನನ್ನು ಕೊಲ್ಲಿಸುವರು ಆದರೆ ಅವರ ಗುಣಗಳ ಉತ್ಕರ್ಷವನ್ನು ಹೇಳಿದವರಿಗೆ ಬೇಕಾದುದೆಲ್ಲವನ್ನೂ ಕೊಡುವರು

ಸ್ತುತ್ಯನಾದ ವಿಷ್ಣುವಿಗೆ ತನ್ನ ಗುಣಗಳ ಉತ್ಕರ್ಷವನ್ನು ತಿಳಿದವರ ಮೇಲೆ ಎಷ್ಟು ಪ್ರೀತಿಯೋ ಅಷ್ಟು ಬೇರೆ ಯಾರ ಮೇಲೆಯೂ ಇರುವದಿಲ್ಲ ಭಗವಂತನ ಪ್ರೀತಿಯನ್ನು ಸಂಪಾದಿಸಿದವರು ಮೋಕ್ಷವನ್ನು ಪಡೆಯುವರು ಆದ್ದರಿಂದ ವೇದಗಳೆಲ್ಲ ಅವನಲ್ಲಿಯೇ ತಾತ್ಪರ್ಯವುಳ್ಳವುಗಳಾಗಿವೆ ಎಂದು ಸೌಪರ್ಣೀಶ್ರುತಿಯು ಹೇಳುತ್ತದ

ಯಾರು ಮೋಹವಿಲ್ಲದೆ (ಪರಮಾತ್ಮನು ಪುರುಷೋತ್ತಮ, ಸರ್ವೋತ್ತಮ ಎಂಬುದು ಪಾರಮಾರ್ಥಿಕವಲ್ಲ ಎಂಬ ಅಜ್ಞಾನವಿಲ್ಲದೆ) ನಾನು (ಪರಮಾತ್ಮನು) ಪುರುಷೋತ್ತಮ ಎಂದು ತಿಳಿದುಕೊಳ್ಳುವನೋ ಅವನು ಸರ್ವಶಾಸ್ತ್ರಗಳ ತಾತ್ಪರ್ಯವನ್ನು ಬಲ್ಲವನು ಮತ್ತು ಸರ್ವಪ್ರಕಾರದಿಂದಲೂ ನನ್ನನ್ನು ಭಜಿಸುವನು ಎಂದು ಗುಣೋತ್ಕರ್ಷಜ್ಞಾನದಿಂದಲೇ ಪರಮಪ್ರೀತಿಯುಂಟಾಗುವದೆಂದು ಸ್ವತಃ ಭಗವಂತನೇ ಹೇಳಿರುವನು ಆದ್ದರಿಂದ ವಿಷ್ಣುವಿನ ಗುಣೋತ್ಕರ್ಷವನ್ನು ಅಂದರೆ ಸರ್ವೋತ್ತಮತ್ವವನ್ನು ಹೇಳುವದರಲ್ಲಿಯೇ ಸಕಲ ಶ್ರುತಿ ಸ್ಮೃತಿಗಳ ಮಹಾತಾತ್ಪರ್ಯವು ಅವುಗಳಿಗೆ ಅಭೇದದಲ್ಲಿ ತಾತ್ಪರ್ಯ ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ

**ವಿವರಣೆ**—ಮೋಕ್ಷವೆಂಬ ಪರಮಪುರುಷಾರ್ಥವನ್ನು ಪಡೆಯಲು ಭಗವಂತನ ಪ್ರಸಾದ, ಪ್ರೀತಿಗಳೇ ಪ್ರಧಾನಸಾಧನ ಎಂದು ಈ ಹಿಂದೆ ಹೇಳಿದರು ಅದನ್ನು ಪಡೆಯಲು ಕರ್ಮಾದಿಗಳಿಂದ ಸಾಧ್ಯವಿಲ್ಲವೇ ? ಅವನ ಸರ್ವೋತ್ತಮತ್ವಜ್ಞಾನವೇ ಅತ್ಯಗತ್ಯವೇ ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಕೊಡುವರು ವಿಹಿತಕರ್ಮಾದ್ಯನುಷ್ಠಾನದಿಂದ ಭಗವಂತನ ಪ್ರೀತಿಯುಂಟಾಗುವದು ಆದರೆ ಅವನ ಪರಮ ಪ್ರೀತಿಯು ಅವನ ಗುಣೋತ್ಕರ್ಷಜ್ಞಾನ ದಿಂದಲೇ ಆಗುವದು. ಪರಮಪ್ರೀತಿಯೇ ಮೋಕ್ಷಸಾಧನವು. ಅಭೇದಜ್ಞಾನದಿಂದಲಂತೂ ಅಪ್ರೀತಿಯೇ ಉಂಟಾಗುವದು ಲೋಕದಲ್ಲಿಯೇ ಕಂಡುಬಂದಿದೆ ಅಧಮರಾದವರು ಉತ್ತಮರಿಗೆ ತಾವು ಅಭಿನ್ನರು, ಸಮಾನರು ವೆಂದು ಭಾವಿಸಿದರೆ ಆ ಉತ್ತಮರ ಅಪ್ರೀತಿಗೇ ಪಾತ್ರರಾಗುವದು ಕಂಡುಬರುತ್ತದೆ ಪರಮ ಪ್ರೀತಿಯೇ ಮೋಕ್ಷಸಾಧನವೆಂದು ಶ್ರುತಿ ಸ್ಮೃತಿಗಳು ಸಾರುತ್ತವೆ ಆದ್ದರಿಂದ ಅದಕ್ಕೆ ಸಾಧನವಾದ ಪರಮಾತ್ಮನ ಗುಣೋತ್ಕರ್ಷ ದಲ್ಲಿಯೇ ಸಕಲ ಶ್ರುತಿಸ್ಮೃತಿಗಳ ಮಹಾತಾತ್ಪರ್ಯವಿರುವದು ಸಹಜವಾಗಿದೆ ಅಭೇದದಲ್ಲಿ ಅವುಗಳ ತಾತ್ಪರ್ಯ ಎಂದು ಹೇಳಲು ಯಾವ ಪ್ರಮಾಣವೂ ಇಲ್ಲ

**ಅನ್ಯೋನ್ಯಾಶ್ರಯ ದೋಷ ಬರುವದರಿಂದ ಭೇದವು ಪ್ರತ್ಯಕ್ಷಸಿದ್ಧವಲ್ಲ ಎಂಬ ವಾದ ಸರಿಯಲ್ಲ.**

**35. ನ ಚ ವಿಶೇಷಣವಿಶೇಷ್ಯತಯಾ ಭೇದಸಿದ್ಧಿಃ। ವಿಶೇಷಣ ವಿಶೇಷ್ಯ-ಭಾವಶ್ಚ ಭೇದಾಪೇಕ್ಷಃ। ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸಿದ್ಧಿಃ ಭೇದಾಪೇಕ್ಷಂ ಚ ಧರ್ಮಿಪ್ರತಿಯೋಗಿತ್ವಮಿತ್ಯನ್ಯೋನ್ಯಾಶ್ರಯತಯಾ ಭೇದಸ್ಯಾಯುಕ್ತಿಃ। ಪದಾರ್ಥಸ್ವರೂಪತ್ವಾದ್ ಭೇದಸ್ಯ। ನ ಚ ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸ್ಯ ಅಸ್ವರೂಪತ್ವಮ್। ಐಕ್ಯವತ್ ಸ್ವರೂಪಸ್ಯೈವ ತಥಾತ್ವಾತ್।**

**ಸ್ವರೂಪಸಿದ್ಧಾವಪಿ ತದಸಿದ್ಧಿಶ್ಚ ಜೀವೇಶ್ವರೈಕ್ಯಂ ವದತಃ ಸಿದ್ಧೈವ। ಭೇದಸ್ತು ಸ್ವರೂಪದರ್ಶನ ಏವ ಸಿದ್ಧಃ। ಪ್ರಾಯಃ ಸರ್ವತೋ ವಿಲಕ್ಷಣಂ ಹಿ ಪದಾರ್ಥ-ಸ್ವರೂಪಂ ದೃಶ್ಯತೇ। ಅಸ್ಯ ಭೇದ ಇತಿ ತು ಪದಾರ್ಥಸ್ಯ ಸ್ವರೂಪಮಿತಿವತ್।**

**ಅನುವಾದ**—(ಎಲ್ಲ ಆಗಮುಗಳೂ ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ ತಾತ್ಪರ್ಯವುಳ್ಳವುಗಳಾಗಿವೆ ಎಂದು ಈವರೆಗೆ ಪ್ರತಿಪಾದಿಸಿದಿರಿ ಆದರೆ ಈ ಸರ್ವೋತ್ತಮತ್ವವು ಭೇದವಿದ್ದರೆ ಮಾತ್ರ ಸಾಧ್ಯ ಕ್ಷರ, ಅಕ್ಷರ ಮತ್ತು ಜಡಗಳಿಗಿಂತ ಉತ್ತಮವಾಗಿರಬೇಕಾದರೆ ಭಿನ್ನವಾಗಿರಬೇಕು ಆದರೆ ಭೇದವೇ ಯಾವ ಪ್ರಮಾಣದಿಂದಲೂ ಸಿದ್ಧವಾಗುವದಿಲ್ಲ ಎಂಬ ಆಕ್ಷೇಪ ಮಾಡಿ ಪರಿಹರಿಸುವರು) ಭೇದವು ('ಘಟಪಟೌ ಭಿನ್ನೌ' ಎಂದು ಘಟ ಮತ್ತು ಪಟಗಳ) ವಿಶೇಷಣವಾಗಿಯಾಗಲೀ ಅಥವಾ (ಘಟಪಟಯೋಃ ಭೇದಃ ಎಂದು ಘಟಪಟಗಳಿಗೆ) ವಿಶೇಷ್ಯವಾಗಿಯಾಗಲೀ ಸಿದ್ಧವಾಗುವದು ಆದರೆ ಈ ವಿಶೇಷಣ ವಿಶೇಷ್ಯಭಾವವು ಭೇದವನ್ನವಲಂಬಿಸಿರುವದು (ಯಾವದೇ ಎರಡು ಪರಸ್ಪರ ವಿಶೇಷಣ ವಿಶೇಷ್ಯಗಳಾಗಬೇಕಾದರೆ ಭಿನ್ನವಾಗಿರಬೇಕು) ಇದರಂತೆಯೇ ಧರ್ಮಿ ಮತ್ತು ಪ್ರತಿಯೋಗಿಗಳನ್ನು ಅವಲಂಬಿಸಿ ಭೇದವು ಸಿದ್ಧವಾಗುವದು ಧರ್ಮಿತ್ವ, ಪ್ರತಿಯೋಗಿತ್ವಗಳು ಭೇದವನ್ನವಲಂಬಿಸಿರುವವು ಹೀಗೆ (ಈ ಎರಡು ರೀತಿಯಿಂದಲೂ) ಅನ್ಯೋನ್ಯಾಶ್ರಯವು ಬರುವದರಿಂದ ಭೇದವೆಂಬ ಪದಾರ್ಥವೇ ಯುಕ್ತಿಯುಕ್ತವಾಗುವದಿಲ್ಲ ಎಂಬ ಆಕ್ಷೇಪವು ಸರಿಯಲ್ಲ ಯಾಕಂದರೆ ಭೇದವು ಧರ್ಮಿಸ್ವರೂಪವಾಗಿರುವದು (ಆದುದರಿಂದ ಧರ್ಮಿ ಪ್ರತೀತಿಯೇ ಭೇದಪ್ರತೀತಿಯು ಈ ಎರಡು ಪ್ರತೀತಿಗಳು ಭಿನ್ನವಾಗದೇ ಇರುವದರಿಂದ ಅನ್ಯೋನ್ಯಾಶ್ರಯವಿಲ್ಲ)

(ಧರ್ಮಿಯನ್ನು ನೋಡಿದ ಕೂಡಲೇ ಭೇದವೂ ಪ್ರತೀತವಾಗುವದಿಲ್ಲ) ಆದರೆ ಧರ್ಮಿ ಮತ್ತು ಪ್ರತಿಯೋಗಿಗಳ ಪ್ರತೀತಿಯನ್ನು ಅವಲಂಬಿಸಿಕೊಂಡು ಪ್ರತೀತವಾಗುವದರಿಂದ ಭೇದವು ಧರ್ಮಿಸ್ವರೂಪವಲ್ಲ ಎಂಬ ಆಕ್ಷೇಪವು ಸರಿಯಲ್ಲ. ಯಾಕಂದರೆ (ಅದ್ವೈತ ಮತದಲ್ಲಿ ಬ್ರಹ್ಮಸ್ವರೂಪದ ಪ್ರತೀತಿಮಾತ್ರದಿಂದ ಪ್ರತೀತವಾಗದೆ ಜೀವ-ಬ್ರಹ್ಮರೆಂಬ ಧರ್ಮಿ-ಪ್ರತಿಯೋಗಿಗಳ ಪ್ರತೀತಿಯನ್ನು ಅವಲಂಬಿಸಿ ಪ್ರತೀತವಾಗುವ) ಐಕ್ಯದಂತೆ

ಭೇದವೂ ಧರ್ಮಿಸ್ವರೂಪವಾಗಿದ್ದರೂ ಧರ್ಮಿಪ್ರತಿಯೋಗಿ ಪ್ರತೀತಿಸಾಪೇಕ್ಷವಾಗಿ ಪ್ರತೀತ ವಾಗಿರಬಹುದು (ಅಂದರೆ ಭೇದದ ಸ್ವರೂಪವು ಧರ್ಮಿಸ್ವರೂಪವಾಗಿದ್ದು ಪ್ರತೀತಿಯು ಮಾತ್ರ ಪ್ರತಿಯೋಗಿಪ್ರತೀತಿ ಸಾಪೇಕ್ಷವಾಗಿರಬಹುದು)

ಕೆಲವು ಸಂದರ್ಭಗಳಲ್ಲಿ ಧರ್ಮಿಯ ಸ್ವರೂಪವು ಪ್ರತೀತವಾದರೂ ಈ ಸ್ವರೂಪಭೂತ ವಾದ) ಭೇದವು ಪ್ರತೀತವಾಗದೇ ಇರುವದು (ಸ್ವಪ್ರಕಾಶವಾದ ಪ್ರತ್ಯಕ್ ಚೈತನ್ಯವು ಪ್ರತೀತವಾದರೂ ಅದರ ಸ್ವರೂಪವಾದ ಆದರೆ ಬ್ರಹ್ಮಜ್ಞಾನವಾಗುವವರಗ ಪ್ರತೀತವಾಗದ) ಜೀವೇಶ್ವರೈಕ್ಯವನ್ನು ಅಂಗೀಕರಿಸುವವರಿಗೆ (ಅದ್ವೈತಿಗಳಿಗೆ) ಸಮ್ಮತವೇ ಆಗಬೇಕಾದಂಥದು (ವಸ್ತುತಃ ವಿಚಾರಮಾಡಿದರೆ) ಧರ್ಮಿಯ ಸ್ವರೂಪದ ಪ್ರತೀತಿಯಾದಾಗಲೆಲ್ಲ ಭೇದದ ಪ್ರತೀತಿಯೂ ಆಗಿಯೇ ಆಗುವದು ಯಾಕಂದರೆ (ಸಂಶಯಾದಿ ಸ್ಥಳಗಳನ್ನು ಬಿಟ್ಟರೆ ಇನ್ನೆಲ್ಲ ಸಂದರ್ಭದಲ್ಲಿ) ಪದಾರ್ಥಗಳ ಸ್ವರೂಪವು ಇನ್ನಿತರ ಎಲ್ಲ ಪದಾರ್ಥಗಳಿಗಿಂತ ಭಿನ್ನ ವಾಗಿಯೇ ತೋರುತ್ತದೆ (ಹೀಗೆ ಪದಾರ್ಥಸ್ವರೂಪ ಮತ್ತು ಭೇದ ಒಂದೇ ಆಗಿದ್ದರೂ) 'ಇದರ ಭೇದವು' ಎಂಬ ವ್ಯವಹಾರವು 'ಪದಾರ್ಥದ ಸ್ವರೂಪ' ಎಂಬ ವ್ಯವಹಾರದಂತಿರು ವದು (ಪದಾರ್ಥ ಮತ್ತು ಅದರ ಸ್ವರೂಪ ಒಂದೇ ಆಗಿದ್ದರೂ ಪದಾರ್ಥದ ಸ್ವರೂಪ ಎಂದು ಸಂಬಂಧಿ ಪದಾರ್ಥಗಳಂತೆ ಹೇಳಿದ ಹಾಗೆ ಭೇದವು ಪದಾರ್ಥದ ಸ್ವರೂಪವಾದರೂ ಇದರ ಭೇದ ಎಂಬ ವ್ಯವಹಾರ ಒಮ್ಮೊಮ್ಮೆ ಕಂಡುಬರುತ್ತದೆ)

**ದ್ವೈತಮತದಲ್ಲಿ ಭೇದವು ಧರ್ಮಿಸ್ವರೂಪವಾಗಿದೆ.**

**ವಿವರಣೆ**— ಪದಾರ್ಥಗಳ ಪರಸ್ಪರ ಭೇದವು ಪ್ರತ್ಯಕ್ಷಸಿದ್ಧವೆಂಬುದು ಎಲ್ಲರೂ ಒಪ್ಪುವ ಸಿದ್ಧಾಂತ ಆದರೆ ಅದ್ವೈತಿಗಳು ಈ ಭೇದವನ್ನು ಅಲ್ಲಗಳೆಯುವರು ಭೇದ ವೆಂಬ ಪದಾರ್ಥವೇ ಯುಕ್ತಿಯುಕ್ತವಲ್ಲವೆಂದು ಹೇಳುವರು ಅವರ ಆಕ್ಷೇಪಗಳಿಗೆ ಇಲ್ಲಿ ಉತ್ತರ ಹೇಳಲಾಗಿದೆ ದ್ವೈತಮತದಲ್ಲಿ ಭೇದವು ಅಭಾವವಲ್ಲ ಅದು ನ್ಯಾಯವೈಶೇಷಿಕರು ಹೇಳುವಂತೆ ಅನ್ಯೋನ್ಯಾಭಾವವಲ್ಲ ಅದು ಪದಾರ್ಥಸ್ವರೂಪ ಆಯಾ ಪದಾರ್ಥಗಳ ಸ್ವರೂಪವೇ ಅದಕ್ಕೆ ಇತರ ಪದಾರ್ಥಗಳೊಡನೆ ಇರುವ ಭೇದ ಆದುದರಿಂದ ಪ್ರತಿಯೊಂದು ಪದಾರ್ಥವನ್ನು ನೋಡಿದಾಗಲೂ ಅದು ಇತರ ಪದಾರ್ಥಗಳಿಗಿಂತ ಭಿನ್ನ ಎಂಬುದೂ ತಿಳಿಯುವದು ಒಂದೊಂದು ಪದಾರ್ಥದ ಸ್ವರೂಪವೂ ಇತರ ಎಲ್ಲ ಪದಾರ್ಥಗಳ ಸ್ವರೂಪಕ್ಕಿಂತ ವಿಲಕ್ಷಣವಾಗಿರುವದು. ಇದೇ ಅದರಲ್ಲಿರುವ ಭೇದವು ಇದು ಆಯಾ ಪದಾರ್ಥಗಳನ್ನು ನೋಡಿದ ಕೂಡಲೇ ಸಾಮಾನ್ಯವಾಗಿ ತಿಳಿಯುವದು. ಇನ್ನಿತರ ಪದಾರ್ಥಗಳ ದೃಷ್ಟಿಯಿಂದ ನೋಡಿದಾಗ ಆಯಾ ಪದಾರ್ಥಗಳೊಡನೆ ಭೇದವು ತಿಳಿಯು ವದು. ಯಾವ ಪದಾರ್ಥವು ಭಿನ್ನ ಎಂದು ಹೇಳುತ್ತಿರುವೆವೋ ಅದಕ್ಕೆ ಸಂಸ್ಕೃತದಲ್ಲಿ 'ಧರ್ಮೀ' ಎಂದು ಹೇಳುವರು ಯಾವದರಿಂದ ಭಿನ್ನ ಎಂದು ಹೇಳುತ್ತಿರುವೆವೋ ಅದಕ್ಕೆ 'ಪ್ರತಿಯೋಗಿ' ಎಂದು ಹೇಳುವರು ಘಟವು ಪಟದಿಂದ ಭಿನ್ನ ಎಂದು ಹೇಳಿದಾಗ ಘಟವು ಧರ್ಮಿಯು, ಪಟವು ಪ್ರತಿಯೋಗಿಯು. ಘಟದಲ್ಲಿರುವ ಪಟದ ಈ ಭೇದವು ಧರ್ಮಿಸ್ವರೂಪ

ಅಂದರೆ ಘಟಸ್ವರೂಪವಾಗಿರುವದು ಘಟದ ವಿಲಕ್ಷಣ ಸ್ವರೂಪವೇ ಅದರಲ್ಲಿ ಪಟಾದಿಗಳಿಂದ ಇರುವ ಭೇದವು ಘಟವನ್ನು ನೋಡಿದ ಕೂಡಲೇ ಅದು ಇನ್ನಿತರ ಎಲ್ಲ ಪದಾರ್ಥಗಳಿಗಿಂತ ಭಿನ್ನ ಎಂದು ಕೂಡಲೇ ತಿಳಿದುಬರುವದು ಆದರೆ ಪಟದಿಂದ ಭಿನ್ನ, ಕುಡ್ಯದಿಂದ ಭಿನ್ನ ಇತ್ಯಾದಿ ತತ್ತದ್ಭೇದಗಳು ಆಯಾ ನಿರೂಪಕಗಳು ತಿಳಿದಾಗ ತಿಳಿಯುವದು ಘಟದ ಸ್ವರೂಪವಾದ ಭೇದವು ಸಾಮಾನ್ಯಾಕಾರದಿಂಗ ಪಟಾದಿಜ್ಞಾನನಿರಪೇಕ್ಷವಾಗಿಯೇ ತಿಳಿದುಬರುವದು ಆದರೆ ಆ ಭೇದವು ಪಟಭೇದ, ಕುಡ್ಯಭೇದ ಇತ್ಯಾದಿಯಾಗಿ ವಿಶೇಷಾಕಾರದಿಂದ ತಿಳಿಯಬೇಕಾದರೆ ಪಟಾದಿಗಳ ಜ್ಞಾನದ ಅಪೇಕ್ಷೆ ಇರುವುದು ಈ ಪ್ರಮೇಯವನ್ನು ಅದ್ವೈತಿಗಳ ಆಕ್ಷೇಪ ಪರಿಹಾರ ಮಾಡಿ ಇಲ್ಲಿ ವಿವರಿಸಿದ್ದಾರೆ

**ಭೇದವು ಧರ್ಮಿಸ್ವರೂಪವಾದ್ದರಿಂದ ಅನ್ಯೋನ್ಯಾಶ್ರಯ ದೋಷಕ್ಕೆ ಅವಕಾಶವಿಲ್ಲ.**

ಭೇದದ ವಿಷಯದಲ್ಲಿ ಅದ್ವೈತಿಗಳ ಆಕ್ಷೇಪ ಹೀಗಿದೆ—ಭೇದವು ತಿಳಿಯಬೇಕಾದರೆ 'ಘಟಪಟಗಳು ಭಿನ್ನ' ಅಥವಾ 'ಘಟಪಟಗಳ ಭೇದ' ಎಂದು ತಿಳಿದುಬರಬೇಕು ಮೊದಲನೆಯ ಪ್ರಯೋಗದಲ್ಲಿ ಘಟಪಟಗಳು ವಿಶೇಷ್ಯವಾಗಿದ್ದು ಭೇದವು ವಿಶೇಷಣವಾಗಿದೆ ಎರಡನೆಯ ಪ್ರಯೋಗದಲ್ಲಿ ಘಟಪಟಗಳು ವಿಶೇಷಣವಾಗಿದ್ದು ಭೇದವು ವಿಶೇಷ್ಯವಾಗಿದೆ. ಅಂತೂ ಭೇದವು ವಿಶೇಷಣ ಅಥವಾ ವಿಶೇಷ್ಯವಾಗಿ ತಿಳಿಯಬೇಕು ಆದರೆ ಈ ವಿಶೇಷಣ ವಿಶೇಷ್ಯಭಾವವು ಭೇದವನ್ನವಲಂಬಿಸಿದೆ. ಎರಡು ವಸ್ತುಗಳು ಭಿನ್ನವಾಗಿದ್ದರೆ ಮಾತ್ರ ವಿಶೇಷಣ ವಿಶೇಷ್ಯಗಳಾಗಬಲ್ಲವು ಆದ್ದರಿಂದ ಭೇದವು ತಿಳಿಯದೆ ವಿಶೇಷಣ ವಿಶೇಷ್ಯಭಾವವು ತಿಳಿಯುವದಿಲ್ಲ ವಿಶೇಷಣ ವಿಶೇಷ್ಯಭಾವ ತಿಳಿಯದೆ ಭೇದವು ತಿಳಿಯುವದಿಲ್ಲ ಹೀಗೆ ಅನ್ಯೋನ್ಯಾಶ್ರಯ ದೋಷ ಬರುವದರಿಂದ ಭೇದವೆಂಬುದು ಸಿದ್ಧವಾಗುವದಿಲ್ಲ ಎಂಬುದು ಅದ್ವೈತಿಗಳ ಆಕ್ಷೇಪ

ಇದರಂತೆಯೇ ಭೇದವು ತಿಳಿಯಬೇಕಾದರೆ ಯಾವದಕ್ಕೆ ಯಾವದರಿಂದ ಭೇದ ತಿಳಿಯಬೇಕೋ ಅವೆರಡೂ ತಿಳಿಯಬೇಕು 'ಯಾವದಕ್ಕೆ' ಎಂಬುದು ಧರ್ಮಿಯು, ಯಾವದರಿಂದ ಎಂಬುದು ಪ್ರತಿಯೋಗಿಯು, ಇವೆರಡೂ ಅಂದರೆ ಧರ್ಮಿಪ್ರತಿಯೋಗಿಗಳು ತಿಳಿಯಬೇಕು ಇವು ಧರ್ಮೀ, ಪ್ರತಿಯೋಗೀ ಎಂಬುದು ಭೇದವು ತಿಳಿಯದೆ ತಿಳಿಯಲಾರದು ಆದ್ದರಿಂದ ಅನ್ಯೋನ್ಯಾಶ್ರಯದೋಷವು ಈ ರೀತಿಯಾಗಿಯೂ ಬರುವದು. ಆದುದರಿಂದ ಭೇದವೆಂಬ ಪದಾರ್ಥವೇ ಸಿದ್ಧವಾಗುವದಿಲ್ಲ ಎಂಬುದು ಅದ್ವೈತಿಗಳ ವಾದವು.

ಇದು ಭೇದವು ಪದಾರ್ಥಕ್ಕಿಂತ ಭಿನ್ನ ಎಂಬ ತಪ್ಪುಕಲ್ಪನೆಯಿಂದ ಮಾಡಿದ ವಾದವು ಭೇದವು ಪದಾರ್ಥದ ಅಂದರೆ ಧರ್ಮಿಯ ಸ್ವರೂಪವೇ ಆಗಿರುವದು ಆದುದರಿಂದ ಧರ್ಮಿ ತಿಳಿದೊಡನೆ ಅದು ತಿಳಿದೇಬಿಡುವದು ಆದುದರಿಂದ ಅನ್ಯೋನ್ಯಾಶ್ರಯದ ಪ್ರಸಕ್ತಿಯೇ ಇಲ್ಲ ಇನ್ನು ಘಟದಲ್ಲಿರುವ ಪಟದ ಭೇದವು ತಿಳಿಯಬೇಕಾದರೆ ಮೊದಲು ಘಟ ಮತ್ತು ಪಟಗಳ ಜ್ಞಾನ ಬೇಕು. ಘಟ ತಿಳಿದೊಡನೆಯೇ ಅದು ಪಟದಿಂದ ಭಿನ್ನ

ಎಂಬುದು ಗೊತ್ತಾಗುವದಿಲ್ಲ ಎಂದು ಅದ್ವೈತಿಯು ವಾದಿಸಬಹುದು ಆದರೆ ಅದ್ವೈತಮತ ದಲ್ಲಿಯೇ ಜೀವಬ್ರಹ್ಮರ ಐಕ್ಯವನ್ನು ಬ್ರಹ್ಮಸ್ವರೂಪವೆಂದು ಪರಿಗಣಿಸುತ್ತಾರೆ ಸ್ವಯಂ ಪ್ರಕಾಶವಾದ ಈ ಬ್ರಹ್ಮಸ್ವರೂಪವು ಯಾವಾಗಲೂ ತಿಳಿದಿರುತ್ತದೆ ಆದರೆ ಜೀವನು ಬ್ರಹ್ಮನೊಡನೆ ಐಕ್ಯವುಳ್ಳವನಾಗಿದ್ದಾನೆ ಎಂದು ಧರ್ಮಿ–ಪ್ರತಿಯೋಗಿಗಳನ್ನವಲಂಬಿಸಿಯೇ ಈ ಐಕ್ಯಜ್ಞಾನವುಂಟಾಗುತ್ತದೆ ಸ್ವರೂಪಜ್ಞಾನವಾದಾಗಲೆಲ್ಲ ಐಕ್ಯಜ್ಞಾನವೂ ಆಗುತ್ತಿದ್ದರೆ ಆತ್ಮೈಕ್ಯೋಪದೇಶದ ಅಗತ್ಯವೇ ಇರುತ್ತಿರಲಿಲ್ಲ ಆದ್ದರಿಂದ ಸ್ವರೂಪವು ತಿಳಿದಾಗಲೆಲ್ಲ ಅದಕ್ಕೆ ಅಭಿನ್ನವಾದವುಗಳೆಲ್ಲ ತಿಳಿಯಬೇಕೆಂದಿಲ್ಲ ಪದಾರ್ಥದ ಸ್ವರೂಪ ನಿರಪೇಕ್ಷವಾಗಿ ತಿಳಿಯುತ್ತದೆ. ಅದಕ್ಕೆ ಅಭಿನ್ನವಾದ ಭೇದವು ನಿರೂಪಕವಾದ ಪ್ರತಿಯೋಗಿಗಳು ತಿಳಿದಾಗ ತಿಳಿಯುತ್ತದೆ ಅದು ಸ್ವರೂಪಭೂತವಾಗಿದೆ ಅದರ ತಿಳುವಳಿಕೆ ನಿರೂಪಕ ಸಾಪೇಕ್ಷ ವಾಗಿದೆ (ಸ್ವರೂಪಭೇದವನ್ನು ಒಪ್ಪುವ ಪ್ರಾಭಾಕರರು ಯಜ್ಞದತ್ತನ ತಂದೆಯಾದ ದೇವದತ್ತನ ಪಿತೃತ್ವವು ಅವನ ಸ್ವರೂಪಭೂತವಾಗಿದೆ ಆದರೆ ಅದು ನಿರೂಪಕವಾದ ಯಜ್ಞದತ್ತನ ಪುತ್ರತ್ವವು ತಿಳಿದಾಗ ಮಾತ್ರ ತಿಳಿಯುತ್ತದೆ ಎಂಬ ಉದಾಹರಣೆಯನ್ನು ಕೊಡುತ್ತಾರೆ) ಪ್ರತ್ಯಕ್ ಚೈತನ್ಯವು ಸ್ವಯಂಪ್ರಕಾಶವಾದ್ದರಿಂದ ಯಾವಾಗಲೂ ತಿಳಿದರೂ ಅದರಿಂದ ಅಭಿನ್ನವಾದ ಆತ್ಮೈಕ್ಯವು ತಿಳಿದಿರುವದಿಲ್ಲ ಅದು ಉಪದೇಶದ ನಂತರ ತಿಳಿಯುತ್ತದೆ ಎಂದು ಅದ್ವೈತಿಗಳೇ ಒಪ್ಪಿದ್ದಾರೆ.

ವಸ್ತುತಃ ವಿಚಾರಮಾಡಿದರೆ, ಆಯಾ ಪದಾರ್ಥಗಳ ಸ್ವರೂಪ ತಿಳಿಯುವಾಗ ಅವು ಇತರ ಎಲ್ಲ ಪದಾರ್ಥಗಳಿಗಿಂತ ಭಿನ್ನ ಎಂಬುದೂ ಸಾಮಾನ್ಯಾಕಾರೇಣ ತಿಳಿದೇ ತಿಳಿದಿರು ತ್ತದೆ. ಇದರಿಂದ ಭೇದವು ಸ್ವರೂಪಭೂತವೇ ಎಂಬುದು ಸ್ಪಷ್ಟವಾಗುತ್ತದೆ ಇನ್ನು ಇದು ಘಟದ ಭೇದ, ಪಟದ ಭೇದ ಎಂದು ವಸ್ತು ಮತ್ತು ಭೇದ ಪ್ರತ್ಯೇಕವಾಗಿರುವಂತೆ ಕೆಲವೊಮ್ಮೆ ಕಂಡುಬರುವ ವ್ಯವಹಾರವು ಔಪಚಾರಿಕವಾಗಿದೆ ಪದಾರ್ಥದ ಸ್ವರೂಪವನ್ನೇ ಪದಾರ್ಥ ಮತ್ತು ಅದರ ಸ್ವರೂಪ ಎಂದು ಔಪಚಾರಿಕವಾಗಿ ಹೇಳುವಂತೆ ಈ ವ್ಯವಹಾರ ವಿದೆ. ದ್ವೈತಮತದಲ್ಲಿ ಸವಿಶೇಷಾಭೇದದಿಂದ ಇಂಥ ವ್ಯವಹಾರವನ್ನು ನಿರ್ವಹಿಸುವದನ್ನು ಬೇರೆ ಕಡೆಗೆ ವಿವರಿಸಿದ್ದಾರೆ

**ಭೇದವು ಧರ್ಮಿಸ್ವರೂಪವೇ ಆಗಿದೆ.**

**36. ಯದಿ ನ ಸ್ವರೂಪಂ ಭೇದಃ ತದಾ ಪದಾರ್ಥೇ ದೃಷ್ಟೇ ಪ್ರಾಯಃ ಸರ್ವತೋ ವೈಲಕ್ಷಣ್ಯಂ ತಸ್ಯ ನ ಜ್ಞಾಯೇತ । ಅಜ್ಞಾತೇ ಚ ವೈಲಕ್ಷಣ್ಯೇ ಆತ್ಮನಿ ಘಟಃ ಇತ್ಯಪಿ ಸಂಶಯಃ ಸ್ಯಾತ್ । ನ ಹಿ ಕಶ್ಚಿತ್ ತಥಾ ಸಂಶಯಂ ಕರೋತಿ । ನ ಹಿ ಆತ್ಮನಿ ಅಹಂ ದೇವದತ್ತೋ ನ ವಾ ಇತಿ ಕಸ್ಯಚಿತ್ ಸಂಶಯೋ ಭವತಿ । ಸಾಮಾನ್ಯತಃ ಸರ್ವವೈಲಕ್ಷಣ್ಯೇ ಜ್ಞಾತ ಏವ ಘಟತ್ವಾದಿ ಜ್ಞಾನವತ್ । ಅತೋ ನಾನ್ಯೋನ್ಯಾಶ್ರಯತಾ ।**

**ನ ಚ ಯುಗಪತ್ ಜ್ಞಾನಾನುತ್ಪತ್ತಿದೋಷಃ । ಯಥಾ ಯುಗಪದೇವ ದೀಪಸಹಸ್ರದರ್ಶನೇ ಸಾಮಾನ್ಯತಃ ಸರ್ವೇ ಜ್ಞಾಯಂತೇ ಏವ ತಥಾ ಸ್ಯಾತ್ । ಏಕಸ್ಮಿನ್ನೇವ ವಸ್ತುನಿ ವಿಶೇಷಃ ತೈರಪಿ ಅಂಗೀಕೃತ ಏವ । 'ನೇತಿ ನೇತಿ' ಇತ್ಯತ್ರ ಸರ್ವವೈಲಕ್ಷಣ್ಯಾಂಗೀಕಾರಾತ್ । ವಿಶೇಷಾನಂಗೀಕಾರೇ ಚ ಪುನರುಕ್ತೇಃ । ನ ಚ ಘಟಾದ್ ವೈಲಕ್ಷಣ್ಯಮೇವ ಪಟಾದ್ ವೈಲಕ್ಷಣ್ಯಮ್ ಅನುಭವವಿರೋಧಾತ್ । ತಸ್ಮಾದ್ ಭೇದದರ್ಶನಂ ಯುಕ್ತಮೇವ ।**

**ಅನುವಾದ**—(ಅನ್ಯೋನ್ಯಾಶ್ರಯದೋಷ ಬರುತ್ತದೆ ಎಂಬ ಕಾರಣ ತೋರಿಸಿ ಭೇದವನ್ನೇ ಒಪ್ಪಿಕೊಳ್ಳಲು ಹಿಂಜರಿಯುತ್ತಿದ್ದ ಅದ್ವೈತಿಗಳಿಗೆ ಅನ್ಯೋನ್ಯಾಶ್ರಯವಿಲ್ಲ ವೆಂದು ತೋರಿಸಿಕೊಟ್ಟು ಭೇದವನ್ನು ಒಪ್ಪಿಸಿದರು ಈಗ ಭೇದವನ್ನು ಒಪ್ಪಿದರೂ ಅದು ಧರ್ಮಿಸ್ವರೂಪವೆಂದು ಹೇಳಲು ಹಿಂಜರಿಯುತ್ತಿರುವವರ ಶಂಕೆಗಳನ್ನು ಪರಿಹರಿಸುವರು) ಭೇದವು ಧರ್ಮಿಸ್ವರೂಪ ಎಂದು ಒಪ್ಪಿಕೊಳ್ಳದಿದ್ದರೆ ಆಯಾ ಪದಾರ್ಥಗಳನ್ನು ನೋಡಿದಾಗ ಅವು ಇನ್ನಿತರ ಎಲ್ಲ ಪದಾರ್ಥಗಳಿಗಿಂತ ವಿಲಕ್ಷಣ ಎಂಬುದು ತಿಳಿಯದೇ ಹೋಗುವ ಪ್ರಸಂಗವು ಬರುವದು ಇಂಥ ಈ ವೈಲಕ್ಷಣ್ಯವು ತಿಳಿಯದೇ ಹೋದರೆ ನಾನು ಘಟ ಎಂಬ ಸಂಶಯಕ್ಕೂ ಅವಕಾಶವುಂಟಾಗುವದು (ನಾನು ಎಂದು ತನ್ನ ಜ್ಞಾನವಾದಾಗ ಇನ್ನಿತರ ಪದಾರ್ಥಗಳೊಡನೆ ತನಗಿರುವ ಭೇದವು ಸಾಮಾನ್ಯವಾಗಿಯೂ ತಿಳಿಯದೇ ಹೋದರೆ ತನಗೂ ಘಟಾದಿಗಳಿಗೂ ಇರುವ ಭೇದವೇ ತಿಳಿಯದೆ ನಾನು ಘಟ ಎಂಬ ಸಂಶಯ ಬರಲಿ ಎಂಬ ಆಕ್ಷೇಪಕ್ಕೆ ಅವಕಾಶವಾಗುವದು) ಆದರೆ ಇಂಥ ಸಂಶಯವು ಯಾರಿಗೂ ಉಂಟಾ ಗುವದಿಲ್ಲ ಒಂದು ಪದಾರ್ಥವನ್ನು ನೋಡಿದೊಡನೆ ಅದು ಇತರ ಪದಾರ್ಥಗಳಿಗಿಂತ ವಿಲಕ್ಷಣವಾಗಿರುವದು ಎಂಬ ಭೇದವು ಸಾಮಾನ್ಯವಾಗಿ ತಿಳಿದಮೇಲೆಯೇ ಸದೃಶವಾದ ಪದಾರ್ಥದೊಡನೆ ಅದಕ್ಕಿರುವ ಭೇದದ ವಿಷಯದಲ್ಲಿ ಮಾತ್ರ ಒಮ್ಮೊಮ್ಮೆ ಸಂದೇಹವುಂಟಾ ಗುವದು (ಸಾಮಾನ್ಯವಾಗಿ ಭೇದವೇ ತಿಳಿಯದಿದ್ದರೆ ಸದೃಶಪದಾರ್ಥಗಳಲ್ಲಿ ಮಾತ್ರ ಸಂಶಯವುಂಟಾಗದೆ ಯಾವ ಬೇಕಾದ ಪದಾರ್ಥದೊಡನೆ, ಸಂಶಯವುಂಟಾಗಬಹುದು) ತನ್ನ ವಿಷಯದಲ್ಲಿಯೇ ತಾನು ದೇವದತ್ತನೋ ಅಥವಾ ಘಟವೋ ಎಂಬ ಸಂಶಯವು ಯಾರಿಗೂ ಉಂಟಾಗುವದಿಲ್ಲ (ಘಟಾದಿಗಳಲ್ಲಿ ಘಟತ್ವಾದಿ ಅಸಾಧಾರಣ ಧರ್ಮಗಳಿರುವದು ತಿಳಿದಿರುವದರಿಂದ ಇಂಥ ಸಂದೇಹಕ್ಕೆ ಅವಕಾಶವಿಲ್ಲವೆಂದು ಸಮಾಧಾನ ಹೇಳಲು ಬರುವ ದಿಲ್ಲ) ಯಾಕಂದರೆ ಸಾಮಾನ್ಯವಾಗಿ ಇನ್ನಿತರ ಪದಾರ್ಥಗಳೊಡನೆ ವೈಲಕ್ಷಣ್ಯವು ತಿಳಿದ ಮೇಲೆಯೇ ಘಟತ್ವಾದಿ ಅಸಾಧಾರಣ ಧರ್ಮಗಳ ಜ್ಞಾನವಾಗುವದು. (ಅಂದರೆ ಪದಾರ್ಥ ಸ್ವರೂಪಭೂತವಾದ ಭೇದವು ಸಾಮಾನ್ಯವಾಗಿ ತಿಳಿದಮೇಲೆಯೇ ಘಟಪಟಾದಿ ವಿಶೇಷ ವೈಲಕ್ಷಣ್ಯವು ತಿಳಿದುಬರುವದು ಆದರೆ ಸಾಮಾನ್ಯವಾಗಿ ಭೇದಜ್ಞಾನವೇ ಇಲ್ಲದಿದ್ದರೆ ವಿಶೇಷ ವೈಲಕ್ಷಣ್ಯಜ್ಞಾನವೂ ಇಲ್ಲದೆ ತಾನು ದೇವದತ್ತನೋ ಘಟವೋ ಎಂಬ ಸಂಶಯ ಬರಲಿ ಎಂಬ ಆಕ್ಷೇಪ ಉಳಿದೇ ಉಳಿಯುವದು. ಇದನ್ನು ಪರಿಹರಿಸಲು ಸ್ವರೂಪಭೂತ

ವಾದ ಭೇದದ ಸಾಮಾನ್ಯಜ್ಞಾನವನ್ನು ಒಪ್ಪಲೇಬೇಕಾಗುವದು) ಹೀಗೆ ಭೇದವು ಪದಾರ್ಥ ಸ್ವರೂಪವೇ (ಅಂದರೆ ಧರ್ಮಿಸ್ವರೂಪವೇ) ಆದ್ದರಿಂದ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ

(ಭೇದವು ಧರ್ಮಿಸ್ವರೂಪವಾದರೆ) ಧರ್ಮಿಯು ಮತ್ತು ಅದರ ಭೇದದ ಎಲ್ಲ ಪ್ರತಿಯೋಗಿಗಳ ಜ್ಞಾನವು ಒಟ್ಟಿಗೇ ಆಗಲಿ ಎಂಬ ಪ್ರಸಂಗವು ಬರುವದು (ಹೀಗೆ ಒಟ್ಟಿಗೆ ಜ್ಞಾನವಾಗುವದಿಲ್ಲವೆಂಬುದೇ ಭೇದವು ಧರ್ಮಿಸ್ವರೂಪ ಎಂದು ಹೇಳಲು ಬಾಧಕವು) ಎಂಬ ಆಕ್ಷೇಪವು ಸರಿಯಲ್ಲ ಯಾಕಂದರೆ ಒಟ್ಟಿಗೆ ಸಾವಿರಾರು ದೀಪಗಳನ್ನು ಕಂಡಾಗ ಅವುಗಳ ಸಮುದಾಯಾವಲಂಬಿಯಾದ ಒಂದು ಜ್ಞಾನವುಂಟಾದಂತೆ ಧರ್ಮಿ ಪ್ರತಿಯೋಗಿಗಳ ಸಮುದಾಯಾವಲಂಬಿಯಾದ ಒಂದು ಜ್ಞಾನವಾಗಲು ಯಾವ ಬಾಧಕವೂ ಇಲ್ಲ (ಒಟ್ಟಿಗೆ ಅನೇಕ ಜ್ಞಾನಗಳು ಉಂಟಾಗುವದಿಲ್ಲ ಸಮುದಾಯಾವಲಂಬಿಯಾದ ಒಂದು ಜ್ಞಾನವು ಆಗಲು ಬಾಧಕವಿಲ್ಲ)

(ಧರ್ಮಿ ಮತ್ತು ಭೇದಗಳು ಅಭಿನ್ನವಾಗಿದ್ದರೂ ಈ ಅಭೇದವು ಸವಿಶೇಷಾಭೇದ ವಾದ್ದರಿಂದ ಅವೆರಡೂ ಪರ್ಯಾಯಶಬ್ದವಾಗಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ ಎಂಬ ಪ್ರಮೇಯವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ವಿಶೇಷವನ್ನು ಅಲ್ಲಗಳೆಯುವ ಅದ್ವೈತಿ ಗಳೂ ವಿಶೇಷವನ್ನು ಒಪ್ಪಲೇ ಬೇಕಾಗುವದು ಎಂದು ಹೇಳುವರು) ಅದ್ವೈತಿಗಳು 'ನೇತಿ ನೇತಿ' ಎಂಬ ಶ್ರುತಿಯಲ್ಲಿ (ಬ್ರಹ್ಮನ) ಸರ್ವವೈಲಕ್ಷಣ್ಯವನ್ನು ಹೇಳಿದೆ ಎಂದು ಅಂಗೀಕರಿಸಿದ್ದ ರಿಂದ ಒಂದೇ ವಸ್ತುವಿನಲ್ಲಿ ವಿಶೇಷವನ್ನು ಅವರೂ ಅಂಗೀಕರಿಸಲೇಬೇಕಾಗುವದು ವಿಶೇಷ ವನ್ನು ಅಂಗೀಕರಿಸದಿದ್ದರೆ (ನೇತಿ ನೇತಿ ಎಂದು ಎರಡುಸಲ ಹೇಳಿದ್ದರ) ಪುನರುಕ್ತಿದೋಷ ಬರುವದು ಒಂದು ವಸ್ತುವಿಗೆ ಘಟದಿಂದ ಇರುವ ವೈಲಕ್ಷಣ್ಯವೇ ಪಟದಿಂದ ಇರುವ ವೈಲಕ್ಷಣ್ಯವಲ್ಲ ಇದು (ಇವೆರಡೂ ಒಂದು ಎಂದು ಹೇಳುವದು) ಅನುಭವಕ್ಕೆ ವಿರುದ್ಧ ವಾಗುವದು (ಆದ್ದರಿಂದ ಅದ್ವೈತಿಗಳೂ ವಿಶೇಷವನ್ನು ಒಪ್ಪಲೇಬೇಕು) ಮೇಲೆ ವಿವರಿಸಿ ದಂತೆ ಅನ್ಯೋನ್ಯಾಶ್ರಯಾದಿ ದೋಷಗಳಿಲ್ಲದೇ ಇರುವದರಿಂದ ಪ್ರತ್ಯಕ್ಷದಿಂದ ಭೇದವು ಸಿದ್ಧ ವಾಗುವದು ಯುಕ್ತವೇ ಆಗಿದೆ

**ಪದಾರ್ಥಸ್ವರೂಪ ತಿಳಿದೊಡನೆಯೇ ಇತರ ಪದಾರ್ಥಗಳೊಡನೆ ಅದಕ್ಕಿರುವ ಭೇದವೂ ಸಾಮಾನ್ಯವಾಗಿ ತಿಳಿದೇ ತಿಳಿಯುವದು.**

**ವಿವರಣೆ**—ಭೇದವು ಧರ್ಮಿಸ್ವರೂಪ ಎಂದು ಹೇಳದಿದ್ದರೆ ಉಂಟಾಗುವ ಅನಾನು ಕೂಲಗಳನ್ನು ಇಲ್ಲಿ ಹೇಳುವರು ಯಾವದೇ ಒಂದು ಪದಾರ್ಥವನ್ನು ನೋಡಿದ ಕೂಡಲೇ ಅದು ಇತರ ಎಲ್ಲ ಪದಾರ್ಥಗಳಿಗಿಂತ ವಿಲಕ್ಷಣ ಎಂಬುದು ಸಾಮಾನ್ಯವಾಗಿ **ತಿಳಿದೇ ತಿಳಿಯು** ವದು. ಇದು ಈ ವೈಲಕ್ಷಣ್ಯ ಅಥವಾ ಭೇದವು ಆಯಾ ಪದಾರ್ಥಗಳ (ಧರ್ಮಿಯ) ಸ್ವರೂಪಭೂತವಾಗಿದ್ದರೆ ಮಾತ್ರ ಸಾಧ್ಯವಾಗುವದು. **ಈ ವೈಲಕ್ಷಣ್ಯ ತಿಳಿಯದೆ ಕೇವಲ** ಪದಾರ್ಥದ ಸ್ವರೂಪ ಮಾತ್ರ **ತಿಳಿದರೆ ಆ ಪದಾರ್ಥಕ್ಕೂ ಇನ್ನಿತರ ಯಾವದೇ**

ಪದಾರ್ಥಕ್ಕೂ ಇರುವ ವೈಲಕ್ಷಣ್ಯವೇ ತಿಳಿಯದೇ ಇದ್ದದ್ದರಿಂದ ಇನ್ನಿತರ ಯಾವದೇ ಪದಾರ್ಥವೂ ಅದು ಆಗಿರಬಹುದು ಎಂಬ ಸಂದೇಹಕ್ಕೆ ಅವಕಾಶವುಂಟಾಗುವದು. ಉದಾಹರಣೆಗೆ ಒಬ್ಬ ವ್ಯಕ್ತಿಗೆ 'ನಾನು' ಎಂದು ತನ್ನ ಜ್ಞಾನವಾದಾಗ ಈ 'ನಾನು' ಎಂಬುದಕ್ಕೂ ಇತರ ಪದಾರ್ಥಗಳಿಗೂ ಇರುವ ವೈಲಕ್ಷಣ್ಯವೇ ತಿಳಿಯದಿದ್ದರೆ ತಾನು ಘಟ ಎಂದು ಜಡಪದಾರ್ಥದೊಡನೆಯೂ ಸಂದೇಹ ಬರಬಹುದು ಹೀಗೆ ನಾನು ನಾನೋ ಘಟವೋ ಎಂಬ ಸಂದೇಹ ಎಂದಿಗೂ ಬರುವದಿಲ್ಲ ಇದಕ್ಕೆ ಕಾರಣ 'ನಾನು' ಎಂದು ತನ್ನ ಜ್ಞಾನವಾದಾಗ ತನಗೆ ಇತರ ಪದಾರ್ಥಗಳೊಡನೆ ಇರುವ ವೈಲಕ್ಷಣ್ಯದ ಜ್ಞಾನವೂ ಸಾಮಾನ್ಯವಾಗಿ ಆಗುವದು ಈ ವೈಲಕ್ಷಣ್ಯಜ್ಞಾನವಾಗುವದೆಂದರೇನೇ ತನ್ನ ಸ್ವರೂಪಭೂತವಾದ ಭೇದವು ಅಂದರೆ ಇತರ ವೈಲಕ್ಷಣ್ಯವು ತಿಳಿಯುವದು ಹೀಗೆ ಸಾಮಾನ್ಯವಾಗಿ ಇತರ ಭೇದಜ್ಞಾನವಾಗುವದಾದರೂ ಒಮ್ಮೊಮ್ಮೆ ಸದೃಶವಾದ ಎರಡು ವಸ್ತುಗಳ ಭೇದದ ವಿಷಯದಲ್ಲಿ ಸಂದೇಹವುಂಟಾಗುವದು ಸಾಮಾನ್ಯ ಭೇದಜ್ಞಾನಕ್ಕೇ ಅವಕಾಶವಿಲ್ಲದಿದ್ದರೆ ಸದೃಶವಾದ ವಸ್ತುಗಳ ಭೇದದ ವಿಷಯದಲ್ಲಿ ಮಾತ್ರ ಸಂದೇಹ ಎಂಬ ವ್ಯವಸ್ಥೆಯೇ ಉಳಿಯಲಾರದು

ಒಂದು ಪದಾರ್ಥವು ಇತರ ಎಲ್ಲ ಪದಾರ್ಥಗಳಿಗಿಂತ ಭಿನ್ನವು ಎಂಬ ಭೇದವು ಒಂದೇ ಆಗಿದ್ದು ಪದಾರ್ಥದ ವಿಲಕ್ಷಣಸ್ವರೂಪದಿಂದ ಅಭಿನ್ನವಾಗಿದೆ ಆದರೆ ಈ ಒಂದೇ ಭೇದಕ್ಕೆ ನಿರೂಪಕವಾದ ಪ್ರತಿಯೋಗಿಗಳು ಅನೇಕವಾಗಿದ್ದಾಗ ಆಯಾ ಪ್ರತಿಯೋಗಿನಿರೂಪಿತವಾದ ಭೇದಗಳು ಎಂದು ಹೇಳಲಾಗುತ್ತದೆ ಉದಾಹರಣೆಗೆ ಘಟದಲ್ಲಿರುವ, ಇತರ ಎಲ್ಲ ಪದಾರ್ಥ ವೈಲಕ್ಷಣ್ಯರೂಪವಾದ, ಘಟಸ್ವರೂಪಭೂತವಾದ ಭೇದವು ಒಂದೇ ಆದರೆ ಪಟ ಕುಡ್ಯ ಇತ್ಯಾದಿ ಆಯಾ ಪ್ರತಿಯೋಗಿನಿರೂಪಿತವಾಗಿ ಇದು ಪಟಭೇದ, ಕುಡ್ಯಭೇದ ಇತ್ಯಾದಿಯಾಗಿ ಕರೆಯಲ್ಪಡುತ್ತದೆ. ಹೀಗೆ ಪ್ರತಿಯೋಗಿನಿಷ್ಠವಾದ ಪಟತ್ವ, ಕುಡ್ಯತ್ವ ಇತ್ಯಾದಿ ಧರ್ಮಮೂಲಕವಾದ ಈ ವಿಶೇಷಜ್ಞಾನವು ಸಾಮಾನ್ಯಭೇದಜ್ಞಾನವಿಲ್ಲದೆ ಆಗಲಾರದು ಆದ್ದರಿಂದ ಸ್ವರೂಪಭೂತವಾದ ಭೇದದ ಸಾಮಾನ್ಯಜ್ಞಾನವು ಸ್ವರೂಪಜ್ಞಾನದೊಡನೆಯೇ ಆಗುವದು ಆದ್ದರಿಂದ ಧರ್ಮಿಪ್ರತಿಯೋಗಿಜ್ಞಾನವಿಲ್ಲದೆ ಭೇದಜ್ಞಾನವಿಲ್ಲ. ಭೇದಜ್ಞಾನವಿಲ್ಲದೆ ಧರ್ಮಿಪ್ರತಿಯೋಗಿಜ್ಞಾನವಿಲ್ಲ ಎಂಬ ಅನ್ಯೋನ್ಯಾಶ್ರಯ ದೋಷಕ್ಕೆ ಅವಕಾಶವೇ ಇಲ್ಲ

ಇನ್ನು, ಭೇದದ ಜ್ಞಾನವಾಗಬೇಕಾದರೆ ಧರ್ಮಿ ಮತ್ತು ಎಲ್ಲ ಪ್ರತಿಯೋಗಿಗಳ ಜ್ಞಾನವಾಗುವದು ಅಗತ್ಯ ಭೇದವು ಧರ್ಮಿಸ್ವರೂಪವಾಗಿದ್ದು ಅದರ ಜ್ಞಾನವೇ ಭೇದಜ್ಞಾನವಾಗಿದ್ದರೆ, ಅದೇ ಕಾಲದಲ್ಲಿ ಎಲ್ಲ ಪ್ರತಿಯೋಗಿಗಳ ಜ್ಞಾನವೂ ಆಗಬೇಕು. ಆದರೆ ಒಂದಕ್ಕಿಂತ ಹೆಚ್ಚು ಜ್ಞಾನಗಳು ಏಕಕಾಲದಲ್ಲಿ ಆಗುವದಿಲ್ಲ ಎಂಬ ಆಕ್ಷೇಪವು ಸರಿಯಲ್ಲ. ಒಂದೇ ಕಾಲದಲ್ಲಿ ಒಂದಕ್ಕಿಂತ ಹೆಚ್ಚು ಜ್ಞಾನಗಳು ಉಂಟಾಗುವದಿಲ್ಲ ಎಂಬುದು ನಿಜವಾದರೂ ಸಾವಿರಾರು ದೀಪಗಳನ್ನೂ ಒಮ್ಮೆಯೇ ನೋಡಿದಂತೆ ಧರ್ಮಿ ಮತ್ತು ಇತರ ಎಲ್ಲ ಪ್ರತಿಯೋಗಿಗಳ ಸಮುದಾಯಾವಲಂಬಿಯಾದ ಒಂದೇ ಜ್ಞಾನವಾಗಲು ಯಾವ

ಅಭ್ಯಂತರವೂ ಇಲ್ಲ ದ್ವೈತಮತದಲ್ಲಿ ಸಾಮಾನ್ಯವಾಗಿ ಸರ್ವಜ್ಞಾನವೂ ಸಾಕ್ಷಿರೂಪವಾದುದು ಮತ್ತು ಅದು ಯಾವಾಗಲೂ ಇರುವದು. ಆದ್ದರಿಂದ ಈ ಶಂಕೆ ಮತ್ತು ಸಮಾಧಾನಗಳು—ಧರ್ಮಿ ಮತ್ತು ಎಲ್ಲ ಪ್ರತಿಯೋಗಿಗಳ ಸಾಮಾನ್ಯಜ್ಞಾನ ಇವುಗಳು ಒಮ್ಮೆಲೇ ಆಗಲಾರವು ಎಂಬ ಆಕ್ಷೇಪ, ಸಮುದಾಯಾವಲಂಬಿಯಾಗಿ ಅವುಗಳ ಒಂದೇ ಜ್ಞಾನ ಆಗುವದು ಎಂಬ ಸಮಾಧಾನ—ಅಗತ್ಯವಿಲ್ಲವೆಂದು ತೋರುವದು ಆದ್ದರಿಂದ ವಿಶೇಷತಃ ಘಟಪಟಾದಿಗಳ ಭೇದ ತೋರುವಾಗ ಘಟ, ಪಟ ಎಂಬ ಎರಡು ಜ್ಞಾನಗಳು ಏಕಕಾಲದಲ್ಲಿ ಆಗಲಾರವು ಆದರೆ ಭೇದವು ಘಟಸ್ವರೂಪವಾಗಿದ್ದರೆ, ಮತ್ತು ಘಟಸ್ವರೂಪಜ್ಞಾನದೊಡನೆಯೇ ಈ ಭೇದದ ಜ್ಞಾನವೂ ಆಗಬೇಕಾದರೆ ಅದೇ ಕಾಲದಲ್ಲಿ ಪಟದ ಜ್ಞಾನವೂ ಆಗಬೇಕು ಆದರೆ ಎರಡು ಜ್ಞಾನಗಳು ಏಕಕಾಲದಲ್ಲಿ ಆಗಲಾರವು ಎಂಬ ಆಕ್ಷೇಪವನ್ನಿಟ್ಟುಕೊಂಡು, ಧರ್ಮಿ-ಪ್ರತಿಯೋಗಿ (ಘಟ ಮತ್ತು ಪಟ) ಎರಡೂ ಎದುರಿಗಿದ್ದಾಗ ಎರಡಕ್ಕೂ ಚಕ್ಷುಸ್ಸನ್ನಿಕರ್ಷವಿದ್ದು ಸಮುದಾಯಾವಲಂಬಿಯಾದ ಒಂದು ಜ್ಞಾನವಾಗಬಹುದು, ಎರಡರಲ್ಲಿ ಒಂದು ಎದುರಿಗಿದ್ದಾಗ ಸಂಸ್ಕಾರಸಹಕೃತ ಚಕ್ಷುಸ್ಸನ್ನಿಕರ್ಷದಿಂದ ಎರಡರ ಸಮುದಾಯಾವಲಂಬಿಯಾದ ಜ್ಞಾನವಾಗಬಹುದು ಧರ್ಮಿ-ಪ್ರತಿಯೋಗಿಗಳ ಬೇರೆ ಬೇರೆಯಾದ ಎರಡು ಜ್ಞಾನಗಳ ಅಗತ್ಯವಿಲ್ಲ ಆದ್ದರಿಂದ ಒಂದೇ ಕಾಲದಲ್ಲಿ ಎರಡು ಜ್ಞಾನಗಳು ಹೇಗೆ ಆಗುವವು ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ ಎಂಬ ಸಮಾಧಾನವು ಅಭಿಪ್ರೇತವಾಗಿದ ಎಂದು ಟೀಕಾದಲ್ಲಿ ವಿವರಿಸಿದ್ದಾರೆ

**ಧರ್ಮಿ ಮತ್ತು ಭೇದಗಳ ಅಭೇದವು ಸವಿಶೇಷಾಭೇದವು.**

ಇನ್ನು 'ಭೇದವು ಧರ್ಮಿಸ್ವರೂಪವಾದರೆ ಘಟ ಮತ್ತು ಭೇದ ಈ ಎರಡೂ ಶಬ್ದಗಳು ಪರ್ಯಾಯಶಬ್ದಗಳಾಗುವ ಪ್ರಸಂಗ ಬರುವದು ಯಾಕಂದರೆ ಭೇದವು ಧರ್ಮಿಯಾದ ಘಟಸ್ವರೂಪವೇ ಆಗಿರುವದು' ಅಲ್ಲದೆ 'ಘಟಮಾತ್ರವಿದೆ ಭೇದವಿಲ್ಲ, ಭೇದಮಾತ್ರವಿದೆ ಘಟವಿಲ್ಲ ಎಂದೂ ಹೇಳಬಹುದು ಯಾಕಂದರೆ ಇವುಗಳಲ್ಲಿ ಒಂದನ್ನು ಬಿಟ್ಟು ಇನ್ನೊಂದು ಬೇರೆಯಾಗಿಲ್ಲ' ಎಂಬ ಆಕ್ಷೇಪವೂ ಸರಿಯಲ್ಲ ಧರ್ಮಿ ಮತ್ತು ಅದರ ಸ್ವರೂಪವಾದ ಭೇದ ಇವೆರಡೂ ಅಭಿನ್ನವಾಗಿದ್ದರೂ ಇವುಗಳಿಗಿರುವ ಭೇದವು ಸವಿಶೇಷಾಭೇದವಾಗಿದೆ. ಯಾವ ಎರಡರಲ್ಲಿ ಭೇದವಿಲ್ಲದಿದ್ದರೂ ಭೇದವಿದ್ದಂತೆ ವ್ಯವಹಾರವಾಗುವದೋ ಅಲ್ಲಿ ವಿಶೇಷವೆಂಬ ಪದಾರ್ಥವನ್ನು ಅಂಗೀಕರಿಸಿ ಭೇದವ್ಯವಹಾರವನ್ನು ನಿರ್ವಹಿಸಲಾಗುವದು. ಇಂಥ ಸ್ಥಳದಲ್ಲೆಲ್ಲ ಇರುವ ಅಭೇದವು ಸವಿಶೇಷಾಭೇದವು ಧರ್ಮಿಸ್ವರೂಪಕ್ಕೂ ಅದರಿಂದ ಅಭಿನ್ನವಾಗಿರುವ ಸ್ವರೂಪಭೇದಕ್ಕೂ ಇರುವ ಅಭೇದವು ಇಂಥ ಸವಿಶೇಷಾಭೇದವು. ಆದ್ದರಿಂದ ಘಟ ಮತ್ತು ಭೇದ ಶಬ್ದಗಳು ಪರ್ಯಾಯವಾಗಲಿ ಇತ್ಯಾದಿಯಾದ ಆಕ್ಷೇಪಗಳಿಗೆ ಅವಕಾಶವಿಲ್ಲ. ಬ್ರಹ್ಮನ ಆನಂದ ಎಂಬಲ್ಲಿ ಬ್ರಹ್ಮನಿಗೂ ಆನಂದಕ್ಕೂ ಇರುವ ಅಭೇದವು ಸವಿಶೇಷಾಭೇದವು.

**ಅದ್ವೈತಿಗಳೂ ಸವಿಶೇಷಾಭೇದವನ್ನು ಒಪ್ಪಲೇಬೇಕಾಗುವದು.**

ಅದ್ವೈತಮತದಲ್ಲಿ ಬ್ರಹ್ಮನು ನಿರ್ಗುಣನು ಎಂದು ಹೇಳಿ ನಿರ್ವಿಶೇಷಾಭೇದವನ್ನು ಹೇಳುವರು ಆದರೆ ಅವರೂ ವಿಶೇಷವನ್ನು ಒಪ್ಪಿ ಸವಿಶೇಷಾಭೇದವನ್ನು ಹೇಳಲೇ ಬೇಕಾಗುವದು. ಅವರ ಮತದ ಪ್ರಕಾರ 'ನೇತಿ ನೇತಿ' ಎಂಬ ಶ್ರುತಿಯು ಬ್ರಹ್ಮನು ಸರ್ವಪದಾರ್ಥವ್ಯಾವೃತ್ತನು ಎಂದು ಹೇಳುತ್ತದೆ ಇಲ್ಲಿ ನೇತಿ ನೇತಿ ಎಂದು ಎರಡು ವಾಕ್ಯಗಳಿಂದ ಪ್ರತಿಪಾದಿತವಾದ ಎರಡು ವ್ಯಾವೃತ್ತಿಗಳಿವೆ ಆತ್ಮಶಬ್ದಾರ್ಥಕ್ಕೂ ಈ ಎರಡು ವ್ಯಾವೃತ್ತಿಗಳಿಗೂ ಅವರು ಭೇದವನ್ನಾಗಲೀ ಭೇದಾಭೇದವನ್ನಾಗಲೀ ಹೇಳಲು ಬರುವದಿಲ್ಲ. ಯಾಕಂದರೆ ಅದರಿಂದ ಅಖಂಡವಾಕ್ಯಾರ್ಥಕ್ಕೆ ವಿರೋಧ ಬರುವದು ಇವುಗಳಿಗೆ ಅತ್ಯಂತಾಭೇದವನ್ನು ಹೇಳಿ ವಿಶೇಷವನ್ನು ಅಂಗೀಕರಿಸದಿದ್ದರೆ ಪುನರುಕ್ತಿದೋಷ ಬರುವದು. ಇದನ್ನು ಪರಿಹರಿಸಲು ವಿಶೇಷವನ್ನು ಅವರೂ ಕೂಡ ಅಂಗೀಕರಿಸಲೇಬೇಕು ಇಲ್ಲಿ ಎರಡು ವ್ಯಾವೃತ್ತಿಗಳನ್ನು ಹೇಳಿ ಅವೆರಡೂ ಅತ್ಯಂತಾಭಿನ್ನ ಎಂದು ಹೇಳುವದು ಲೋಕಾನುಭವಕ್ಕೆ ವಿರುದ್ಧವಾಗುವದು ಒಂದು ವಸ್ತುವಿಗೆ ವಿಶೇಷಣಗಳಾದ ಎರಡು ವ್ಯಾವೃತ್ತಿ ಅಥವಾ ವೈಲಕ್ಷಣ್ಯಗಳು ಅಭಿನ್ನವಾಗಿದ್ದರೂ ಅವುಗಳಲ್ಲಿ ಒಂದು ಅತಿಶಯ ಇದ್ದೇ ಇರುತ್ತದೆ. ಒಂದು ವಸ್ತುವಿಗೆ ಘಟದಿಂದ ಇರುವ ವೈಲಕ್ಷಣ್ಯ ಮತ್ತು ಪಟದಿಂದ ಇರುವ ವೈಲಕ್ಷಣ್ಯ ಎರಡೂ ಒಂದೇ ಎನ್ನುವದು ಅನುಭವವಿರುದ್ಧವಾಗುತ್ತದೆ ಆದ್ದರಿಂದ 'ನೇತಿ ನೇತಿ' ಎಂದು ಹೇಳಿದ ಎರಡು ವ್ಯಾವೃತ್ತಿಗಳನ್ನೂ ಅಭೇದವನ್ನೂ ಅತಿಶಯವನ್ನೂ ನಿರ್ವಾಹಮಾಡಬೇಕಾದರೆ ಅದ್ವೈತಿಗಳೂ ವಿಶೇಷವನ್ನು ಒಪ್ಪಲೇಬೇಕಾಗುತ್ತದೆ

ಹೀಗೆ ಭೇದವು ಧರ್ಮಿಸ್ವರೂಪವೆಂದು ಹೇಳಲು ಯಾವ ಬಾಧಕವೂ ಇಲ್ಲದ್ದರಿಂದ, ಅದು ಧರ್ಮಿಸ್ವರೂಪವಾದ್ದರಿಂದ ಅನ್ಯೋನ್ಯಾಶ್ರಯಾದಿ ದೋಷಗಳಿಗೆ ಅವಕಾಶವಿಲ್ಲದ್ದರಿಂದ ಪ್ರತ್ಯಕ್ಷದಿಂದ ಭೇದವು ಸಿದ್ಧವಾಗುವದು ಎಂಬುದು ಯುಕ್ತಿಯುಕ್ತವೇ ಆಗಿದೆ

**ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದುದನ್ನು ನಿರಾಕರಿಸಲು ಪ್ರಯತ್ನಿಸುವ ತರ್ಕವು ತರ್ಕಾಭಾಸವು.**

**37. ಯಚ್ಚ ಪ್ರಮಾಣದೃಷ್ಟಾನಾಮಪಿ ಅರ್ಥಾನಾಂ ಮಿಥ್ಯಾತ್ವ-ಕಲ್ಪನಂ ತಚ್ಚ ಪ್ರಮಾಣವಿರುದ್ಧತ್ವಾದೇವ ಪ್ರಕಾಶತಸ್ಕರತ್ವಮ್ । ನಹಿ ಪ್ರಮಾಣದೃಷ್ಟಸ್ಯ ತರ್ಕಬಾಧ್ಯತ್ವಮ್ । ಪ್ರತ್ಯಕ್ಷಾದಿವಿರುದ್ಧಾನಾಂ ತರ್ಕಾಭಾಸತ್ವ-ನಿಯಮಾತ್ । ಶುಕ್ತ್ಯಾದೇಃ ರಜತತ್ವಾದಿ ಪ್ರತೀತೇರಪಿ ಬಲವತ್ಪ್ರತ್ಯಕ್ಷವಿರುದ್ಧತ್ವಾ-ದೇವ ಭ್ರಮತ್ವಂ ನ ತರ್ಕಮಾತ್ರಾತ್ । ತರ್ಕಮಾತ್ರತಃ ಪ್ರತ್ಯಕ್ಷಬಾಧನೇ ಭೂತ-ಚತುಷ್ಟಯಸ್ಯ ಅಬಾದೇಃ ಪೃಥಿವೀತ್ವಾದೃಷ್ಟೇಃ ಪೃಥಿವ್ಯಾ ಅಪಿ ಪೃಥಿವೀತ್ವಂ ನ ಸ್ಯಾತ್ । ಅತೋ ನ ತರ್ಕಮಾತ್ರತ ಏವ ದುಷ್ಟಸ್ಯ ಭ್ರಾಂತಿತ್ವಂ ಕಲ್ಪ್ಯಮ್ । ಅತಃ ಸರ್ವಭೇದನಿರಾಸಕತರ್ಕಸ್ಯ ಸರ್ವಶ್ರುತಿಸ್ಮೃತಿ ಪ್ರತ್ಯಕ್ಷಾನುಮಾನವಿರುದ್ಧತ್ವಾತ್ ನಿತರಾಮಾಭಾಸತ್ವಮ್ ।**

**ಅನುವಾದ**—(ಭೇದವು ಪ್ರತ್ಯಕ್ಷಸಿದ್ಧ ಎಂದು ಮೇಲೆ ಸಮರ್ಥಿಸಿದರು ಆದರೆ ಜಗತ್ತೇ ಮಿಥ್ಯೆಯಾದ್ದರಿಂದ ತದೇಕದೇಶವಾದ ಭೇದವೂ ಮಿಥ್ಯಾಭೂತವಾಗಿರುವದು ಜಗತ್ತು ಮಿಥ್ಯೆ, ಭೇದವು ಮಿಥ್ಯೆ ಎಂಬುದು ಅನೇಕ ಅನುಮಾನಗಳಿಂದ ಸಿದ್ಧವಾಗುವದು. ಹೀಗೆ ಪ್ರಪಂಚವೇ ಮಿಥ್ಯಾಭೂತವಾದ್ದರಿಂದ ವಿಷ್ಣುಸರ್ವೋತ್ತಮತ್ವದ ಪ್ರಸಕ್ತಿಯೇ ಇಲ್ಲ ಅಂದಮೇಲೆ ಎಲ್ಲ ಆಗಮಗಳು ವಿಷ್ಣುಸರ್ವೋತ್ತಮತ್ವದಲ್ಲಿ ತಾತ್ಪರ್ಯವುಳ್ಳವುಗಳಾಗಿವೆ. ಎಂಬುದು ಹೇಗೆ ಸಾಧ್ಯ ಎಂಬ ಆಕ್ಷೇಪವನ್ನು ಪರಿಹರಿಸಲು ಪ್ರತ್ಯಕ್ಷಪ್ರಮಾಣಪ್ರಮಿತವಾದ ಜಗತ್ತು ಮಿಥ್ಯಾ ಎಂದು ಅನುಮಾನಗಳಿಂದ ಸಿದ್ಧಮಾಡಲು ಬರುವದಿಲ್ಲ ಎಂದು ಇಲ್ಲಿ ಹೇಳುವರು )

ಈ ಜಗತ್ತಿನಲ್ಲಿಯ ಪದಾರ್ಥಗಳು ಮತ್ತು ಅವುಗಳಲ್ಲಿಯ ಭೇದಗಳು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿವೆ ಆದ್ದರಿಂದ ಅವು ಮಿಥ್ಯಾ ಎಂದು ಕಲ್ಪಿಸುವದು ಪ್ರಮಾಣ ವಿರುದ್ಧವಾದುದು ಹಾಗೆ ಕಲ್ಪಿಸುವದು ಹಗಲಿನಲ್ಲಿಯೇ ಕಳ್ಳತನ ಮಾಡಿದಂತಾಗುವದು ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾದವುಗಳನ್ನು ಕೇವಲ ಅನುಮಾನಗಳಿಂದ ಅಲ್ಲಗಳೆಯಲು ಬರುವದಿಲ್ಲ ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿರುದ್ಧವಾದ ಅನುಮಾನಗಳು ದುಷ್ಟಾನುಮಾನಗಳಾಗಿರುತ್ತವೆ ಶುಕ್ತಿಯನ್ನು ರಜತವಾಗಿ ಕಂಡ ಪ್ರತ್ಯಕ್ಷವೂ ಕೂಡ ತನಗಿಂತ ಪ್ರಬಲವಾದ ಶುಕ್ತಿ ಪ್ರತ್ಯಕ್ಷದಿಂದಲೇ ಬಾಧಿತವಾದ್ದರಿಂದಲೇ ಭ್ರಮವೆನಿಸುತ್ತದೆ ಕೇವಲ ತರ್ಕದಿಂದ ಬಾಧಿತವಾಗುವದಿಲ್ಲ ಕೇವಲ ತರ್ಕದಿಂದ ಪ್ರತ್ಯಕ್ಷಸಿದ್ಧವಾದದ್ದು ಬಾಧಿತವಾಗುತ್ತದೆ ಎಂದು ಹೇಳಿದರೆ ಅಪ್, ತೇಜಸ್, ವಾಯು, ಆಕಾಶ ಈ ನಾಲ್ಕು ಭೂತಗಳಲ್ಲಿ ಪೃಥಿವೀತ್ವವು ಇಲ್ಲದೇ ಇರುವದರಿಂದ ಪೃಥಿವಿಯಲ್ಲಿಯೂ ಪೃಥಿವೀತ್ವವಿಲ್ಲ ಎಂಬ ವಾದವನ್ನೂ ಒಪ್ಪಬೇಕಾದೀತು ಆದ್ದರಿಂದ ಕೇವಲ ಅನುಮಾನಗಳಿಂದ ಪ್ರತ್ಯಕ್ಷ ಸಿದ್ಧವಾದದ್ದನ್ನು (ಜಗತ್ತು, ಭೇದ ಇತ್ಯಾದಿಗಳನ್ನು) ಮಿಥ್ಯಾ ಅಂದರೆ ಭ್ರಾಂತಿಕಲ್ಪಿತ ಎಂದು ಹೇಳಲು ಬರುವದಿಲ್ಲ ಆದ್ದರಿಂದ ಎಲ್ಲ ಪದಾರ್ಥಗಳ ಭೇದವನ್ನು ನಿರಾಕರಿಸುವ ತರ್ಕವು ಎಲ್ಲ ಶ್ರುತಿ, ಸ್ಮೃತಿ, ಪ್ರತ್ಯಕ್ಷ ಮತ್ತು ಅನುಮಾನಪ್ರಮಾಣಗಳಿಗೆ ವಿರುದ್ಧವಾದ್ದರಿಂದ ತರ್ಕಾಭಾಸವೇ ಆಗಿದೆ.

**ವಿವರಣೆ**—ಭೇದವು ಪ್ರತ್ಯಕ್ಷಸಿದ್ಧವೆಂದು ಮೇಲೆ ಹೇಳಿದಿರಿ. ಆದರೆ 'ವಿಮತಂ ಮಿಥ್ಯಾ ದೃಶ್ಯತ್ವಾತ್, ಜಡತ್ವಾತ್, ಪರಿಚ್ಛಿನ್ನತ್ವಾತ್' ಇತ್ಯಾದಿಯಾದ ಅನುಮಾನಗಳಿಂದ ಪ್ರಪಂಚವೇ ಮಿಥ್ಯೆಯೆಂದು ಸಿದ್ಧವಾಗುತ್ತದೆ ಅಂದಮೇಲೆ ಅದರಲ್ಲಿಯ ಪದಾರ್ಥಗಳ ಧರ್ಮವಾದ ಭೇದವು ಮಿಥ್ಯಾಭೂತವೇ ಆಗಿದೆ ಅಲ್ಲದೆ 'ವಿಮತಃ ಭೇದಃ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್' ಇತ್ಯಾದಿ ಅನುಮಾನಗಳಿಂದಲೂ ಭೇದವು ಮಿಥ್ಯಾ ಎಂದು ಸಿದ್ಧವಾಗುತ್ತದೆ 'ಜೀವಾಃ ಪರಮಾತ್ಮನಃ ತತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್' ಎಂಬ ಅನುಮಾನದಿಂದ ಜೀವಪರಮಾತ್ಮಭೇದವೂ ಮಿಥ್ಯಾ ಎಂದು ಸಿದ್ಧವಾಗುತ್ತದೆ ಆದ್ದರಿಂದ ಪ್ರತ್ಯಕ್ಷಸಿದ್ಧವೆಂದು ನೀವು ಹೇಳುವ ಭೇದವು ಅನುಮಾನದಿಂದ ಬಾಧಿತವಾಗುತ್ತದೆ ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸುವರು.

ಅನುಮಾನದಿಂದ ಪದಾರ್ಥಗಳ ಮತ್ತು ಅವುಗಳ ಭೇದದ ಮಿಥ್ಯಾತ್ವವನ್ನು ಸಾಧಿಸ ಬೇಕಾದರೆ ಮೊದಲು ಈ ಪದಾರ್ಥಗಳು ಮತ್ತು ಭೇದ ಯಾವದಾದರೊಂದು ಪ್ರಮಾಣ ದಿಂದ ಸಿದ್ಧವಾಗಿರಬೇಕಾಗುತ್ತದೆ ಇಲ್ಲದಿದ್ದರೆ ಅನುಮಾನದಲ್ಲಿ ಪಕ್ಷವನ್ನಾಗಿ ಮಾಡಲು ಈ ಪದಾರ್ಥಗಳೇ ಇಲ್ಲದ್ದರಿಂದ ಆಶ್ರಯಾಸಿದ್ಧಿದೋಷ ಬರುತ್ತದೆ ಇದನ್ನು ಪರಿಹರಿಸಲು ಈ ಪದಾರ್ಥಗಳು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಿವೆ ಎಂದು ಒಪ್ಪಿಕೊಂಡಮೇಲೆ ಪ್ರಮಾಣಪ್ರಮಿತವಾದ ಇವುಗಳಿಗೆ ಮಿಥ್ಯಾತ್ವವನ್ನು ಸಾಧಿಸುವದು ಸಾಧ್ಯವಾಗುವದಿಲ್ಲ. ಯಾಕಂದರೆ ಇವುಗಳ ಮಿಥ್ಯಾತ್ವವನ್ನು ಸಾಧಿಸುವ ಅನುಮಾನಗಳು ಪ್ರತ್ಯಕ್ಷಕ್ಕೆ ವಿರುದ್ಧ ವಾದ್ದರಿಂದ ಅಪ್ರಮಾಣವೆನಿಸುವವು

ಇನ್ನು ಶುಕ್ತಿರಜತಪ್ರತ್ಯಕ್ಷವು ತರ್ಕದಿಂದ ಬಾಧಿತವಾದದ್ದು ಕಂಡುಬರುತ್ತದೆ ಎಂಬ ಸಮರ್ಥನೆ ಸರಿಯಲ್ಲ ಯಾಕಂದರೆ ಶುಕ್ತಿರಜತಪ್ರತ್ಯಕ್ಷವೂ ಕೂಡ ಪರೀಕ್ಷಾಸಹಕೃತವಾದ 'ನೇದಂ ರಜತಮ್' ಎಂಬ ಪ್ರಬಲಪ್ರತ್ಯಕ್ಷದಿಂದಲೇ ಬಾಧಿತವಾಗಿದೆ ಕೇವಲ ತರ್ಕದಿಂದ ಬಾಧಿತವಾಗಿಲ್ಲ.

ಕೇವಲ ಅನುಮಾನದಿಂದ ಪ್ರತ್ಯಕ್ಷದ ಬಾಧವಾಗಬಹುದು ಎಂದು ವಾದಿಸಿದರೆ 'ಗಂಧವದ್‌ದ್ರವ್ಯಮ್ ನ ಪೃಥಿವೀ ಭೂತತ್ವಾತ್ ಅಬಾದಿವತ್' ಎಂಬ ಅನುಮಾನದಿಂದ ಪೃಥಿವಿಯಲ್ಲಿ ಪ್ರತ್ಯಕ್ಷಸಿದ್ಧವಾದ ಪೃಥಿವೀತ್ವವು ಇಲ್ಲವೆಂದು ಹೇಳುವ ಪ್ರಸಂಗ ಬರುವದು. ಭೂತತ್ವ ಅಂದರೆ ಬಾಹ್ಯೇಂದ್ರಿಯಗ್ರಾಹ್ಯವಾದ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳಲ್ಲಿ ಒಂದು ಗುಣವಿರುವದು ಇವುಗಳಲ್ಲಿ ಕ್ರಮವಾಗಿ ರಸ, ರೂಪ, ಸ್ಪರ್ಶ. ಶಬ್ದ ಗುಣವಿರುವ ಅಪ್, ತೇಜಸ್, ವಾಯು, ಆಕಾಶಗಳು ಭೂತಗಳಾಗಿವೆ ಅಂದಮೇಲೆ ಇಂಥದೇ ಗುಣ ವಾದ ಗಂಧವಿರುವ ದ್ರವ್ಯವು ಭೂತವಾಗಿದೆ ಹೀಗೆ ಭೂತವಾಗಿದ್ದರಿಂದ ಇತರ ಭೂತ ಗಳಾದ ಅಪ್, ತೇಜಸ್ ಮೊದಲಾದವುಗಳಲ್ಲಿ ಪೃಥಿವೀತ್ವವು ಇಲ್ಲದಿರುವಂತೆ ಗಂಧವದ್ ದ್ರವ್ಯದಲ್ಲಿಯೂ ಪೃಥಿವೀತ್ವವಿಲ್ಲ ಎಂದು ಈ ಅನುಮಾನವು ಸಾಧಿಸಹೊರಟಿರುವದು ಪೃಥಿವಿಯಲ್ಲಿ ಪೃಥಿವೀತ್ವವು ಪ್ರತ್ಯಕ್ಷಸಿದ್ಧವಾಗಿದೆ ಪ್ರತ್ಯಕ್ಷವು ಅನುಮಾನದಿಂದ ಬಾಧಿತ ವಾಗಬಹುದು ಎಂದರೆ ಈ ಮೇಲಿನ ಅನುಮಾನದಿಂದ ಪ್ರತ್ಯಕ್ಷಸಿದ್ಧವಾದ ಪೃಥಿವೀತ್ವಕ್ಕೆ ಬಾಧೆ ಬರುವ ಪ್ರಸಂಗ ಬರುವದು ಯಾಕಂದರೆ ಈ ಅನುಮಾನದಲ್ಲಿ ವ್ಯಾಪ್ತಿ, ಪಕ್ಷಧರ್ಮತಾ ಇತ್ಯಾದಿ ಅನುಮಾನಕ್ಕೆ ಅಗತ್ಯವಾದ ಅಂಶಗಳೆಲ್ಲ ಇರುವವು ಇದು ಯುಕ್ತವಲ್ಲ ಕೇವಲ ಅನುಮಾನದಿಂದ ಪ್ರತ್ಯಕ್ಷಸಿದ್ಧವಾದುದು ಬಾಧಿತವಾಗುವದಿಲ್ಲ ಅದ್ವೈತಿಗಳು ಹೇಳುವ ಭೇದ ನಿರಾಸಕ ಅನುಮಾನಗಳು ಶ್ರುತಿ, ಸ್ಮೃತಿ, ಪ್ರತ್ಯಕ್ಷ, ಅನುಮಾನ ಇವೆಲ್ಲದಕ್ಕೂ ವಿರುದ್ಧವಾದ್ದರಿಂದ ಅವು ದುಷ್ಟಾನುಮಾನಗಳಾಗಿವೆ

ವ್ಯಾವಹಾರಿಕ ಸತ್ಯತ್ವವನ್ನು ಅಂಗೀಕರಿಸಲು ಪ್ರಮಾಣವಿಲ್ಲ.
ಸದಸದ್ವೈಲಕ್ಷಣ್ಯವು ಅಪ್ರಾಮಾಣಿಕ.

**38. ನ ಚ ಪರಮಾರ್ಥತಃ ಭೇದಾಭಾವಃ, ವ್ಯಾವಹಾರಿಕಃ ಸಃ ಅಸ್ತೀತಿ ವಾಚ್ಯಮ್ । ಸದಸದ್ವೈಲಕ್ಷಣ್ಯೇ ಪ್ರಮಾಣಾಭಾವಾತ್ । ಅಸತಃ ಖ್ಯಾತ್ಯ-ಯೋಗಾದಿತಿ ವದತಃ ಖ್ಯಾತಿರಭೂನ್ನ ವಾ । ಯದಿ ನಾಭೂತ್ ನ ತತ್ಖ್ಯಾತಿ-ನಿರಾಕರಣಮ್ । ಯದ್ಯಭೂತ್ ತಥಾಪಿ । ನ ಚ ಅಸತೋ ವೈಲಕ್ಷಣ್ಯಂ ತತ್ಪ್ರತೀತಿಂ ವಿನಾ ಜ್ಞಾಯತೇ । ನ ಚ ಶುಕ್ತೌ ರಜತತ್ವಂ ಸದಸದ್ವಿಲಕ್ಷಣಮ್ । ಅಸದೇವ ರಜತಂ ಪ್ರತ್ಯಭಾತ್ ಇತ್ಯನುಭವಾತ್ । ನ ಚ ಪ್ರತೀತತ್ವಾದಸತ್ತ್ವಾ-ಭಾವಃ । ಅಸತಃ ಸತ್ತ್ವಪ್ರತೀತಿಃ ಸತಃ ಅಸತ್ತ್ವಪ್ರತೀತಿರಿತ್ಯನ್ಯಥಾ ಪ್ರತೀತೇರೇವ ಭ್ರಾಂತಿತ್ವಾತ್ । ನ ಚ ಅಸತಃ ಭ್ರಾಂತಾವಪಿ ಪ್ರತೀತಿರ್ನಾಸ್ತೀತಿ ವಾಚ್ಯಮ್ । ಅನಿರ್ವಚನೀಯಂ ಪರಮಾರ್ಥತ್ವಸ್ಯ ಅಸತ ಏವ ದೃಷ್ಟ್ಯಂಗೀಕಾರಾತ್ । ನ ಚ ತದಪ್ಯನಿರ್ವಾಚ್ಯಮ್ । ಅನವಸ್ಥಿತೇಃ । ಪ್ರಥಮಾನಿರ್ವಚನೀಯಾಸಿದ್ಧ್ಯಾ ಸರ್ವಾ-ನಿರ್ವಚನೀಯಾಸಿದ್ಧಿರಿತಿ ಮೂಲಕ್ಷತಿಃ ।**

**ಅನುವಾದ**—(ಭೇದವು ಪ್ರತ್ಯಕ್ಷಸಿದ್ಧವೆಂದೂ ಅನುಮಾನದಿಂದ ಅದನ್ನು ನಿರಾಕರಿಸಲು ಬರುವದಿಲ್ಲವೆಂದೂ ಹಿಂದೆ ಹೇಳಿದರು ಈಗ ಅದ್ವೈತಿಯು ಪ್ರತ್ಯಕ್ಷದಿಂದ ತಿಳಿದು ಬರುವ ಭೇದವು ವ್ಯಾವಹಾರಿಕ ಭೇದವು, ಅನುಮಾನದಿಂದ ನಿರಾಕೃತವಾದ ಭೇದವು ಪಾರಮಾರ್ಥಿಕಭೇದವು ಎಂದು ವಾದಿಸಿದರೆ ಈ ಪಾರಮಾರ್ಥಿಕ, ವ್ಯಾವಹಾರಿಕ ಎಂಬ ವ್ಯವಸ್ಥೆಯೇ ಅಯುಕ್ತವಾದದ್ದು, ಸದಸದ್ವಿಲಕ್ಷಣತ್ವ ಎಂಬ ವ್ಯಾವಹಾರಿಕತ್ವದ ಲಕ್ಷಣವೇ ಕೂಡುವದಿಲ್ಲ ಆದ್ದರಿಂದ ವ್ಯಾವಹಾರಿಕವೆಂಬುದೇ ಇಲ್ಲ ಭೇದವು ಪಾರಮಾರ್ಥಿಕವೇ ಆಗಿದ್ದು ಪ್ರತ್ಯಕ್ಷಸಿದ್ಧವೇ ಆಗಿದ ಎಂಬುದನ್ನು ದೃಢಪಡಿಸುತ್ತಾರೆ )

ಪಾರಮಾರ್ಥಿಕವಾದ ಭೇದ ಎಂಬುದಿಲ್ಲ. ಆದರೆ ವ್ಯಾವಹಾರಿಕವಾದ ಭೇದವಿದೆ ಎಂಬುದೂ ಸರಿಯಲ್ಲ (ಯಾಕಂದರೆ ವ್ಯಾವಹಾರಿಕ ಅಂದರೆ) ಸದಸದ್ವಿಲಕ್ಷಣವಾದ ಒಂದು ವಸ್ತುವಿದೆ ಎಂಬುದರಲ್ಲಿಯೇ ಪ್ರಮಾಣವಿಲ್ಲ. (ಶುಕ್ತಿರಜತಾದಿಗಳು ಸತ್ ಆಗಿದ್ದರೆ ಬಾಧೆಯುಂಟಾಗುತ್ತಿರಲಿಲ್ಲ ಅಸತ್ ಆಗಿದ್ದರೆ ಅವುಗಳ ಪ್ರತೀತಿಯುಂಟಾಗುತ್ತಿರಲಿಲ್ಲ ಆದ್ದರಿಂದ ಅವು ಸದಸದ್ವಿಲಕ್ಷಣ ಎಂಬ ವಾದ ಸರಿಯಲ್ಲ ಯಾಕಂದರೆ) 'ಅಸತ್' ಆಗಿದ್ದರೆ ಖ್ಯಾತಿ ಅಂದರೆ ಪ್ರತೀತಿಯುಂಟಾಗುತ್ತಿರಲಿಲ್ಲ ಎಂದು ಹೇಳುವವರಿಗೆ (ಅದ್ವೈತಿಗಳಿಗೆ) ಅದರ ಪ್ರತೀತಿ ಆಗಿರುವದೋ ಇಲ್ಲವೋ ? ಪ್ರತೀತಿಯಾಗಿರದಿದ್ದರೆ ಅದರ ನಿರಾಕರಣೆಯನ್ನು ಮಾಡಲು ಬರುವದಿಲ್ಲ (ಪ್ರತಿಯೋಗಿ ಜ್ಞಾನವಿಲ್ಲದೆ ಅದರ ನಿಷೇಧವನ್ನು ಮಾಡಲು ಬರುವದಿಲ್ಲ)' ಪ್ರತೀತಿಯಾಗಿದ್ದರೆ ಆಗಿಲ್ಲವೆಂದು ಹೇಳಲು ಬರುವದಿಲ್ಲ (ಆದ್ದರಿಂದ 'ಅಸತ್' ಆದುದಕ್ಕೇ ಪ್ರತೀತಿಯಿಲ್ಲವೆಂದು ಅದ್ವೈತಿಗಳು ಹೇಳಲು ಬರುವದಿಲ್ಲ) ಅಲ್ಲದೆ (ಸದಸದ್ವಿಲಕ್ಷಣ ಎಂಬುದು ತಿಳಿಯಬೇಕಾದರೆ 'ಅಸತ್ 'ದಿಂದ ವಿಲಕ್ಷಣವೆಂಬುದು

ತಿಳಿಯಬೇಕು) ಅಸದ್ವೈಲಕ್ಷಣ್ಯ ಪ್ರತೀತಿಯು 'ಅಸತ್' ಎಂಬುದರ ಪ್ರತೀತಿಯಿಲ್ಲದೆ ಉಂಟಾಗಲಾರದು (ಆದ್ದರಿಂದಲೂ 'ಅಸತ್' ಪ್ರತೀತಿಯನ್ನು ಅದ್ವೈತಿಗಳು ಒಪ್ಪಲೇ ಬೇಕಾಗುವದು )

ಶುಕ್ತಿಯಲ್ಲಿ ತೋರುವ ರಜತತ್ವವು ಸದಸದ್ವಿಲಕ್ಷಣವಲ್ಲ, ಯಾಕಂದರೆ 'ಅಸತ್' ಆದ ರಜತವು ತೋರಿತ್ತು ಎಂದು ಬಾಧಜ್ಞಾನ ಬರುವದು (ಸದಸದ್ವಿಲಕ್ಷಣವಾದ ರಜತವು ತೋರಿತ್ತು ಎಂದು ಬಾಧಜ್ಞಾನ ಬರುವದಿಲ್ಲ) ರಜತವು ತೋರಿದ ಕಾಲದಲ್ಲಿ 'ಸತ್' ಆಗಿಯೇ ತೋರಿದ್ದರಿಂದ ಅದು 'ಅಸತ್' ಅಲ್ಲ (ಅಂದರೆ ಬಾಧಕ ಜ್ಞಾನದಲ್ಲಿ ತೋರಿದಂತೆ 'ಅಸತ್' ಅಲ್ಲ ಅಂದರೆ ಸದಸದ್ವಿಲಕ್ಷಣ) ಎಂಬುದು ಸರಿಯಲ್ಲ ಯಾಕಂದರೆ 'ಅಸತ್' ಆಗಿರುವದು 'ಸತ್' ಆಗಿ ತೋರುವದೂ 'ಸತ್' ಆಗಿರುವದು 'ಅಸತ್' ಆಗಿ ತೋರುವದೂ ಭ್ರಾಂತಿಯು. (ಆದ್ದರಿಂದ ಭ್ರಾಂತಿ ಕಾಲದಲ್ಲಿ 'ಸತ್' ಎಂದು ತೋರಿದ್ದರೂ ಬಾಧಕಜ್ಞಾನವು ಅದರ ನಿಜಸ್ಥಿತಿಯನ್ನು 'ಅಸತ್' ಎಂಬುದನ್ನು ಉಲ್ಲೇಖಿಸುವದು ಆದ್ದರಿಂದ ಶುಕ್ತಿರಜತವು 'ಅಸತ್' ಆಗಿರುವದು, ಸದಸತ್‌ವಿಲಕ್ಷಣವಲ್ಲ ಆದುದರಿಂದ 'ಅಸತ್'ಗೆ ಪ್ರತೀತಿಯಿದ್ದೇ ಇರುವದು)

(ಅದ್ವೈತ ಮತದಲ್ಲಿ ಶುಕ್ತಿರಜತವು ಸದಸದ್ವಿಲಕ್ಷಣ ಅಂದರೆ ಅನಿರ್ವಚನೀಯ ವಾಗಿರುವದರಿಂದ ಅವರ ಮತದ ಪ್ರಕಾರ) ಭ್ರಾಂತಿಯಲ್ಲಿ 'ಅಸತ್' ಪ್ರತೀತಿಯಿಲ್ಲ ವೆಂಬುದು ಸರಿಯಲ್ಲ ಯಾಕಂದರೆ ಅನಿರ್ವಚನೀಯವಾದ ಶುಕ್ತಿರಜತವೂ (ಭ್ರಾಂತಿಕಾಲ ದಲ್ಲಿ) ಸತ್ತಾಗಿ ತೋರುವದು ಮತ್ತು ಅನಿರ್ವಚನೀಯ ಶುಕ್ತಿರಜತದ ಈ ಸತ್ತ್ವವು ಅಸತ್ತಾಗಿಯೇ ಇರುವದು. ಆದ್ದರಿಂದ 'ಅಸತ್' ಆದ ಈ 'ಸತ್ವ'ದ ಪ್ರತೀತಿಯ ಅಂಗೀಕಾರವನ್ನು (ಅದ್ವೈತಿಗಳೂ) ಮಾಡಲೇಬೇಕಾಗುವದು ಇನ್ನು ಅನಿರ್ವಚನೀಯ ಶುಕ್ತಿರಜತವು (ಭ್ರಾಂತಿಕಾಲದಲ್ಲಿ) 'ಸತ್' ಆಗಿ ತೋರುವ ಈ ಸತ್ತ್ವವೂ ಅನಿರ್ವಚನೀಯ ಎಂದು ಹೇಳಲು ಬರುವದಿಲ್ಲ (ಯಾಕಂದರೆ ಅದರ ಸತ್ತ್ವವು ಎಂಥದು ಎಂಬ ಪ್ರಶ್ನೆ ಯುಂಟಾಗಿ ಮತ್ತೆ ಅದೂ ಅನಿರ್ವಚನೀಯವೆಂದರೆ) ಇದರಿಂದ ಅನವಸ್ಥೆಯುಂಟಾಗು ವದು (ಯಾವದೇ ಹಂತದಲ್ಲಿ ಅನಿರ್ವಚನೀಯವು ಅನಿರ್ವಚನೀಯವೇ ಆಗಿ ತಿಳಿದರೆ ಪ್ರವೃತ್ತಿಯುಂಟಾಗುವದಿಲ್ಲ ಸದಸದ್ವಿಲಕ್ಷಣದ ಕಡೆಗೆ ಯಾರೂ ಪ್ರವೃತ್ತರಾಗುವುದಿಲ್ಲ, ಆದ್ದರಿಂದ ಯಾವದಾದರೊಂದು ಘಟ್ಟದಲ್ಲಿ 'ಅಸತ್' ಆದದ್ದರ ಸತ್ವೇನ ಪ್ರತೀತಿಯಾಯಿ ತೆಂದು ಹೇಳಲೇಬೇಕು, ಅಂದರೆ 'ಅಸತ್' ಪ್ರತೀತಿಯನ್ನು ಭ್ರಮದಲ್ಲಿ ಒಪ್ಪಲೇಬೇಕು) ಅಲ್ಲದೆ ಮೊದಲನೆಯ ಘಟ್ಟವಾದ ಶುಕ್ತಿರಜತದ ಅನಿರ್ವಚನೀಯತ್ವವೇ ಇನ್ನೂ ಸಿದ್ಧ ವಾಗಿಲ್ಲದ ಕಾರಣ ಮುಂದಿನ ಯಾವ ಘಟ್ಟದ ಅನಿರ್ವಚನೀಯತ್ವವೂ ಸಿದ್ಧವಾಗುವದಿಲ್ಲ ಹೀಗಾಗಿ ಮೂಲೇ ಕುಠಾರವೇ ಆಗುವದು

**ವಿವರಣೆ**—ಭೇದವು ವ್ಯಾವಹಾರಿಕ ಅಂದರೆ ಸದಸದ್ವಿಲಕ್ಷಣ ಎಂಬ ಅದ್ವೈತಿಗಳ ವಾದವನ್ನು ಇಲ್ಲಿ ನಿರಾಕರಿಸುವರು. ಅದ್ವೈತಿಗಳು ಶುಕ್ತಿರಜತಾದಿಗಳ ದೃಷ್ಟಾಂತದಿಂದ

ಸದಸದ್ವಿಲಕ್ಷಣವನ್ನು ಸಮರ್ಥಿಸುವರು ಶುಕ್ತಿರಜತವು 'ಸತ್' ಆಗಿದ್ದರೆ ಅನಂತರ ಇದು ರಜತವಲ್ಲ ಎಂಬ ಬಾಧಜ್ಞಾನವುಂಟಾಗುತ್ತಿರಲಿಲ್ಲ ಅದು 'ಅಸತ್' ಆಗಿದ್ದರೆ ಅದರ ಪ್ರತೀತಿಯೇ ಉಂಟಾಗುತ್ತಿರಲಿಲ್ಲ ಹೀಗೆ 'ಸತ್' ಅಲ್ಲ, 'ಅಸತ್' ಅಲ್ಲ ಆದ್ದರಿಂದ ಅದು ಸದಸದ್ವಿಲಕ್ಷಣ ಇದರಂತೆಯೇ ಭೇದವೂ ಭೇದಘಟಿತವಾದ ಈ ಪ್ರಪಂಚವೂ ಸಂಸಾರದಶೆಯಲ್ಲಿ ಪ್ರತೀತವಾಗಿರುವದರಿಂದ 'ಅಸತ್' ಅಲ್ಲ ಆತ್ಮೈಕ್ಯಜ್ಞಾನವಾದ ಮೇಲೆ ಬಾಧಿತವಾಗುವದರಿಂದ 'ಸತ್' ಅಲ್ಲ ಆದ್ದರಿಂದ ಸದಸದ್ವಿಲಕ್ಷಣ, ಇದೇ ಅವುಗಳ ವ್ಯಾವಹಾರಿಕತ್ವವು ಎಂದು ವಾದಿಸುವರು ಆದರೆ ಈ ವಾದವು ಸರಿಯಲ್ಲ. 'ಅಸತ್' ಆದದ್ದಕ್ಕೆ ಪ್ರತೀತಿಯಿಲ್ಲ ಎಂಬ ಅವರ ವಾದವು ಸರಿಯಲ್ಲ 'ಅಸತ್'ಗೆ ಪ್ರತೀತಿಯಿಲ್ಲ ಎಂದು ಅದರ ಪ್ರತೀತಿಯನ್ನು ನಿರಾಕರಿಸಬೇಕಾದರೆ ಪ್ರತಿಯೋಗಿಯಾದ 'ಅಸತ್'ದ ಜ್ಞಾನ ಬೇಕೇಬೇಕು ಅದು ಇದ್ದ ಮೇಲೆ ಅದನ್ನು ನಿರಾಕರಿಸುವದು ಹೇಗೆ? 'ಅಸತ್' ಆದ ಶಶವಿಷಾಣಾದಿಗಳ ಪ್ರತೀತಿಯಿರುವದು ಆದ್ದರಿಂದ ಪ್ರತೀತಿಯಿರುವ ಮಾತ್ರದಿಂದ ಅವು 'ಅಸತ್' ಅಲ್ಲ ಎಂದು ಹೇಳಲು ಬರುವದಿಲ್ಲ ಆದುದರಿಂದ ಶುಕ್ತಿ ರಜತವೂ ಅದರ ಪ್ರತೀತಿಯಿದ್ದರೂ 'ಅಸತ್' ಆಗಿದೆ ಅದಕ್ಕೂ ಶಶವಿಷಾಣಕ್ಕೂ ಯಾವ ಭೇದವೂ ಇಲ್ಲ ಶಶವಿಷಾಣವು 'ಅಸತ್', ಶುಕ್ತಿರಜತವು ಸದಸದ್ವಿಲಕ್ಷಣ ಎಂದು ಅವುಗಳನ್ನು ಭಿನ್ನವಾದ ರೀತಿಯಲ್ಲಿ ವರ್ಣಿಸುವ ಅಗತ್ಯವಿಲ್ಲ ಎರಡೂ 'ಅಸತ್' ಆಗಿವೆ ಆದ್ದರಿಂದ ಶುಕ್ತಿರಜತದೃಷ್ಟಾಂತದಿಂದ ಸದಸದ್ವಿಲಕ್ಷಣವನ್ನು ಸಮರ್ಥಿಸಲು ಬರುವದಿಲ್ಲ

ಅಲ್ಲದೆ 'ಅಸದೇವ ರಜತಂ ಪ್ರತ್ಯಭಾತ್' ಎಂಬ ಬಾಧಕಜ್ಞಾನದಿಂದ ಶುಕ್ತಿರಜತವು 'ಅಸತ್' ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ ಶುಕ್ತಿರಜತವು ಪ್ರತೀತಿ ಕಾಲದಲ್ಲಿ 'ಸತ್' ಆಗಿಯೇ ತೋರಿತ್ತು, ಆದ್ದರಿಂದ 'ಅಸತ್' ಪ್ರತೀತಿಯಿಲ್ಲ ಎನ್ನುವುದು ಸರಿಯಲ್ಲ ವಸ್ತುತಃ 'ಅಸತ್' ಆಗಿರುವದು 'ಸತ್' ಆಗಿಯೂ ವಸ್ತುತಃ 'ಸತ್' ಆದದ್ದು ಅಸತ್ ಆಗಿಯೂ ತೋರುವದೇ ಭ್ರಾಂತಿಯು ಆದ್ದರಿಂದ ಪ್ರತೀತಿಕಾಲದಲ್ಲಿ ಶುಕ್ತಿರಜತವು 'ಸತ್' ಆಗಿ ತೋರಿದ್ದರೂ ಅದು ಅಸತ್ ರಜತದ ಪ್ರತೀತಿಯೇ ಆಗಿದೆ

ಇನ್ನು ಭ್ರಾಂತಿಯಲ್ಲಿ ತೋರಿದ ಈ ಶುಕ್ತಿರಜತವು 'ಅಸತ್' ಅಲ್ಲ ಅದು ಅನಿರ್ವಚನೀಯ ಅಂದರೆ ಸದಸದ್ವಿಲಕ್ಷಣ ಎಂದು ವಾದಕ್ಕಾಗಿ ಇಟ್ಟುಕೊಂಡರೂ ಈ ಅನಿರ್ವಚನೀಯ ರಜತವು 'ಸತ್' ಆಗಿ ತೋರಿದ ಸತ್ತ್ವವು 'ಅಸತ್' ಆಗಿದೆ ಮತ್ತು ಅದರ ಪ್ರತೀತಿಯಾಗಿದೆ ಅಂದಮೇಲೆ ಭ್ರಮದಲ್ಲಿ 'ಅಸತ್' ಪ್ರತೀತಿಯನ್ನು ಈರೀತಿ ಯಾಗಿಯಾದರೂ ಅಂಗೀಕರಿಸಲೇಬೇಕಾಗುತ್ತದೆ ಅನಿರ್ವಚನೀಯ ರಜತವು 'ಸತ್' ಆಗಿ ತೋರಿದ ಈ ಸತ್ತ್ವವೂ ಅನಿರ್ವಚನೀಯವೆಂದರೆ ಅದರ 'ಸತ್ತ್ವ' ಏನು ಎಂದು ಕೇಳಬೇಕಾಗುತ್ತದೆ ಅದೂ 'ಅನಿರ್ವಚನೀಯ' ಅಂದರೆ ಅದರ 'ಸತ್ತ್ವ' ಎಂಥದು ಎಂದು ಕೇಳಬೇಕಾಗುತ್ತದೆ. ಅದೂ ಅನಿರ್ವಚನೀಯ ಅಂದರೆ ಅನವಸ್ಥೆಯುಂಟಾಗುತ್ತದೆ. ಯಾಕಂದರ ಅನಿರ್ವಚನೀಯವನ್ನು ಅನಿರ್ವಚನೀಯವೆಂದೇ ತಿಳಿದರೆ ಪ್ರವೃತ್ತಿಯುಂಟಾ ಗುವದಿಲ್ಲ. ಯಾವುದೋ ಒಂದು ಹಂತದಲ್ಲಿ ಅದು 'ಸತ್' ಎಂದು ಭ್ರಮಿಸಲೇಬೇಕು.

ಅಂದರೆ ಪ್ರವೃತ್ತಿಯುಂಟಾಗುವದು. ಅಂದರೆ ಅನಿವ ಚನೀಯದ 'ಅಸತ್' ಆದ ಸತ್ತ್ವ ವನ್ನು ಗ್ರಹಿಸಲೇಬೇಕು ಆದ್ದರಿಂದ ಭ್ರಮದಲ್ಲಿ 'ಅಸತ್ ಪ್ರತೀತಿಯನ್ನು ತಪ್ಪಿಸಿಕೊಳ್ಳಲು ಬರುವದಿಲ್ಲ ಅಂದಮೇಲೆ ಇಷ್ಟು ದ್ರಾವಿಡಪ್ರಾಣಾಯಾಮ ಮಾಡಿ ಪದಕ್ತಿಂತ ಭ್ರಮದಲ್ಲಿ 'ಅಸತ್' ಆದ ರಜತವು ಪ್ರತೀತವಾಯಿತು ಎಂದು ಹೇಳಿ 'ಅಸತ್ ಪ್ರತೀತಿಯನ್ನು ಒಪ್ಪಿ ಸದಸದ್ವಿಲಕ್ಷಣತ್ವದ ವಿಚಾರವನ್ನು ಬಿಟ್ಟುಬಿಡುವದೇ ಯೋಗ್ಯವು ಹೀಗೆ ಸದಸದ್ವಿಲಕ್ಷಣತ್ವ ವನ್ನು ಸಮರ್ಥಿಸುವ ದೃಷ್ಟಾಂತದಲ್ಲಿಯೇ ಅದು ಕೂಡುವದಿಲ್ಲವಾದ್ದರಿಂದ ಭೇದವು ವ್ಯಾವಹಾರಿಕ, ಭೇದಘಟಿತ ಪ್ರಪಂಚವು ವ್ಯಾವಹಾರಿಕ ಅಂದರೆ ಸದಸದ್ವಿಲಕ್ಷಣ ಎಂದು ಹೇಳುವ ವಾದವೇ ಸರಿಯಲ್ಲ

**ಶುಕ್ತಿರಜತವು ಅನಿರ್ವಚನೀಯವಲ್ಲ, ಅದೂ ಶಶವಿಷಾಣದಂತೆ 'ಅಸತ್' ಆಗಿದೆ.**

**39. ಅನಿರ್ವಚನೀಯತ್ವೇ ರಜತಸ್ಯ ಅನಿರ್ವಚನೀಯಮಿದಂ ರಜತಮಿತಿ ಬಾಧಕಜ್ಞಾನಮುತ್ಪದ್ಯೇತ । ಮಿಥ್ಯಾಶಬ್ದಸ್ತು ಅಭಾವವಾಚೀ । ನ ಚ ಸದಸದ್ವೈ-ಲಕ್ಷಣ್ಯಂ ನಾಮ ಅಸ್ತೀತ್ಯತ್ರ ಕಿಂಚಿತ್ ಮಾನಮ್। ಅನುಭವವಿರೋಧಶ್ಚ ತತ್ಪಕ್ಷೇ। ಸದಸತೋಃ ದ್ವಯೋಃ ಏವ ಸರ್ವೈಃ ಅನುಭೂಯಮಾನತ್ವಾತ್ । ಅತಃ ಅನಿರ್ವಚನೀಯಾಭಾವಾತ್, ಅಸತಃ ಪ್ರತೀತ್ಯನಂಗೀಕಾರಾತ್, ಪ್ರತೀಯಮಾನ-ತ್ವಾಚ್ಚ ಭೇದಸ್ಯ ಸತ್ತ್ವಪ್ರಾಪ್ತೇಃ, ನ ಅದ್ವಿತೀಯತ್ವಂ ಯುಜ್ಯತೇ ॥**

**ಅನುವಾದ**—ಶುಕ್ತಿರಜತವು (ಅದ್ವೈತಿಗಳು ಹೇಳುವಂತೆ) ಅನಿರ್ವಚನೀಯ ವಾಗಿದ್ದರೆ 'ಅನಿರ್ವಚನೀಯಮೇವ ರಜತಂ ಪ್ರತ್ಯಭಾತ್' (ಅನಿರ್ವಚನೀಯವಾದ ರಜತವು ತೋರಿತ್ತು) ಎಂದು ಬಾಧಕಜ್ಞಾನವು ಬರುತ್ತಿತ್ತು (ಹಾಗೆ ಬಂದಿಲ್ಲವಾದ್ದರಿಂದ ಶುಕ್ತಿರಜತವು ಅನಿರ್ವಚನೀಯವಲ್ಲ). (ಮಿಥ್ಯೈವ ರಜತಂ ಪ್ರತ್ಯಭಾತ್ ಎಂದು ಬಾಧಕಜ್ಞಾನವು ಬರುವದರಿಂದ ಮತ್ತು ಮಿಥ್ಯಾಶಬ್ದವು 'ಅನಿರ್ವಚನೀಯ' ಎಂಬ ಅರ್ಥವುಳ್ಳದ್ದಾದ್ದರಿಂದ ಶುಕ್ತಿರಜತವು ಅನಿರ್ವಚನೀಯ ಎಂಬ ವಾದವೂ ಸರಿಯಲ್ಲ ಯಾಕಂದರೆ) ಮಿಥ್ಯಾಶಬ್ದವು 'ಅಸತ್' ಎಂಬ ಅರ್ಥವುಳ್ಳದ್ದೇ ಆಗಿದೆ. ಯಾಕಂದರೆ ಸದಸದ್ವಿಲಕ್ಷಣವಾದ ವಸ್ತುವೊಂದು ಇದೆ ಎಂಬುದರಲ್ಲಿಯೇ ಪ್ರಮಾಣವಿಲ್ಲ (ಹಾಗೆ ಪ್ರಮಾಣವಿದ್ದರೆ ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ಎಂದು ಅರ್ಥಮಾಡುವ ಪ್ರಸಕ್ತಿ ಯುಂಟಾಗುತ್ತಿತ್ತು) ಅಂಥ ಒಂದು ವಸ್ತುವನ್ನು ಕಲ್ಪಿಸುವದು ಅನುಭವಕ್ಕೆ ವಿರುದ್ಧ ವಾದದ್ದು 'ಸತ್' ಮತ್ತು 'ಅಸತ್' ಇವೆರಡೇ ಎಲ್ಲರಿಗೂ ಅನುಭವಸಿದ್ಧವಾಗಿರುವವು

ಆದ್ದರಿಂದ ಭೇದವು ಅನಿರ್ವಚನೀಯ ಅಂದರೆ ವ್ಯಾವಹಾರಿಕವಲ್ಲ (ಅದ್ವೈತಿಗಳ ಪ್ರಕಾರ) 'ಅಸತ್' ಆಗಿರುವದಕ್ಕೆ ಪ್ರತೀತಿ ಇಲ್ಲದೇ ಇರುವದರಿಂದ ಮತ್ತು ಭೇದವು ಪ್ರತೀತವಾಗುವದರಿಂದ ಅದು ಅಸತ್ ಅಲ್ಲ ಆದ್ದರಿಂದ ಭೇದವು ಸತ್ (ಪಾರಮಾರ್ಥಿಕ ವಾಗಿಯೇ ಸತ್) ಎಂದು ಸಿದ್ಧವಾಗುವದರಿಂದ (ಅನುಮಾನಾದಿಗಳಿಂದ) ಭೇದದ ಅಭಾವವನ್ನು ಸಮರ್ಥಿಸಲು ಪ್ರಯತ್ನಿಸುವದು ಯುಕ್ತವಲ್ಲ.

**ವಿವರಣೆ**—ಭೇದವು ವ್ಯಾವಹಾರಿಕ ಎಂದು ಅದ್ವೈತಿಗಳ ವಾದವನ್ನು ನಿರಾಕರಿಸಿ ಭೇದವು ಸತ್ಯ ಎಂಬುದರ ಸಮರ್ಥನೆಯ ಉಪಸಂಹಾರವನ್ನು ಇಲ್ಲಿ ಮಾಡಿರುವರು ಭೇದವು ವ್ಯಾವಹಾರಿಕ ಅಂದರೆ ಸದಸದನಿರ್ವಚನೀಯ ಎಂಬುದು ಬಾಧಕಜ್ಞಾನದಿಂದಲೂ ತಿಳಿದುಬರುವದಿಲ್ಲ. ಮಿಥ್ಯಾಶಬ್ದ ಪ್ರಯೋಗದಿಂದಲೂ ಕಂಡುಬರುವದಿಲ್ಲ ಸದಸದ್ವಿಲಕ್ಷಣ ವಾದ ವಸ್ತುವೇ ಇಲ್ಲ ಇಂಥ ವಸ್ತುವು ಇರುವದೆಂದು ಹೇಳುವದು ಅನುಭವಕ್ಕೆ ವಿರುದ್ಧ ವಾಗಿರುವದು. ಆದ್ದರಿಂದ ಭೇದವು ಅನಿರ್ವಚನೀಯವೂ ಅಲ್ಲ. ಅಸತ್ತೂ ಅಲ್ಲ ಅದು 'ಸತ್' ಆಗಿರುವದು ಆದ್ದರಿಂದ ಅದನ್ನು ನಿರಾಕರಿಸುವದು ಸಮರ್ಥನೀಯವಲ್ಲ

**ಶ್ರುತಿಯು ಅತತ್ತ್ವಾವೇದಕವಾದರೆ ಐಕ್ಯವೂ ಸತ್ಯವಾಗಲಾರದು.**

**40. ಕಥಂ ಚ ಶ್ರುತಿಸಿದ್ಧಃ ಜೀವಪರಮಾತ್ಮಭೇದಃ ನಿರಾಕ್ರಿಯತೇ । ಮಿಥ್ಯಾವಾದಿತ್ವೇ ಚ ಶ್ರುತೇಃ ಕಥಮೈಕ್ಯಸ್ಯ ಸತ್ಯತ್ವಮ್ । ಕಥಂ ಚ ಏವಂ ವಾದಿನಾಂ ವೇದವಾದಿತ್ವಮ್ । ವೇದೋಕ್ತಸ್ಯ ಮಿಥ್ಯಾತ್ವಾಂಗೀಕಾರಾದೇವ ಹಿ ಅವೇದವಾದಿತ್ವಂ ಬೌದ್ಧಾದೀನಾಮಪಿ । ಅತಃ ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಮ್ ।**

**ಅನುವಾದ**—(ಪ್ರತ್ಯಕ್ಷ, ಅನುಮಾನಾದಿಗಳಿಂದ ಸಿದ್ಧವಾದ ಭೇದವನ್ನು ನಿರಾಕರಿಸುವದು ಯುಕ್ತವಲ್ಲವೆಂದು ಈವರೆಗೆ ವಿವರಿಸಿದರು ಈಗ ಶ್ರುತಿಯಿಂದ ಸಿದ್ಧವಾದ್ದರಿಂದ ಭೇದವನ್ನು ನಿರಾಕರಿಸುವದು ಸರ್ವಥಾ ಅಯುಕ್ತ ಎಂದು ಪ್ರತಿಪಾದಿಸುವರು ) ಶ್ರುತಿಯಿಂದ ಸಿದ್ಧವಾದ ಜೀವ-ಪರಮಾತ್ಮಭೇದವನ್ನು ಹೇಗೆ ನಿರಾಕರಿಸುವಿರಿ ? (ಭೇದಶ್ರುತಿಗಳು ಮಿಥ್ಯಾವಾದಿ ಅಂದರೆ ಅತತ್ತ್ವಾವೇದಕ ಎಂದು) ಶ್ರುತಿಗೆ ಮಿಥ್ಯಾವಾದಿತ್ವವನ್ನು ಹೇಳುವಿರಾದರೆ ನಿಮಗೆ ಅಭಿಪ್ರೇತವಾದ ಐಕ್ಯವು ಹೇಗೆ ಸತ್ಯವಾಗುವದು ? (ಶ್ರುತಿಯು ಕೆಲವಂಶದಲ್ಲಿ ಮಿಥ್ಯಾವಾದಿ ಮತ್ತೆ ಕೆಲವಂಶದಲ್ಲಿ ಸತ್ಯ ಎಂದು ಹೇಳಲು ಬರುವದಿಲ್ಲ) ಹೀಗೆ ಶ್ರುತಿಯೇ ಮಿಥ್ಯಾವಾದಿ ಎಂದು ಹೇಳುವ ನೀವು (ಅದ್ವೈತಿಗಳು) ವೇದವಾದಿಗಳು ಎಂದು ಹೇಗೆ ಹೇಳಿಕೊಳ್ಳುವಿರಿ ? ಬೌದ್ಧರು ವೇದಗಳಲ್ಲಿ ಹೇಳಿದ್ದು ಮಿಥ್ಯಾ ಎಂದು ಹೇಳುವದರಿಂದಲೇ ವೇದವಾದಿಗಳಲ್ಲ ಎಂದು ಹೇಳಲ್ಪಡುವರು ಆದುದರಿಂದ (ಜೀವಪರಮಾತ್ಮರ ಭೇದದ ವಿಷಯದಲ್ಲಿ ಎಲ್ಲ ಬಾಧಕಗಳ ಪರಿಹಾರವಾದ್ದರಿಂದ) ವಿಷ್ಣುವಿನ ಸರ್ವೋತ್ತಮತ್ವವನ್ನು ಬೋಧಿಸುವದೇ ಎಲ್ಲ ಆಗಮಗಳ ಮಹಾ ತಾತ್ಪರ್ಯವು

**ವಿವರಣೆ**—ಜೀವಪರಮಾತ್ಮಭೇದವು ಶ್ರುತಿಯಿಂದ ಸಿದ್ಧವಾಗುವದು ಭೇದಶ್ರುತಿಗಳು ಅತತ್ತ್ವಾವೇದಕವಲ್ಲ ಶ್ರುತಿಯಲ್ಲಿಯ ಕೆಲವು ಭಾಗಗಳು ಅತತ್ತ್ವಾವೇದಕ ಎಂದು ಹೇಳಿದರೆ ವೇದಗಳ ಪ್ರಾಮಾಣ್ಯದ ವಿಷಯದಲ್ಲಿ ವಿಶ್ವಾಸವೇ ಇಲ್ಲದೆ ಬೌದ್ಧಸಮಾನರಂತಾಗುವದು ಎಂದು ವಿವರಿಸಿ ಎಲ್ಲ ಆಗಮಗಳು ವಿಷ್ಣುಸರ್ವೋತ್ತಮತ್ವವನ್ನೇ ಬೋಧಿಸುವವು ಎಂದು ಉಪಸಂಹಾರಮಾಡುವರು.

ಅಭೇದವು ಶ್ರುತಿಯ ತಾತ್ಪರ್ಯವಲ್ಲ.

**41. ಕಥಂ ಚ ಜೀವಪರಮಾತ್ಮೈಕ್ಯೇ ಸರ್ವಶ್ರುತೀನಾಂ ತಾತ್ಪರ್ಯಂ ಯುಜ್ಯತೇ । ಸರ್ವಪ್ರಮಾಣವಿರುದ್ಧತ್ವಾತ್ । ತಥಾಹಿ ಅನುಭವವಿರೋಧಃ–ನ ಹಿ ಅಹಂ ಸರ್ವಜ್ಞಃ ಸರ್ವೇಶ್ವರಃ ನಿರ್ದುಃಖಃ ನಿರ್ದೋಷ ಇತಿ ವಾ ಕಸ್ಯಚಿದನುಭವಃ । ಅಸ್ತಿ ಚ ತದ್ವಿಪರ್ಯಯೇಣ ಅನುಭವಃ । ನ ಹಿ ಮಿಥ್ಯಾನುಭವಃ ಅಯಮ್ । ತದ್ವಿಪರೀತಪ್ರಮಾಣಾಭಾವಾತ್ ।**

ಅನುವಾದ—(ಜೀವಬ್ರಹ್ಮರ ಐಕ್ಯವು ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆದ್ದರಿಂದ ಅದರಲ್ಲಿ ವೇದಗಳ ತಾತ್ಪರ್ಯವಿಲ್ಲ ಎಂದು ಮೇಲೆ ಹೇಳಿದರು ಇನ್ನು ಐಕ್ಯ ಪ್ರತಿಪಾದಕವೆಂದು ಅದ್ವೈತಿಗಳಿಗೆ ಅಭಿಪ್ರೇತವಾದ ಶ್ರುತಿವಾಕ್ಯಗಳನ್ನೇ ಆಯ್ದು ಅವರ ವ್ಯಾಖ್ಯಾನವು ಸರಿಯಲ್ಲವೆಂದು ತೋರಿಸಲು, ಮತ್ತು ಐಕ್ಯಕ್ಕೆ ವಿರುದ್ಧವಾದ ಶ್ರುತಿವಚನಗಳನ್ನು ಆಯ್ದು ತೋರಿಸಲು ಪೀಠಿಕೆಯನ್ನು ಹಾಕುತ್ತಾರೆ). ಜೀವಪರಮಾತ್ಮರ ಐಕ್ಯದಲ್ಲಿ ಎಲ್ಲ ಶ್ರುತಿಗಳ ತಾತ್ಪರ್ಯವಿದೆ ಎಂಬುದು ಹೇಗೆ ಕೂಡುತ್ತದೆ? (ಯಾಕಂದರೆ ಈ ಐಕ್ಯವು ಪ್ರತ್ಯಕ್ಷ, ಅನುಮಾನ, ಆಗಮ ಎಂಬ) ಎಲ್ಲ ಪ್ರಮಾಣಗಳಿಗೂ ವಿರುದ್ಧವಾಗಿದೆ 'ನಾನು ಸರ್ವಜ್ಞ, ಸರ್ವೇಶ್ವರ, ದುಃಖರಹಿತ, ದೋಷರಹಿತ' ಎಂಬ ಅನುಭವವು ಯಾರಿಗೂ ಇಲ್ಲದೇ ಇರುವದರಿಂದ (ಜೀವ-ಪರಮಾತ್ಮೈಕ್ಯಕ್ಕೆ) ಅನುಭವ ವಿರೋಧವಿರುವದು ಸ್ಪಷ್ಟವಾಗಿದೆ ಇದಕ್ಕೆ ಪ್ರತಿಯಾಗಿ (ನಾನು ಸರ್ವಜ್ಞನಲ್ಲ, ಸರ್ವೇಶ್ವರನಲ್ಲ, ದುಃಖರಹಿತನಲ್ಲ, ದೋಷರಹಿತನಲ್ಲ, ಆದುದರಿಂದ ಪರಮಾತ್ಮನಿಂದ ಭಿನ್ನನು ಎಂಬ) ಅನುಭವವಿರುವದು. ಈ ಪ್ರತಿಯಾದ ಅನುಭವವು ಮಿಥ್ಯಾ ಅನುಭವ ಎಂದು ಹೇಳಲು ಸಾಧ್ಯವಾಗುವದಿಲ್ಲ ಯಾಕಂದರೆ ಇದಕ್ಕೆ ಬಾಧಕವಾದ ಪ್ರಮಾಣಗಳಿಲ್ಲ.

ವಿವರಣೆ—ಜೀವಪರಮಾತ್ಮರ ಐಕ್ಯವು ಶ್ರುತಿತಾತ್ಪರ್ಯವು ಎಂಬ ಅದ್ವೈತಿಗಳ ವಾದವನ್ನು ಇನ್ನು ಮುಂದೆ ವಿವರವಾಗಿ ನಿರಾಕರಿಸುವರು. ಜೀವಪರಮಾತ್ಮರ ಐಕ್ಯವು ಎಲ್ಲ ಪ್ರಮಾಣಗಳಿಗೂ ವಿರುದ್ಧವಾಗಿದೆ ಆದ್ದರಿಂದ ಶ್ರುತಿತಾತ್ಪರ್ಯವಾಗುವದು ಶಕ್ಯವೇ ಇಲ್ಲ. ಮೊದಲನೆಯದಾಗಿ ಇದು ಅನುಭವಕ್ಕೆ ವಿರುದ್ಧವಾಗಿದೆ ಇಲ್ಲಿ ಅನುಭವ ಅಂದರೆ ಸಾಕ್ಷಿಪ್ರತ್ಯಕ್ಷ ಆತ್ಮಗತವಾದ ಅನುಭವವು ಸಾಕ್ಷಿಯ ಅನುಭವವೇ ಆಗಿರುತ್ತದೆ. 'ಏಷ ಸರ್ವಜ್ಞಃ ಏಷ ಸರ್ವೇಶ್ವರಃ' ಇತ್ಯಾದಿ ಶ್ರುತಿಗಳಿಂದ ಈಶ್ವರನು ಸರ್ವಜ್ಞತ್ವಾದಿ ಗುಣವುಳ್ಳವನು ಎಂಬುದು ಪ್ರಮಿತವೇ ಆಗಿದೆ ಜೀವನು ಈಶ್ವರನೊಡನೆ ಐಕ್ಯವುಳ್ಳವನಾಗಿದ್ದರೆ ಜೀವನಿಗೂ ತಾನು ಸರ್ವಜ್ಞ, ಸರ್ವೇಶ್ವರ ಇತ್ಯಾದಿಯಾದ ಅನುಭವವು ಬರಬೇಕಾಗಿತ್ತು ಅದು ಬರುವದಿಲ್ಲ. ಆದ್ದರಿಂದ ಜೀವೇಶ್ವರೈಕ್ಯವು ಅನುಭವವಿರುದ್ಧವಾದುದು

ಇನ್ನು, ಅದ್ವೈತಿಗಳು 'ಸಗುಣಬ್ರಹ್ಮನು ಸರ್ವಜ್ಞತ್ವಾದಿಗುಣವುಳ್ಳವನಾಗಿರುವನು, ಅವನಿಗೂ ಜೀವನಿಗೂ ನಾವು ಐಕ್ಯವನ್ನು ಹೇಳುವದಿಲ್ಲ ಆದ್ದರಿಂದ ಜೀವನಿಗೆ ತಾನು

ಸರ್ವಜ್ಞ, ಸರ್ವೇಶ್ವರ ಎಂಬ ಅನುಭವ ಬರದಿದ್ದರೆ ಬಾಧಕವಿಲ್ಲ ಎಂದು ವಾದಿಸಬಹುದು ಆದರೆ ಅದ್ವೈತಿಗಳ ನಿರ್ಗುಣಬ್ರಹ್ಮನು ದುಃಖರಹಿತನೂ ದೋಷರಹಿತನೂ ಆಗಿದ್ದಾನೆ ಈ ನಿರ್ಗುಣಬ್ರಹ್ಮನೊಡನೆ ಜೀವನು ಐಕ್ಯವುಳ್ಳವನಾಗಿದ್ದರೆ ಜೀವನಿಗೆ ತಾನು ದುಃಖ ರಹಿತನು, ದೋಷರಹಿತನು ಎಂಬ ಅನುಭವವಾದರೂ ಬರಬೇಕಾಗಿತ್ತು ಅದೂ ಬರುವ ದಿಲ್ಲ ಆದ್ದರಿಂದ ಈ ನಿರ್ಗುಣಬ್ರಹ್ಮಜೀವೈಕ್ಯವೂ ಅನುಭವವಿರುದ್ಧವಾಗಿದೆ ಜೀವನಿಗೆ ತಾನು ದುಃಖೀ, ರಾಗದ್ವೇಷಾದಿದೋಷವುಳ್ಳವನು ಎಂಬ ಅನುಭವವೇ ಬರುವದು ಆದ್ದರಿಂದ ಅವನು ಬ್ರಹ್ಮನಿಂದ ಭಿನ್ನನೇ ಆಗಿರುವನು.

ಇನ್ನು, ಜೀವನಿಗೆ ಬರುವ—ತಾನು ದುಃಖೀ ಮತ್ತು ದೋಷವುಳ್ಳವನು—ಎಂಬ ಅನುಭವವು ಭ್ರಮಾತ್ಮಕ ಆದ್ದರಿಂದ ಮಿಥ್ಯಾ ಎಂದು ಅದ್ವೈತಿಗಳು ವಾದಿಸುವದು ಸರಿಯಲ್ಲ ಯಾಕಂದರೆ ಇದಕ್ಕೆ ಬಾಧಕಜ್ಞಾನವುಂಟಾಗುವದಿಲ್ಲ ಇದು ಭ್ರಮ ಎಂದು ಹೇಳಲು ಯಾವ ಪ್ರಮಾಣಗಳೂ ಇಲ್ಲ

ದ್ವೈತಮತದಲ್ಲಿ ದುಃಖಾದಿಗಳು ಅಂತಃಕರಣಧರ್ಮ, ಇವು ಅಂತಃಕರಣದ ಪರಿಣಾಮಗಳು ಆದರೆ ಸತ್ಯವಾದವುಗಳು ಇವು ತನ್ನಲ್ಲಿ ಸಮವೇತವಾಗಿವೆ ಎಂದು ಜೀವನು ತಿಳಿದುಕೊಳ್ಳುವದೇ ಭ್ರಮ ದುಃಖದ ಸ್ವರೂಪ, ಅದಕ್ಕೆ ಜೀವನು (ಪರಮೇಶ್ವರಾಯತ್ತನಾಗಿ) ಸ್ವಾಮಿಯಾಗಿರುವದು, ಅದನ್ನು ಅವನು ಅನುಭವಿಸುವದು, ತನ್ನಿಮಿತ್ತಕವಾಗಿ ನೀಚೋಚ್ಚಭಾವದ ವಿಕಾರವನ್ನು ಹೊಂದುವದು ಇವೆಲ್ಲವೂ ಸತ್ಯ ವಾದವು ಆದರೆ ಅಂತಃಕರಣಧರ್ಮವಾದ ದುಃಖಾದಿಗಳು ತನ್ನಲ್ಲಿ ಸಮವೇತವಾಗಿವೆ ಎಂದು ತಿಳಿದುಕೊಂಡದ್ದು ಭ್ರಮ. ಆದರೆ ಅದ್ವೈತಮತದಲ್ಲಿ ದುಃಖಸ್ವರೂಪಾದಿಗಳೇ ಭ್ರಮ ಎಂದು ಹೇಳುವರು ಹೀಗೆ ಹೇಳಲು ಪ್ರಮಾಣಗಳಿಲ್ಲ

**'ಸ ಆತ್ಮಾ ಅತತ್ ತ್ವಮಸಿ' ಎಂಬ ಶ್ರುತಿಯು ಭೇದವನ್ನೇ ಹೇಳುವದು.**

**42. ನ ಚ ಅಭೇದೇ ಕಶ್ಚಿದಾಗಮಃ । ಸಂತಿ ಚ ಭೇದೇ ಸರ್ವಾಗಮಾಃ । ತಥಾಹಿ – ಅತತ್ತ್ವಮಸಿ ಇತಿ ನವಕೃತ್ವೋಪದೇಶಃ ಸದೃಷ್ಟಾಂತಕಃ । ನ ಚ ಅಯಂ ಅಭೇದೋಪದೇಶಃ । (೧) ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧಃ ದಿಶಂ ದಿಶಂ ಪತಿತ್ವಾ ಅನ್ಯತ್ರ ಆಯತನಂ ಅಲಬ್ಧ್ವಾ ಬಂಧನಮೇವ ಉಪಾ-ಶ್ರಯತೇ । ಸನ್ಮೂಲಾಃ ಸೋಮ್ಯ ಇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ ।**

**ಅನುವಾದ**—ಜೀವೇಶ್ವರರ ಅಭೇದವನ್ನು ಪ್ರತಿಪಾದಿಸುವ ಒಂದು ಆಗಮವಾಕ್ಯವೂ ಇಲ್ಲ ಆದರೆ ಭೇದವನ್ನು ಪ್ರತಿಪಾದಿಸುವ ಅನೇಕಾನೇಕ ಶ್ರುತಿ-ವಾಕ್ಯಗಳಿರುವವು. 'ಅತತ್ ತ್ವಮಸಿ' ನೀನು (ಜೀವನು) ಅವನಿಗಿಂತ (ಪರಮಾತ್ಮನಿಗಿಂತ) ಭಿನ್ನನಾಗಿರುವಿ ಎಂದು ದೃಷ್ಟಾಂತಸಹಿತವಾಗಿ ಒಂಬತ್ತುಸಾರೆ ಶ್ರುತಿಯು ಉಪದೇಶಿಸಿದೆ. ಈ ಉಪದೇಶವು

ಅಭೇದದ ಉಪದೇಶವಲ್ಲ ಯಾಕಂದರೆ ಇದಕ್ಕೆ ಕೊಟ್ಟ ಪ್ರಸಿದ್ಧವಾದ ದೃಷ್ಟಾಂತವು (ಮೊದಲನೆಯದು) ಹೀಗಿದೆ—ದಾರದಿಂದ ಕಟ್ಟಲ್ಪಟ್ಟ ಪಕ್ಷಿಯು ಹೇಗೆ ಎಲ್ಲ ದಿಕ್ಕುಗಳಲ್ಲಿಯೂ ಹಾರಿ ಎಲ್ಲಿಯೂ ಆಶ್ರಯವನ್ನು ಪಡೆಯದೆ ತನ್ನನ್ನು ಬಂಧಿಸಿದ ಸ್ಥಾನಕ್ಕೇ ಬಂದು ಆಶ್ರಯವನ್ನು ಪಡೆಯುವದೋ ಹಾಗೆ ಈ ಎಲ್ಲ ಜೀವರೂ 'ಸತ್' ಅಂದರೆ ಪರಮಾತ್ಮನೇ ಮೂಲವುಳ್ಳವರಾಗಿರುವರು, ಪರಮಾತ್ಮನಿಂದಲೇ ಸ್ಥಿತಿಯನ್ನು ಪಡೆಯುವರು ಹಾಗೂ (ಮುಕ್ತಿಯಲ್ಲಿಯೂ) ಅವನನ್ನೇ ಆಶ್ರಯಿಸಿಕೊಂಡಿರುವರು.

**ವಿವರಣೆ**—ಅದ್ವೈತಿಗಳು ಐಕ್ಯಪ್ರತಿಪಾದಕವೆಂದು ಮೇಲಿಂದ ಮೇಲೆ ಉದಾಹರಿಸುವ 'ಸ ಆತ್ಮಾ ತತ್ ತ್ವಮಸಿ ಶ್ವೇತಕೇತೋ' ಎಂಬ ಶ್ರುತಿಯನ್ನೇ ಮೊದಲು ಆಯ್ದುಕೊಂಡು ಅದು ಭೇದಪರವೆಂದು ತೋರಿಸುವರು. ಈ ಶ್ರುತಿಯು ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಬಂದಿರುವದು ಇಲ್ಲಿ ಹನ್ನೆರಡು ವರುಷ ವೇದಾಧ್ಯಯನ ಮಾಡಿ ತಾನೇ ಸರ್ವಜ್ಞನೆಂದು ಅವಿನೀತನಾದ ಶ್ವೇತಕೇತುವಿಗೆ ತಂದೆ ಉದ್ದಾಲಕರು ಮೊದಲು (ಮೃತ್‌ಪಿಂಡ, ಲೋಹಮಣಿ, ಇತ್ಯಾದಿ) ದೃಷ್ಟಾಂತಗಳಿಂದ ಪ್ರಧಾನನಾದ ಪರಮಾತ್ಮನ ಜ್ಞಾನದಿಂದ ಅಪ್ರಧಾನವಾದ ಇತರ ಸಕಲ ಜಗತ್ತಿನ ಜ್ಞಾನದ ಫಲವು ತಾನೇ ದೊರೆಯುವದು ಎಂದು ಹೇಳಿ, ನಂತರ ಪರಮಾತ್ಮನ ಪ್ರಾಧಾನ್ಯವನ್ನು ವಿವರಿಸಲು 'ಸದೇವ ಸೋಮ್ಯ ಇದಮಗ್ರ ಆಸೀತ್' ಇತ್ಯಾದಿಯಾಗಿ ಪರಮಾತ್ಮನ ಜಗತ್ಕಾರಣತ್ವವನ್ನು ವಿವರಿಸುವರು ಬಳಿಕ ಸುಷುಪ್ತಿ (ಗಾಢನಿದ್ರೆ) ಸ್ವಪ್ನ, ಜಾಗೃತ್ ಅವಸ್ಥೆಗಳಲ್ಲಿಯೂ ಜೀವನು ಪರಮಾತ್ಮನಿಗೆ ಅಧೀನನಾಗಿರುವನು ಎಂದು ವಿವರಿಸುತ್ತ ಸುಷುಪ್ತಿದಶೆಯಲ್ಲಿ ಅಧೀನವಾದದ್ದನ್ನು ವಿವರಿಸಲು ಈ ಶಕುನಿ-ಸೂತ್ರ-ದೃಷ್ಟಾಂತವನ್ನು ಕೊಟ್ಟಿರುವರು ಈ ಸಂದರ್ಭದಲ್ಲಿಯೇ 'ಸ ಆತ್ಮಾ ಅತತ್ ತ್ವಮಸಿ' ಎಂಬ ಈ ಶ್ರುತಿವಚನವು ಬಂದಿರುವದು ಇಲ್ಲಿ 'ಸ ಆತ್ಮಾ ತತ್ ತ್ವಮಸಿ' ಎಂದೂ 'ಸ ಆತ್ಮಾ ಅತತ್ ತ್ವಮಸಿ' ಎಂದೂ ಎರಡು ವಿಧವಾಗಿಯೂ ಪದಚ್ಛೇದ ಮಾಡಲು ಬರುವದು ಆದರೆ ಇಲ್ಲಿ ಕೊಟ್ಟಿರುವ ಶಕುನಿ-ಸೂತ್ರ-ದೃಷ್ಟಾಂತ ಮತ್ತು ಇದೇ ವಾಕ್ಯವನ್ನು ಮತ್ತೆ ಎಂಟು ಸಲ ಉಲ್ಲೇಖಿಸಿ ಕೊಟ್ಟ ಎಂಟೂ ದೃಷ್ಟಾಂತಗಳೂ ಜೀವ-ಪರಮಾತ್ಮರು ಭಿನ್ನರೂ ಜೀವನು ಪರಮಾತ್ಮನಿಗೆ ಅಧೀನನೂ ಎಂಬುದನ್ನೇ ವಿವರಿಸುವವು ಅಂದಮೇಲೆ ಈ ವಾಕ್ಯಕ್ಕೆ ಭೇದಪರವಾದ ಅರ್ಥವೇ ಅಭಿಪ್ರೇತವಾಗಿರುವದರಿಂದ 'ಅತತ್' ಎಂದು ಸಂಧಿಯನ್ನು ಬಿಡಿಸುವದೇ ಯೋಗ್ಯವು 'ತತ್' ಎಂದು ಬಿಡಿಸಿ ಅಭೇದವನ್ನು ಹೇಳುವದು ದೃಷ್ಟಾಂತಗಳಿಗೆ ವಿರುದ್ಧವಾಗುವದು ಅಲ್ಲದೆ ತಾನೇ ಸರ್ವಜ್ಞನೆಂದು ಅವಿನೀತನಾದ ಶ್ವೇತಕೇತುವಿಗೆ ವಿನಯವನ್ನು ಹೇಳಿಕೊಡಬೇಕಾದ ಸಂದರ್ಭಕ್ಕೂ ವಿರುದ್ಧವಾಗುವದು. ಪರಮಾತ್ಮನ ಪ್ರಾಧಾನ್ಯಪ್ರತಿಪಾದನೆ, ಜಗತ್ಕಾರಣತ್ವಪ್ರತಿಪಾದನೆ, ಸುಷುಪ್ತಿ-ಜಾಗ್ರದವಸ್ಥೆಗಳಲ್ಲಿ ಜೀವನು ಅವನಿಗೆ ಅಧೀನವಾದದ್ದರ ಪ್ರತಿಪಾದನೆ ಈ ಎಲ್ಲ ಹಿಂದಿನ ವಿಷಯಗಳಿಗೆ ವಿರುದ್ಧವಾಗುವದು. ಆದುದರಿಂದ 'ಅತತ್' ಎಂದು ಪದವನ್ನು ಗ್ರಹಿಸಿ ಭೇದಪರವಾಗಿ

ಅರ್ಥಮಾಡುವದೇ ಯೋಗ್ಯವು ಈ ಭೇದವನ್ನೂ ಭೇದಸಾಧಕ ದೃಷ್ಟಾಂತಗಳನ್ನೂ ಒಂಬತ್ತು ಸಲ ಹೇಳಿದ್ದರಿಂದ ಈ ಭೇದಕ್ಕೆ ಅಭ್ಯಾಸ ಮತ್ತು ಉಪಪತ್ತಿಗಳೆಂಬ ಎರಡು ತಾತ್ಪರ್ಯಲಿಂಗಗಳ ಸಮರ್ಥನೆಯಿದೆ.

ಇಲ್ಲಿ 'ಉಪದೇಶ' ಎಂಬ ಪದದಿಂದ ಇದು ಪ್ರಜಾಪತಿಯು ವಿರೋಚನನಿಗೆ ಹೇಳಿದಂತೆ ಪ್ರತಾರಣರೂಪವಾದುದಲ್ಲ ಆದರೆ ತತ್ತ್ವೋಪದೇಶರೂಪವಾದುದು ಎಂಬುದು ಸ್ಪಷ್ಟವಾಗುತ್ತದೆ ಸ್ಪಷ್ಟವಾಗಿ ಭೇದಪರವಾದ ಬೇರೆ ಶ್ರುತಿಗಳಿದ್ದರೂ ಈ ಶ್ರುತಿಯನ್ನೇ ಉಲ್ಲೇಖಿಸಿ ವಿವರಿಸಿದ ಉದ್ದೇಶವು ಐಕ್ಯವು ಶ್ರುತಿಗೆ ಅಭಿಪ್ರೇತವಲ್ಲ ಮತ್ತು ತದ್ವಿರುದ್ಧವಾಗಿ ಅದು ಭೇದವನ್ನೇ ಪ್ರತಿಪಾದಿಸುವದು ಎಂಬುದನ್ನು ತೋರಿಸಿಕೊಡುವದೇ ಆಗಿದೆ ಈ ನವಪ್ರಕರಣದಲ್ಲಿ ಭೇದಪರವಾದ ಒಂಬತ್ತು ದೃಷ್ಟಾಂತಗಳಲ್ಲದೆ, ಭೇದವನ್ನು ಪ್ರತಿಪಾದಿಸುವ ಇನ್ನೂ ಅನೇಕ ವಾಕ್ಯಗಳೂ ಇವೆ ಆದ್ದರಿಂದಲೂ 'ಅತತ್ ತ್ವಮಸಿ' ಎಂದು ಭೇದಪರವಾಗಿಯೇ ಅರ್ಥಮಾಡುವದು ಉಚಿತವು

**ಮಧುರಸದೃಷ್ಟಾಂತ ಮತ್ತು ನದೀದೃಷ್ಟಾಂತಗಳು ಭೇದವನ್ನೇ ಪ್ರತಿಪಾದಿಸುವವು.**

**43. (೨) ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠಂತಿ ನಾನಾತ್ಯಯಾನಾಂ ವೃಕ್ಷಾಣಾಂ ರಸಾನಾಂ ಸಮವಹಾರಮೇಕತಾಂ ಗಮಯಂತಿ ತೇ ಯಥಾ ತತ್ರ ನ ವಿವೇಕಂ ಲಭಂತೇ ಅಮುಷ್ಯ ಅಹಂ ವೃಕ್ಷಸ್ಯ ರಸಃ ಅಸ್ಮಿ, ಅಮುಷ್ಯ ಅಹಂ ವೃಕ್ಷಸ್ಯ ರಸಃ ಅಸ್ಮಿ, ಇತಿ ಏವಮೇವ ಖಲು ಸೋಮ್ಯ ಇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹೇ ಇತಿ । ತೇ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ ಭವಂತಿ ತತ್ತದಾಭವಂತಿ ।**

**(೩) ಇಮಾಃ ಸೋಮ್ಯ ನದ್ಯಃ ಪುರಸ್ತಾತ್ ಪ್ರಾಚ್ಯಃ ಸ್ಯಂದಂತೇ ಪಶ್ಚಾತ್ ಪ್ರತೀಚ್ಯಃ । ತಾಃ ಸಮುದ್ರಾತ್ ಸಮುದ್ರಮೇವ ಅಪಿಯಂತಿ । ಸಮುದ್ರ ಏವ ಭವತಿ । ತಾ ಯಥಾ ತತ್ರ ನ ವಿದುಃ ಇಯಮಹಮಸ್ಮಿ, ಇಯಮಹಮಸ್ಮಿ ಇತಿ । ಏವಮೇವ ಖಲು ಸೋಮ್ಯ ಇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹೇ ಇತಿ । ತೇ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ ಭವಂತಿ ತತ್ತದಾ ಭವಂತಿ ।**

**ಅನುವಾದ**—(ಮೊದಲನೆಯ ದೃಷ್ಟಾಂತವಾದ ಶಕುನಿ-ಸೂತ್ರ-ದೃಷ್ಟಾಂತದಿಂದ ಜೀವನು ಭಗವಂತನನ್ನು ಆಶ್ರಯಿಸಿಕೊಂಡಿರುವನು ಎಂದು ಹೇಳಿದರು. ಆದರೆ 'ನನ್ನ ದೇಹದಲ್ಲಿ ನನಗೆ ಆಶ್ರಯನಾಗಿ ನನಗಿಂತ ಭಿನ್ನನಾಗಿರುವ ಇನ್ನೊಬ್ಬನ ಅನುಭವ ಬರುವದಿಲ್ಲವಲ್ಲ'? ಎಂಬ ಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಪೂಜ್ಯರೇ! ನನಗೆ ಇನ್ನಷ್ಟು

ಉಪದೇಶಿಸಿರಿ ಎಂದು ಕೇಳುವ ಮಗನ ಸಂದೇಹವನ್ನು ಪರಿಹರಿಸಲು ಎರಡನೆಯ ದೃಷ್ಟಾಂತವನ್ನು ಹೇಳುತ್ತಾರೆ )

ಜೇನುನೊಣಗಳು ಜೇನನ್ನು ಸಂಗ್ರಹಿಸುತ್ತವೆ ಅವು ವಿಲಕ್ಷಣವಾದ ನಾನಾ ವೃಕ್ಷಗಳ (ಹೂವುಗಳ) ರಸವನ್ನು ಒಟ್ಟಿಗೆ ಸೇರಿಸುತ್ತವೆ ಆದರೆ (ಅದರಲ್ಲಿ ಕೂಡಿರುವ ರಸಗಳಿಗೆ) ನಾನು ಈ ವೃಕ್ಷದ ರಸ, ನಾನು ಈ ವೃಕ್ಷದ ರಸ ಎಂಬ ಭೇದ ಜ್ಞಾನವಿರುವದಿಲ್ಲ. (ಅಂದರೆ ಅವು ಭಿನ್ನವಾಗಿದ್ದರೂ ತಾವು ಭಿನ್ನವಾಗಿರುವದು ಅವುಗಳಿಗೆ ತಿಳಿದಿರುವದಿಲ್ಲ ) ಇದರಂತೆಯೇ ಈ ಜೀವರು 'ಸತಿ' ಅಂದರೆ ತಮ್ಮ ತಮ್ಮ ಶರೀರದಲ್ಲಿದ್ದ ಪರಮೇಶ್ವರನೊಡನೆ 'ಸಂಪದ್ಯ' ಅಂದರೆ ಸಂಪರ್ಕವನ್ನು ಪಡೆದೂ ಅವನೊಡನೆ ಇರುವೆವು ಎಂಬುದನ್ನು (ಅವನ ಶಕ್ತಿಯಿಂದಲೇ) ತಿಳಿಯದೇ ಇರುವರು ಹೀಗೆ ಪರಮೇಶ್ವರನನ್ನು ಆಶ್ರಯಿಸಿಕೊಂಡು ಇರುವೆವು ಎಂಬುದು ತಿಳಿಯದೇ ಇರುವದರಿಂದ ಅವರು ಹುಲಿ, ಸಿಂಹ, ತೋಳ, ಹಂದಿ, ಹುಳು, ರೆಕ್ಕೆಯ ಹುಳು, ಸೊಳ್ಳೆ, ನೊಣ ಇತ್ಯಾದಿ ಆಯಾ ಜನ್ಮಗಳನ್ನು ತಾಳುವರು

(ಅಚೇತನವಾದ ವೃಕ್ಷರಸಗಳಿಗೆ ಪರಸ್ಪರ ಭೇದಜ್ಞಾನವಿಲ್ಲದೇ ಇರಬಹುದು. ಆದರೆ ಚೇತನನಾದ ನನಗೆ ನನ್ನಲ್ಲಿದ್ದು ಆಶ್ರಯನಾದ ಭಗವಂತನೊಡನೆ ಇರುವ ಭೇದವು ಏಕೆ ತಿಳಿಯುವದಿಲ್ಲ ಎಂಬ ಶಂಕೆಯನ್ನು ಪರಿಹರಿಸಲು ಮೂರನೆಯ ದೃಷ್ಟಾಂತವನ್ನು ಹೇಳುವರು )

ಪೂರ್ವದಿಕ್ಕಿನಲ್ಲಿ ಹರಿಯುವದರಿಂದ ಪ್ರಾಚೀ ಎಂದು ಹೆಸರು ಪಡೆದಿರುವ ನದಿಗಳು ಪೂರ್ವಕ್ಕೆ ಹರಿಯುವವು ಪಶ್ಚಿಮ ದಿಕ್ಕಿನಲ್ಲಿ ಹರಿಯುವದರಿಂದ ಪ್ರತೀಚೀ ಎಂದು ಹೆಸರು ಪಡೆದಿರುವ ನದಿಗಳು ಪಶ್ಚಿಮಕ್ಕೆ ಹರಿಯುವವು ಇವು (ಮೋಡಗಳ ದ್ವಾರಾ) ಸಮುದ್ರದಿಂದಲೇ ಹುಟ್ಟಿ ಸಮುದ್ರಕ್ಕೇ ಹರಿಯುವವು ಸಮುದ್ರವು ಸಮುದ್ರವಾಗಿಯೇ ಇರುವದು (ಸಮುದ್ರವನ್ನು ಸೇರಿದ) ನದೀ ಅಭಿಮಾನಿ ದೇವತೆಗಳು ಆ ಸಮುದ್ರದಲ್ಲಿ 'ಇದು ನಾನು ಗಂಗೆ' 'ಇದು ನಾನು ಯಮುನೆ' ಎಂಬುದನ್ನು ತಿಳಿಯದೇ ಇರುವವು (ಅಂದರೆ ಇದು ಗಂಗಾನದಿಯಾದ ನನ್ನ ನೀರಿನ ಭಾಗ, ಇದು ಯಮುನಾನದಿಯಾದ ನನ್ನ ನೀರಿನ ಭಾಗ ಎಂಬುದನ್ನು ತಿಳಿಯದೇ ಇರುವವು) ಇದರಂತೆಯೇ ಈ ಜೀವರು 'ಸತಃ' ಅಂದರೆ ಪರಮಾತ್ಮನಿಂದ ಉತ್ಪನ್ನರಾಗಿಯೂ ಅವನಿಂದ ಉತ್ಪನ್ನರಾಗಿರುವೆವು ಎಂಬುದನ್ನು ತಿಳಿಯದೇ ಇರುವರು ಇದನ್ನು ತಿಳಿಯದೇ ಇರುವ ಅವರು ಹುಲಿ, ಸಿಂಹ, ತೋಳ ಇತ್ಯಾದಿಯಾಗಿ ಆಯಾ ಜನ್ಮಗಳನ್ನು ತಾಳುವರು

**ವಿವರಣೆ**—ಎರಡನೆಯ ದೃಷ್ಟಾಂತವಾದ ಮಧುರಸ ದೃಷ್ಟಾಂತದಲ್ಲಿ ಜೀವ-ಪರಮಾತ್ಮರು ಜೀವನ ಶರೀರದಲ್ಲಿ ಒಂದೇ ಕಡೆಗಿದ್ದರೂ ಜೀವನಿಗೆ ಪರಮಾತ್ಮನೊಡನಿರುವ ಭೇದಜ್ಞಾನ ಏಕೆ ಆಗುವದಿಲ್ಲ ಎಂಬ ಶಂಕೆಗೆ ಉತ್ತರವಿದೆ ಬೇರೆ ಬೇರೆ ವೃಕ್ಷರಸಗಳು ಒಂದೇ ಕಡೆಗಿದ್ದರೂ ಅವು ಅಚೇತನವಾದ್ದರಿಂದ ಅವುಗಳಿಗೆ ಪರಸ್ಪರ ಭೇದ ತಿಳಿಯುವದಿಲ್ಲ. ಆದರೆ ಜೀವನು ಚೇತನನು ಅವನಿಗೆ ತನ್ನೊಡನಿದ್ದ ಪರಮಾತ್ಮನೊಡನಿರುವ ಭೇದ

ತಿಳಿಯಬೇಕು ಎಂಬ ಶಂಕೆಯನ್ನು ಪರಿಹರಿಸಲು ಮೂರನೆಯ ನದೀ ಸಮುದ್ರದೃಷ್ಟಾಂತವನ್ನು ಕೊಡಲಾಗಿದೆ. ನದೀ ಅಭಿಮಾನಿದೇವತೆಗಳು ಚೇತನರು ಆದರೂ ಅವರಿಗೂ ಸಮುದ್ರದೊಡನೆ ಸಂಗಮವಾದಾಗ ತಮ್ಮ ತಮ್ಮ ನೀರಿನ ಭೇದ ತಿಳಿಯುವದಿಲ್ಲ.

ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ ।
ವಾಯುಸ್ತು ತತ್ ಪೃಥಕ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ॥

ಎಂಬ ವಚನದಿಂದ ಇದು ತಿಳಿದುಬರುವದು ಆದುದರಿಂದ ಚೇತನರಾದವರಿಗೂ ಪರಸ್ಪರ ಭೇದ ತಿಳಿದುಬರದೇ ಇರಬಹುದು. ಸಮೀಪದಲ್ಲಿಯೇ ಇದ್ದು ಆಶ್ರಯನಾಗಿದ್ದ ಪರಮಾತ್ಮನೊಡನೆ ಇರುವ ಭೇದವು ಅವನ ಶಕ್ತಿಯಿಂದಲೇ ತಿಳಿದುಬರುವದಿಲ್ಲ. ಅದನ್ನು ಗುರೂಪದೇಶ ಶಾಸ್ತ್ರಜ್ಞಾನಗಳಿಂದ ತಿಳಿದುಕೊಂಡು ಅವನ ಮಾಹಾತ್ಮ್ಯವನ್ನು ತಿಳಿದುಕೊಳ್ಳದೇ ಇದ್ದರೆ ವ್ಯಾಘ್ರ, ವೃಕ, ಮಶಕಾದಿ ಜನ್ಮವು ಬರುವದು

ಈ ಮೂರನೆಯ ನದೀ ಸಮುದ್ರದೃಷ್ಟಾಂತವನ್ನು ಚೇತನರಾದ ನದೀ ಅಭಿಮಾನಿ ದೇವತೆಗಳು ಎಂದು ವ್ಯಾಖ್ಯಾನ ಮಾಡಿ ಅರ್ಥ ಮಾಡುವದೇ ಉಚಿತವು. ಕೇವಲ ಅಚೇತನ ನದೀ ಪರವಾಗಿ ಮಾತ್ರ ಅರ್ಥಮಾಡಿದರೆ ಎರಡನೆಯ ಮಧುರಸ ದೃಷ್ಟಾಂತಕ್ಕೂ ಮೂರನೆಯ ನದೀ ದೃಷ್ಟಾಂತಕ್ಕೂ ವ್ಯತ್ಯಾಸವೇ ಇಲ್ಲದೆ ಈ ಮೂರನೆಯ ದೃಷ್ಟಾಂತವು ವ್ಯರ್ಥವೆನಿಸುವದು

**ವೃಕ್ಷಚ್ಛೇದನದ ದೃಷ್ಟಾಂತ ಮತ್ತು ನ್ಯಗ್ರೋಧಫಲಬೀಜ ದೃಷ್ಟಾಂತಗಳು.**

**44. (೪) ಸ ಏಷ ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನೋ ಮೋದಮಾನಃ ತಿಷ್ಠತಿ । ಅಸ್ಯ ಯದಾ ಏಕಾಂ ಶಾಖಾಂ ಜೀವೋ ಜಹಾತಿ ಅಥ ಸಾ ಶುಷ್ಯತಿ ।**

**(೫) ನ್ಯಗ್ರೋಧಫಲಮತ ಆಹರೇತಿ, ಇದಂ ಭಗವ ಇತಿ, ಭಿಂದೀತಿ, ಭಿನ್ನಂ ಭಗವ ಇತಿ, ಕಿಮತ್ರ ಪಶ್ಯಸೀತಿ, ಅಣ್ವ್ಯಃ ಇವ ಇಮಾ ಧಾನಾ ಭಗವ ಇತಿ, ಆಸಾಮ್ ಅಂಗ ಏಕಾಂ ಭಿಂದೀತಿ, ಭಿನ್ನಾ ಭಗವ ಇತಿ, ಕಿಮತ್ರ ಪಶ್ಯಸೀತಿ, ನ ಕಿಂಚನ ಭಗವ ಇತಿ । ತಂ ಹ ಉವಾಚ ಯಂ ವೈ ಸೋಮ್ಯ ಏತಂ ಅಣಿಮಾನಂ ನ ನಿಭಾಲಯಸೇ ಅಸ್ಯ ಸೋಮ್ಯ ಅಣಿಮ್ನಃ ಏವಂ ಮಹಾನ್ ನ್ಯಗ್ರೋಧಃ ತಿಷ್ಠತಿ ।**

**ಅನುವಾದ**—(ಈಶ್ವರನು ಇರಲಿ, ಅವನು ಭಿನ್ನನೂ ಆಗಿರಲಿ, ಆದರೆ ಜೀವನು ಅವನಿಗೆ ಅಧೀನನಾಗಿರುವನೆಂದು ಏಕೆ ಹೇಳಬೇಕು ಎಂಬ ಶಂಕೆಯನ್ನು ಪರಿಹರಿಸಲು ನಾಲ್ಕನೆಯ ದೃಷ್ಟಾಂತವನ್ನು ಹೇಳುವರು).

' ಸ ಏಷಃ ' ಅಂದರೆ ವೃಕ್ಷದಲ್ಲಿರುವ ಜೀವನು, 'ಅನೇನ ಜೀವೇನ ಆತ್ಮನಾ' ಅಂದರೆ ಪ್ರಕೃತನಾದ ಪರಮಾತ್ಮನಿಂದ, ಅಧಿಷ್ಠಿತನಾದವನಾಗಿ ನೀರು ಕುಡಿದು ಸುಖಿಯಾಗಿ

ಇರುವನು. ಆದರೆ 'ಜೀವ' ಅಂದರೆ ಪರಮಾತ್ಮನು ಈ ವೃಕ್ಷದ ಒಂದು ಶಾಖೆಯನ್ನು ಬಿಟ್ಟರೆ ಒಣಗುವದು (ಈ ದೃಷ್ಟಾಂತದ ಪೂರ್ಣಸಾರದ ವಿವರಗಳನ್ನು ಕೆಳಗೆ ವಿವರಣೆಯಲ್ಲಿ ಕೊಡಲಾಗಿದೆ)

(ಮೇಲಿನ ವೃಕ್ಷದೃಷ್ಟಾಂತದಲ್ಲಿ ಹೇಳಿದಂತೆ ಪರಮಾತ್ಮನು ಸತ್ತಾದಿಪ್ರದನಾಗಿ ಜೀವನ ಶರೀರದಲ್ಲಿಯೇ ಇದ್ದರೆ ಜೀವನಿಗೆ ಏಕೆ ಕಾಣಿಸುವದಿಲ್ಲ ಎಂಬ ಶಂಕೆಯನ್ನು ಪರಿಹರಿಸಲು ಮುಂದಿನ ನ್ಯಗ್ರೋಧಫಲದೃಷ್ಟಾಂತವನ್ನು ಹೇಳುವರು) 'ಆ ನ್ಯಗ್ರೋಧ ವೃಕ್ಷದಿಂದ ಒಂದು ಹಣ್ಣನ್ನು ತೆಗೆದುಕೊಂಡು ಬಾ' (ಎಂದು ತಂದೆಯು ಹೇಳಿದನು) ಇಗೋ ತಂದಿರುವೆನು ಪೂಜ್ಯರೇ! (ಎಂದು ಮಗನು ಒಂದು ಹಣ್ಣನ್ನು ತಂದು ತೋರಿಸು ವನು) ಅದನ್ನು ಒಡೆ ಪೂಜ್ಯರೇ! ಒಡೆದೆನು ಅದರಲ್ಲಿ ಏನು ಕಾಣುವಿ? ಅತಿಚಿಕ್ಕವಾದ ಬೀಜಗಳನ್ನು ಕಾಣುವೆನು. ಮಗು ಆ ಬೀಜಗಳಲ್ಲಿ ಒಂದನ್ನು ಒಡೆ ಪೂಜ್ಯರೇ! ಒಡೆದೆನು ಅದರಲ್ಲಿ ಏನು ಕಾಣುವಿ? ಪೂಜ್ಯರೇ! ಏನೂ ಕಾಣುವದಿಲ್ಲ ಮಗು ಅತಿ ಸೂಕ್ಷ್ಮನಾದ ಯಾರನ್ನು ನೀನು ಅದರಲ್ಲಿ ಕಾಣುವದಿಲ್ಲವೋ ಆ ಅತಿಸೂಕ್ಷ್ಮನಾದ ಪರಮಾತ್ಮನ ಸಾಮರ್ಥ್ಯದಿಂದಲೇ ಈ ಎದುರಿಗಿರುವ ದೊಡ್ಡ ನ್ಯಗ್ರೋಧ ವೃಕ್ಷವು ನಿಂತಿರುತ್ತದೆ.

ವಿವರಣೆ—ನಾಲ್ಕನೆಯ ದೃಷ್ಟಾಂತದ ಪೂರ್ಣಸಾರ ಹೀಗಿದೆ—

'ಅಸ್ಯ ಮಹತಃ ವೃಕ್ಷಸ್ಯ ಯೋ ಮೂಲೇ ಅಭ್ಯಾಹನ್ಯಾತ್ ಜೀವನ್ ಸ್ರವೇತ್, ಯೋ ಮಧ್ಯೇ ಅಭ್ಯಾಹನ್ಯಾತ್ ಜೀವನ್ ಸ್ರವೇತ್, ಯೋ ಅಗ್ರೇ ಅಭ್ಯಾಹನ್ಯಾತ್ ಜೀವನ್ ಸ್ರವೇತ್, ಸ ಏಷಃ ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೋದಮಾನಃ ತಿಷ್ಠತಿ। ಅಸ್ಯ ಯದ್ಯೇಕಾಂ ಶಾಖಾಂ ಜೀವೋ ಜಹಾತಿ ಅಥ ಸಾ ಶುಷ್ಯತಿ, ದ್ವಿತೀಯಾಂ ಜಹಾತಿ ಅಥ ಸಾ ಶುಷ್ಯತಿ, ತೃತೀಯಾಂ ಜಹಾತಿ ಅಥ ಸಾ ಶುಷ್ಯತಿ, ಸರ್ವಂ ಜಹಾತಿ ಸರ್ವಃ ಶುಷ್ಯತಿ, ಏವಮೇವ ಖಲು ಸೋಮ್ಯ ವಿದ್ಧೀತಿ ಹೋವಾಚ। ಜೀವಾಪೇತಂ ವಾವ ಕಿಲ ಇದಂ ಮ್ರಿಯತೇ ನ ಜೀವೋ ಮ್ರಿಯತೇ ಇತಿ।'

ಇಲ್ಲಿ 'ಜೀವ' ಎಂಬ ಶಬ್ದಕ್ಕೆ ಪರಮಾತ್ಮನು ಎಂದು ಅರ್ಥವು. 'ಈ ದೊಡ್ಡ ವೃಕ್ಷದ ಬೇರು, ಮಧ್ಯ, ಮತ್ತು ತುದಿಗಳಿಗೆ ಯಾರಾದರೂ ಹೊಡೆದರೆ ಅದರಲ್ಲಿ ಜೀವ ಅಂದರೆ ಪರಮಾತ್ಮನು (ವೃಕ್ಷಜೀವಕ್ಕೆ ಆಶ್ರಯನಾಗಿ ನಿಂತ ಪರಮಾತ್ಮನು) ಇರುವವರೆಗೆ ಅದು ರಸವನ್ನು ಸುರಿಸುವದು (ಹೀಗೆ ರಸವನ್ನು ಸುರಿಸಿ ಸಜೀವವಾಗಿರುವದನ್ನು ಸೂಚಿಸುವದು) ಅದರಲ್ಲಿಯ ವೃಕ್ಷಜೀವವು ಪರಮಾತ್ಮನಿಂದ ಅಧಿಷ್ಠಿತವಾಗಿದ್ದು ನೀರು ಮೊದಲಾದವುಗಳನ್ನು ಸ್ವೀಕರಿಸಿ ಸುಖದಿಂದಿರುವದು ಆದರೆ ಪರಮಾತ್ಮನು ಒಂದೊಂದೇ ಶಾಖೆಯನ್ನು ಬಿಟ್ಟಂತೆ ಅವು ಒಣಗುತ್ತ ಬರುವವು ಇದರಿಂದ ತಿಳಿದುಬರುವದೇನೆಂದರೆ ಪರಮಾತ್ಮನು ಇರುವವರೆಗೆ ಈ ಪ್ರಾಣಿಜಾತವು ಜೀವಂತವಾಗಿರುವದು ಅವನು ಬಿಟ್ಟೊಡನೆ ಮೃತವಾಗುವದು. ಪರಮಾತ್ಮನು ನಿತ್ಯನು. ಪರಮಾತ್ಮನ ಅನುಗ್ರಹ ವಿರುವವರೆಗೆ ಆಘಾತಗಳಾದರೂ ಜೀವಕಳೆ ತುಂಬಿರುವದು. ಅವನ ಅನುಗ್ರಹವಿಲ್ಲದಿದ್ದರೆ

ಆಘಾತವಿಲ್ಲದೆಯೂ ಮೃತ್ಯುವು ಬರುವದು  ಈ ದೃಷ್ಟಾಂತದಿಂದ ಜೀವನ ಸತ್ತಾದಿಗಳು ಪರಮಾತ್ಮನ ಅಧೀನವಾಗಿರುವವು ಎಂದು ತಿಳಿದುಬರುವದು

ಐದನೆಯ ನ್ಯಗ್ರೋಧಫಲ ಬೀಜದೃಷ್ಟಾಂತದಿಂದ ಪರಮಾತ್ಮನು ಸೂಕ್ಷ್ಮಾತಿ-ಸೂಕ್ಷ್ಮನಾಗಿದ್ದರಿಂದ ಜೀವಾಂತರ್ಗತನಾಗಿದ್ದರೂ ಜೀವನಿಗೆ ಕಾಣಿಸುವದಿಲ್ಲ ಎಂದು ತಿಳಿಸಲಾಗಿದೆ

**ಲವಣೋದಕದೃಷ್ಟಾಂತ ಮತ್ತು ಕಣ್ಣುಕಟ್ಟಿ ಅರಣ್ಯದಲ್ಲಿ ಬಿಟ್ಟ ಗಾಂಧಾರ ಪುರುಷನ ದೃಷ್ಟಾಂತಗಳು.**

**45. (೬) ಲವಣಮೇತದುದಕೇ ಅವಧಾಯ ಅಥ ಮಾ ಪ್ರಾತರುಪಸೀದಥಾ ಇತಿ, ತದ್ಧ ತಥಾ ಚಕಾರ, ತಂ ಹ ಉವಾಚ, ಯದ್ದೋಷಾ ಲವಣಮೇತದುಕೇ-ವಧಾ ಅಂಗ ತದಾಹರೇತಿ, ತದ್ಧ ಅವಮೃಶ್ಯ ನ ವಿವೇದ ಯಥಾ ವಿಲೀನಮೇವ, ಅಂಗ ಅಸ್ಯ ಅಂತಾದಾಚಾಮೇತಿ ಕಥಮಿತಿ, ಲವಣಮಿತಿ, ಮಧ್ಯಾದಾಚಾಮೇತಿ ಕಥಮಿತಿ, ಲವಣಮಿತಿ, ಅಂತ್ಯಾದಾಚಾಮೇತಿ ಕಥಮಿತಿ, ಲವಣಮಿತಿ, ಅಭಿಪ್ರಾಸ್ಯ ಏತದಥ ಮಾ ಉಪಸೀದಥಾ ಇತಿ, ತದ್ಧ ತಥಾ ಚಕಾರ ತತ್ ಶಶ್ವತ್ ಸಂವರ್ತತೇ। ತಂ ಹ ಉವಾಚ ಅತ್ರ ವಾವ ಕಿಲ ಸತ್‌ಸೋಮ್ಯ ನ ನಿಭಾಲಯಸೇ ಅತ್ರೈವ ಕಿಲೇತಿ।**

**(೭) ಯಥಾ ಸೋಮ್ಯ ಪುರುಷಂ ಗಂಧಾರೇಭ್ಯೋ ಅಭಿನದ್ಧಾಕ್ಷಮ್ ಆನೀಯ ತತಃ ಅತಿಜನೇ ವಿಸೃಜೇತ್ ।**

**ಅನುವಾದ**—(ನ್ಯಗ್ರೋಧಫಲಗಳ ಬೀಜದಲ್ಲಿ ಪರಮಾತ್ಮನಿರುವದು ಅವನ ಸಾಮರ್ಥ್ಯದಿಂದ ಕಂಡುಬರುತ್ತದೆ ಎಂದು ಹಿಂದಿನ ದೃಷ್ಟಾಂತದಲ್ಲಿ ಹೇಳಿದರು. ಆದರೆ ಹೀಗೆ ಅವನ ಸಾಮರ್ಥ್ಯ ಕಂಡುಬಂದರೂ ಅವನೇ ಏಕೆ ಕಂಡುಬರುವದಿಲ್ಲ ಎಂಬುದನ್ನು ವಿವರಿಸಲು ಈ ಮುಂದಿನ ಲವಣೋದಕ ದೃಷ್ಟಾಂತವನ್ನು ಕೊಡುವರು )

ಈ ಉಪ್ಪನ್ನು ನೀರಿನಲ್ಲಿ ಹಾಕಿ ಬೆಳಿಗ್ಗೆ ನನ್ನ ಕಡೆಗೆ (ತೆಗೆದುಕೊಂಡು) ಬಾ. (ಎಂದು ತಂದೆಯು ಮಗ ಶ್ವೇತಕೇತುವಿಗೆ ಹೇಳುವರು) ಅವನು ಹಾಗೆಯೇ ಮಾಡಿದನು. (ಉಪ್ಪನ್ನು ನೀರಿನ ಪಾತ್ರೆಯಲ್ಲಿ ಹಾಕಿದನು) ಮಗು! ರಾತ್ರಿ ನೀರಿನಲ್ಲಿ ಹಾಕಿದ ಉಪ್ಪನ್ನು ತೆಗೆದುಕೊಂಡು ಬಾ (ಎಂದು ತಂದೆಯು ಬೆಳಿಗ್ಗೆ ಹೇಳುವರು). (ನೀರಿನಲ್ಲಿ) ಕೈಯಾಡಿಸಿ ಅವನು ಅದನ್ನು ಪಡೆಯಲಿಲ್ಲ ಅದು ನಷ್ಟವೇ ಆದಂತಾಗಿದ್ದಿತು. (ಆಗ ತಂದೆಯು ಆ ನೀರಿನ) ಪೂರ್ವಭಾಗದಿಂದ ಸ್ವಲ್ಪ ಕುಡಿ ಎಂದರು (ಮಗನು ಕುಡಿದನು). ಅದು ಹೇಗಿದೆ? ಎಂದು ಕೇಳಿದರು ಉಪ್ಪಾಗಿದೆ ಎಂದನು. ಮಧ್ಯಭಾಗದಿಂದ ಸ್ವಲ್ಪ ಕುಡಿ ಎಂದರು (ಮಗನು ಕುಡಿದನು) ಹೇಗಿದೆ? ಎಂದರು ಉಪ್ಪಾಗಿದೆ ಎಂದನು. ಪಶ್ಚಿಮ ಭಾಗದಿಂದ ಸ್ವಲ್ಪ ಕುಡಿ ಎಂದರು (ಮಗನು ಕುಡಿದನು) ಹೇಗಿದೆ? ಎಂದು ಕೇಳಿದರು. ಉಪ್ಪಾಗಿದೆ ಎಂದನು ಇದನ್ನು ಹೊರಗೆ ಚೆಲ್ಲಿ ನನ್ನ ಕಡೆಗೆ ಬಾ ಎಂದರು.

ಅವನು ಹಾಗೆಯೇ ಮಾಡಿದನು ಆ ಉಪ್ಪು ಆ ನೀರಿನಲ್ಲಿಯೇ ಇದ್ದಿತು (ನಷ್ಟವಾಗಿರ ಲಿಲ್ಲ) ಮಗು (ಆ ಉಪ್ಪು) ಆ ನೀರಿನಲ್ಲಿಯೇ ಇತ್ತು (ಆ ನೀರಿನಲ್ಲಿಯೇ ಇದ್ದರೂ) ನಿನಗೆ ಕಾಣಿಸಲಿಲ್ಲ ಅದು ನೀರಿನಲ್ಲಿಯೇ ಇತ್ತು

(ಉಪ್ಪಿನ ಗುಣವು ಕಂಡುಬಂದರೂ ಉಪ್ಪು ಕಾಣಿಸದೇ ಇರುವಂತೆ, ಪರಮಾತ್ಮನ ಸಾಮರ್ಥ್ಯ ಕಂಡುಬಂದರೂ ಅವನು ಕಾಣಿಸದೇ ಇರುವನು ಎಂದು ಅಭಿಪ್ರಾಯವು)

(ಹೀಗೆ ಕಾಣದೇ ಇದ್ದ ಪರಮಾತ್ಮನು ಅವಿದ್ಯೆಯಿಂದ ಆಚ್ಛಾದಿತರಾದ ಜೀವರಿಗೆ ಕಾಣುವ ಬಗೆ ಹೇಗೆ ಎಂಬುದನ್ನು ಮುಂದಿನ 'ಗಾಂಧಾರದೇಶದಿಂದ ಕಣ್ಣುಕಟ್ಟಿ ತಂದು ಅರಣ್ಯದಲ್ಲಿ ಬಿಟ್ಟ ಪುರುಷನ ದೃಷ್ಟಾಂತದಿಂದ ವಿವರಿಸುವರು')

ಗಾಂಧಾರದೇಶದಿಂದ ಕಣ್ಣುಕಟ್ಟಿ ತಂದು ಓರ್ವ ಪುರುಷನನ್ನು ನಿರ್ಜನವಾದ ಅರಣ್ಯದಲ್ಲಿ ಬಿಟ್ಟಂತೆ (ಅವನು ಆರ್ತನಾಗಿ ಕೂಗಿ ಮಹಾಜನರಿಂದ ಮಾರ್ಗದರ್ಶನ ಪಡೆದು ಗಾಂಧಾರದೇಶವನ್ನು ತಿರುಗಿ ಮುಟ್ಟಿದಂತೆ ಗುರೂಪದೇಶಾದಿಗಳಿಂದ ಪರಮಾತ್ಮನ ಮಾಹಾತ್ಮ್ಯವನ್ನು ತಿಳಿದು ಅವನ ಅನುಗ್ರಹದಿಂದ ಅವನನ್ನು ಪಡೆಯುವನು ಎಂದು ಅಭಿಪ್ರಾಯವು.) (ಈ ದೃಷ್ಟಾಂತದ ಪೂರ್ಣಪಾಠವನ್ನು ವಿವರಣೆಯಲ್ಲಿ ಕೊಡಲಾಗಿದೆ)

**ವಿವರಣೆ**—ಆರನೆಯ ದೃಷ್ಟಾಂತವಾದ 'ಉಪ್ಪನ್ನು ನೀರಿನಲ್ಲಿ ಹಾಕಿದಾಗ ಅದು ಕಾಣದಿದ್ದರೂ ಅದರ ಸಾಮರ್ಥ್ಯ ಕಾಣುತ್ತದೆ' ಎಂಬ ದೃಷ್ಟಾಂತದಿಂದ ಪರಮಾತ್ಮನ ಸಾಮರ್ಥ್ಯ ಕಂಡರೂ ಅವನು ಕಾಣುವದಿಲ್ಲ ಎಂದು ವಿವರಿಸಿದರು

ಹಾಗಾದರೆ ಅವನನ್ನು ಕಾಣುವ ಬಗೆ ಹೇಗೆ? ಎಂಬುದನ್ನು ಏಳನೆಯ ದೃಷ್ಟಾಂತ ದಿಂದ ವಿವರಿಸುವರು. ಅದರ ಪೂರ್ಣಪಾಠ ಹೀಗಿದೆ—'ಯಥಾ ಸೋಮ್ಯ ಪುರುಷಂ ಗಂಧಾರೇಭ್ಯಃ ಅಭಿನದ್ಧಾಕ್ಷಮಾನೀಯ ತಂ ತತೋ ಅತಿಜನೇ ವಿಸೃಜೇತ್, ಸ ಯಥಾ ತತ್ರ ಪ್ರಾಙ್ ವಾ ಉದಙ್ ವಾ ಅಧರಾಙ್ ವಾ ಪ್ರಾಧ್ಮಾಯೀತ ಅಭಿನದ್ಧಾಕ್ಷ ಆನೀತಃ ಅಭಿನದ್ಧಾಕ್ಷಃ ವಿಸೃಷ್ಟಃ, ತಸ್ಯ ಯಥಾ ಅಭಿನಹನಂ ಪ್ರಮುಚ್ಯ ಪ್ರಬ್ರೂಯಾತ್ ಏತಾಂ ದಿಶಂ ಗಂಧಾರಾಃ ಏತಾಂ ದಿಶಂ ವ್ರಜೇತಿ, ಸ ಗ್ರಾಮಾದ್ ಗ್ರಾಮಂ ಪೃಚ್ಛನ್ ಪಂಡಿತೋ ಮೇಧಾವೀ ಗಂಧಾರಾನೇವ ಉಪಸಂಪದ್ಯೇತ, ಏವಮೇವ ಇಹ ಆಚಾರ್ಯವಾನ್ ಪುರುಷೋ ವೇದ, ತಸ್ಯ ತಾವದೇವ ಚಿರಂ ಯಾವತ್ ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ ಇತಿ' ಗಾಂಧಾರದೇಶದಿಂದ ಕಣ್ಣುಕಟ್ಟಿತಂದು ನಿರ್ಜನವಾದ ಅರಣ್ಯಪ್ರದೇಶದಲ್ಲಿ ಬಿಡಲ್ಪಟ್ಟ ಓರ್ವ ಪುರುಷನು ಪೂರ್ವ, ಉತ್ತರ ಇತ್ಯಾದಿ ದಿಕ್ಕುಗಳ ಕಡೆಗೆ ಮುಖಮಾಡಿ 'ನನ್ನನ್ನು ಕಣ್ಣುಕಟ್ಟಿ ತಂದುಬಿಟ್ಟಿರುವರು' ಎಂದು ಗಟ್ಟಿಯಾಗಿ ಕೂಗಿಕೊಂಡಾಗ ಯಾರೋ ಒಬ್ಬರು ಬಂದು ಅವನ ಕಣ್ಣುಬಿಚ್ಚಿ ಈ ದಿಕ್ಕಿನಲ್ಲಿ ಗಾಂಧಾರ ದೇಶವಿರುವದು, ಈ ದಿಕ್ಕಿನಲ್ಲಿ ಹೋಗು ಎಂದು ಹೇಳಲು ಊರಿಂದ ಊರಿಗೆ ಕೇಳುತ್ತ ಹೋಗಿ ಬುದ್ಧಿವಂತನೂ ಸ್ಮರಣಶಕ್ತಿಯನ್ನು ಪಡೆದವನೂ ಆದ ಅವನು ಗಾಂಧಾರದೇಶವನ್ನೇ ಮುಟ್ಟುವಂತೆ, ಪರಮಾತ್ಮನನ್ನು

ತಿಳಿದುಕೊಳ್ಳಬೇಕೆಂಬ ಲವಲವಿಕೆಯುಳ್ಳವನು ಗುರೂಪದೇಶಾದಿಗಳಿಂದ ಅವನ ಮಾಹಾತ್ಮ್ಯವನ್ನು ತಿಳಿದುಕೊಂಡು ಅವನ ಅನುಗ್ರಹ ಪಡೆದು ಅವನ ದರ್ಶನವನ್ನು ಪಡೆಯುವನು ಪ್ರಾರಬ್ಧಕರ್ಮಗಳನ್ನು ಅನುಭವಿಸಿ ಮುಗಿಸುವವರೆಗೆ ಮಾತ್ರ ತಡವಾಗಿದ್ದು ನಂತರ ಪರಮಾತ್ಮನನ್ನು ಪಡೆಯುವನು ಈ ದೃಷ್ಟಾಂತದಿಂದ ಪರಮಾತ್ಮನು ಅದೃಶ್ಯ ನಾಗಿದ್ದರೂ ಗುರೂಪದೇಶ, ಸಾಧನಾನುಷ್ಠಾನ, ಜ್ಞಾನ, ಭಕ್ತಿ, ಭಗವತ್ಪ್ರಸಾದಗಳಿಂದ ಅವನ ದರ್ಶನ-ಪ್ರಾಪ್ತಿಗಳು ಯೋಗ್ಯರಿಗೆ ದೊರೆಯುವವು ಎಂಬುದನ್ನು ಸ್ಪಷ್ಟಪಡಿಸಿರುವರು.

**ಮರಣೋನ್ಮುಖನ ದೃಷ್ಟಾಂತ ಮತ್ತು ಕಾಯ್ದ ಕೊಡಲಿ ಹಿಡಿಯುವ ದೃಷ್ಟಾಂತಗಳು.**

**46. (ಅ) ಅಥ ಯದಾ ಅಸ್ಯ ವಾಙ್ ಮನಸಿ ಸಂಪದ್ಯತೇ, ಮನಃ ಪ್ರಾಣೇ, ಪ್ರಾಣಃ ತೇಜಸಿ, ತೇಜಃ ಪರಸ್ಯಾಂ ದೇವತಾಯಾಂ, ತಾವತ್ ನ ಜಾನಾತಿ ।**

**(ಆ) ಪುರುಷಂ ಸೋಮ್ಯ ಉತ ಹಸ್ತಗೃಹೀತಮಾನಯಂತಿ ಅಪಹಾರ್ಷೀತ್ ಸ್ತೇಯಮಕಾರ್ಷೀತ್ ಪರಶುಮಸ್ಮೈ ತಪತೇತಿ । ಸ ಯದಿ ತಸ್ಯ ಕರ್ತಾ ಭವತಿ ತತ ಏವ ಆತ್ಮಾನಂ ಅನೃತಂ ಕುರುತೇ ಸ ಅನೃತಾಭಿಸಂಧಃ ಅನೃತೇನ ಆತ್ಮಾನ-ಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಣ್ಹಾತಿ ಸ ದಹ್ಯತೇ ಅಥ ಹನ್ಯತೇ । ಅಥ ಯದಿ ಸ ತಸ್ಯ ಅಕರ್ತಾ ಭವತಿ ತತ ಏವ ಸತ್ಯಂ ಆತ್ಮಾನಂ ಕುರುತೇ ಸ ಸತ್ಯಾಭಿಸಂಧಃ ಸತ್ಯೇನ ಆತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇ ಅಥ ಮುಚ್ಯತೇ ।**

**ಏವಮೇವ ಖಲು ಆಚಾರ್ಯವಾನ್ ಪುರುಷೋ ವೇದ ಇತಿ ಸ್ಥಾನನವಕೇಽಪಿ ಭೇದ ಏವ ದೃಷ್ಟಾಂತಾಭಿಧಾನಾತ್ ॥**

**ಅನುವಾದ**—(ವೃಕ್ಷಚ್ಛೇದನ ದೃಷ್ಟಾಂತದಲ್ಲಿ ಜೀವನು ಪರಮಾತ್ಮನಿಗೆ ಅಧೀನ ವಾಗಿರುವದನ್ನು ಹೇಳಿದರು ವೃಕ್ಷಶರೀರದಲ್ಲಿ ಇದ್ದಂತೆ ಮನುಷ್ಯ ಶರೀರದಲ್ಲಿಯೂ ಜೀವನು ಪರಮಾತ್ಮನಿಗೆ ಅಧೀನನಾಗಿರುವನು ಎಂಬುದನ್ನು ಎಂಟನೆಯ ಈ ಮರಣೋನ್ಮುಖನ ದೃಷ್ಟಾಂತದಲ್ಲಿ ವಿವರಿಸುವರು )

(ರೋಗಗ್ರಸ್ತನಾದ (ಮರಣೋನ್ಮುಖನಾದ) ಪುರುಷನ ಸುತ್ತಲೂ ಬಂಧುಗಳೆಲ್ಲರೂ ಕುಳಿತುಕೊಳ್ಳುವರು ನನ್ನ ಗುರುತು ಸಿಗುವದೇ, ನನ್ನ ಗುರುತು ಸಿಗುವದೇ ಎಂದು ಎಲ್ಲರೂ ಕೇಳುವರು.) ಈ ರೋಗಗ್ರಸ್ತನ ಮಾತು ಮನಸ್ಸಿನಲ್ಲಿಯೂ, ಮನಸ್ಸು ಪ್ರಾಣ ದಲ್ಲಿಯೂ, ಪ್ರಾಣವು ತೇಜಸ್ಸಿನಲ್ಲಿಯೂ, ತೇಜಸ್ಸು ಪರದೇವತೆಯಲ್ಲಿಯೂ ಲೀನವಾಗುವ ವರೆಗೆ ಅವನು ಅವರನ್ನು (ಸುತ್ತಲೂ ಕುಳಿತ ಬಂಧುಗಳನ್ನು) ಗುರುತಿಸುವನು. ಆದರೆ ಅವನ ಮಾತು ಮನಸ್ಸಿನಲ್ಲಿಯೂ, ಮನಸ್ಸು ಪ್ರಾಣದಲ್ಲಿಯೂ, ಪ್ರಾಣವು ತೇಜಸ್ಸಿ ನಲ್ಲಿಯೂ, ತೇಜಸ್ಸು ಪರದೇವತೆಯಲ್ಲಿಯೂ ಲೀನವಾದ ಮೇಲೆ ಅವರನ್ನು ಗುರುತಿಸ ಲಾರನು).

(ಜೀವಪರಮಾತ್ಮರ ಭೇದವನ್ನೂ ಜೀವನು ಪರಮಾತ್ಮನಿಗೆ ಅಧೀನನೆಂಬುವದನ್ನೂ ಮೇಲಿನ ದೃಷ್ಟಾಂತಗಳಲ್ಲಿ ವಿವರಿಸಿದರು ರಾಜಧನವನ್ನು ಅಪಹರಿಸಿದವನ ಮುಂದಿನ ಒಂಬತ್ತನೆಯ ದೃಷ್ಟಾಂತದಲ್ಲಿ ಜೀವ-ಪರಮಾತ್ಮ ಭೇದಜ್ಞಾನವುಳ್ಳವನು ಮುಕ್ತನಾಗುವದನ್ನೂ ಅಭೇದಾಗ್ರಹವುಳ್ಳವನು ಕಷ್ಟಕ್ಕೀಡಾಗುವದನ್ನೂ ವಿವರಿಸುವರು )

(ರಾಜದ್ರವ್ಯವನ್ನು ಯಾರಾದರೂ ಅಪಹರಿಸಿದಾಗ ಶಂಕಾಸ್ಪದನಾದ) ಪುರುಷನನ್ನು (ರಾಜಭಟರು) ಇವನು ಅಪಹಾರಮಾಡಿದನು, ಕಳವು ಮಾಡಿದನು, ಎಂದು (ಕೂಗುತ್ತ) ಕೈಹಿಡಿದು ತರುವರು (ಅವನು ನಾನು ಕದ್ದಿಲ್ಲ ಎಂದು ಹೇಳಲು ಅದನ್ನು ಪರೀಕ್ಷಿಸಲು) ಇವನಿಗಾಗಿ ಕೊಡಲಿಯನ್ನು ಕಾಸಿರಿ ಎಂದು (ರಾಜನು) ಹೇಳುವನು ಅವನು (ಆ ಕಳ್ಳನು) ಆ ಕಳ್ಳತನವನ್ನು ಮಾಡಿದ್ದರೆ (ಇಲ್ಲವೆಂದು ಹೇಳಿದ್ದರಿಂದ) ಸುಳ್ಳನಾಗುವನು. ಹೀಗೆ ಸುಳ್ಳುಬುದ್ಧಿಯುವನಾದ್ದರಿಂದ ಸುಳ್ಳಿನಿಂದ ಸುತ್ತುವರೆಯಲ್ಪಟ್ಟವನಾಗಿ ಕಾಯ್ದ ಕೊಡಲಿಯನ್ನು ಮುಟ್ಟುವನು, ಅದರಿಂದ ಸುಡಲ್ಪಡುವನು ಮತ್ತು ಸಾಯುವನು ಆದರೆ ಅವನು ಆ ಕಳ್ಳತನವನ್ನು ಮಾಡಿರದಿದ್ದರೆ (ನಿಜವನ್ನು ಹೇಳಿದ್ದರಿಂದ) ಸತ್ಯವಂತನಾಗುವನು. ಹೀಗೆ ನಿಜಬುದ್ಧಿಯುವನಾದ್ದರಿಂದ ಸತ್ಯದಿಂದ ಸುತ್ತುವರೆಯಲ್ಪಟ್ಟವನಾಗಿ ಕಾಯ್ದ ಕೊಡಲಿಯನ್ನು ಹಿಡಿಯುವನು, ಅದರಿಂದ ಅವನು ಸುಡಲ್ಪಡುವದಿಲ್ಲ ಮತ್ತು ಬಿಡುಗಡೆಯನ್ನು ಪಡೆಯುವನು.

ಹೀಗೆ ಗುರೂಪದೇಶಾದಿಗಳನ್ನು ಪಡೆದವನು (ಜೀವ-ಪರಮಾತ್ಮರ ಭೇದವನ್ನೂ ಜೀವನು ಪರಮಾತ್ಮನಿಗೆ ಅಧೀನನಾಗಿರುವದನ್ನೂ ತಿಳಿದವನಾಗಿ) ಸರಿಯಾದ ಜ್ಞಾನವುಳ್ಳವನಾಗಿರುವನು

ಹೀಗೆ ಒಂಬತ್ತೂ ಸ್ಥಳಗಳಲ್ಲಿ ಭೇದಪ್ರತಿಪಾದಕವಾದ ದೃಷ್ಟಾಂತಗಳನ್ನೇ ಹೇಳಲಾಗಿದೆ

**ವಿವರಣೆ**—ಎಂಟನೆಯ ದೃಷ್ಟಾಂತವಾದ ಮರಣೋನ್ಮುಖನ ದೃಷ್ಟಾಂತದಲ್ಲಿ ಮನುಷ್ಯದೇಹದಲ್ಲಿಯೂ ಜೀವನು ಪರಮಾತ್ಮನಿಗೆ ಅಧೀನನಾಗಿರುವದನ್ನು ಅನ್ವಯ-ವ್ಯತಿರೇಕಗಳಿಂದ (ಅನ್ವಯದಿಂದ ಅಂದರೆ ಪರಮಾತ್ಮನು ಸನ್ನಿಹಿತನಾಗಿದ್ದಾಗ ಜೀವನ ಆಯಾ ಇಂದ್ರಿಯಗಳು ತಮ್ಮ ವ್ಯಾಪಾರಮಾಡುವವು, ವ್ಯತಿರೇಕದಿಂದ ಅಂದರೆ ಅವನು ಸನ್ನಿಹಿತನಾಗಿರದಾಗ ಇಂದ್ರಿಯಾದಿಗಳು ತಮ್ಮ ವ್ಯಾಪಾರಗಳನ್ನು ಮಾಡಲಾರವು ಎಂಬುದರಿಂದ) ತೋರಿಸಿದ್ದಾರೆ. ಇಲ್ಲಿ ವಾಕ್, ಮನಸ್, ಇತ್ಯಾದಿಗಳಿಂದ ಇವುಗಳ ಅಭಿಮಾನಿ ದೇವತೆಗಳನ್ನು ತೆಗೆದುಕೊಳ್ಳಬೇಕು. 'ವಾಕ್''ಗೆ ಉಮಾ, ಮನಸ್ಸಿಗೆ ರುದ್ರ, ಪ್ರಾಣಕ್ಕೆ ಮುಖ್ಯವಾಯು, ತೇಜಸ್ಸಿಗೆ ಶ್ರೀತತ್ತ್ವ, ಪರದೇವತೆ ಪರಮಾತ್ಮನು ವಾಕ್, ಮನಸ್ಸು ಇತ್ಯಾದಿಗಳನ್ನು ಹೇಳುತ್ತ ಕೊನೆಗೆ ' ಪರಸ್ಯಾಂ ದೇವತಾಯಾಮ್ ' ಎಂದು ಹೇಳಿದ್ದರಿಂದ ಮೊದಲಿನವೆಲ್ಲ ಅಭಿಮಾನಿದೇವತಾಪರವಾದವು ಎಂಬುದು ಸ್ಪಷ್ಟವಾಗುತ್ತದೆ.

ಒಂಬತ್ತನೆಯ ದೃಷ್ಟಾಂತವಾದ ಕಾಯ್ದ ಕೊಡಲಿಯನ್ನು ಹಿಡಿಯುವ ದೃಷ್ಟಾಂತವು ಉಪಸಂಹಾರರೂಪವಾಗಿದೆ. ಈ ಮೇಲಿನ ದೃಷ್ಟಾಂತಗಳಲ್ಲಿ ನಿರೂಪಿಸಿದ ಜೀವ-ಪರಮಾತ್ಮರ ಭೇದವನ್ನೂ ಜೀವನು ಪರಮಾತ್ಮನಿಗೆ ಸರ್ವಥಾ ಅಧೀನನೆಂಬುದನ್ನೂ ತಿಳಿದುಕೊಂಡವರಿಗೆ ಏನು ಫಲ ಮತ್ತು ಅದನ್ನು ತಿಳಿದುಕೊಳ್ಳದೆ ಅಭೇದದ ಅಗ್ರಹವುಳ್ಳವರಿಗೆ ಏನು ಫಲ ಎಂಬುದನ್ನು ಇಲ್ಲಿ ಮಾರ್ಮಿಕವಾಗಿ ವಿವರಿಸಲಾಗಿದೆ

'ಏವಮೇವ ಖಲು ಸೋಮ್ಯ ಆಚಾರ್ಯವಾನ್ ಪುರುಷೋ ವೇದ' ಎಂಬುದನ್ನು ಒಂಬತ್ತೂ ಸ್ಥಳಗಳಲ್ಲಿ ಅನ್ವಯಿಸಿಕೊಳ್ಳಬೇಕು ಎಂಬುದನ್ನು ಸೂಚಿಸಲು ಶ್ರೀಮದಾ-ಚಾರ್ಯರು ಅದನ್ನು ಕೊನೆಯಲ್ಲಿ ಮತ್ತೆ ಉಲ್ಲೇಖಿಸಿದ್ದಾರೆ ಒಂಬತ್ತೂ ದೃಷ್ಟಾಂತಗಳು ಭೇದಸಾಧಕವೆಂದು ಸಾರಿದ್ದಾರೆ ಹೀಗೆ ಶ್ವೇತಕೇತುವಿಗೆ ಬಂದ ಅವಿನಯವನ್ನು ಇಳಿಸುವ ಸಂದರ್ಭ, ಪ್ರಧಾನಜ್ಞಾನದಿಂದ ಅಪ್ರಧಾನಜ್ಞಾನವು ಗತಾರ್ಥ ಎಂಬ ಪ್ರತಿಜ್ಞೆ, ಪರಮಾತ್ಮ ನಿಂದಾದ ಸೃಷ್ಟಿಯನ್ನು ವಿವರಿಸಿ ಅವನ ಪ್ರಾಧಾನ್ಯವನ್ನು ತೋರಿಸಿದ್ದು, ಒಂಬತ್ತು ದೃಷ್ಟಾಂತಗಳಿಂದ ಭೇದವನ್ನು ಪ್ರತಿಪಾದಿಸಿದ್ದು ಇವುಗಳನ್ನು ಗಮನಿಸಿದರೆ 'ಸ ಆತ್ಮಾ ಅತತ್ ತ್ವಮಸಿ' ಎಂಬುದೇ ಯುಕ್ತವಾಗಿದ್ದು ಜೀವ-ಪರಮಾತ್ಮರ ಭೇದವನ್ನೇ ಈ ಶ್ರುತಿ ಯಲ್ಲಿ ಪ್ರತಿಪಾದಿಸಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ 'ತತ್ ತ್ವಮಸಿ' ಎಂದಿಟ್ಟು ಕೊಂಡರೂ ಭೇದಪರವಾದ ಅರ್ಥವೇ ಇದೆ ಎಂಬುದನ್ನು ಬೇರೆ ಕಡೆಗೆ ವಿವರಿಸಿದ್ದಾರೆ.

**ಶಕುನಿ-ಸೂತ್ರ ಮತ್ತು ನದೀ-ಸಮುದ್ರ ಇತ್ಯಾದಿ ದೃಷ್ಟಾಂತಗಳು ಭೇದವನ್ನೇ ಪ್ರತಿಪಾದಿಸುವವು.**

**47. ನ ಹಿ ಶಕುನಿಸೂತ್ರಯೋಃ, ನಾನಾವೃಕ್ಷರಸಾನಾಮ್, ನದೀ ಸಮುದ್ರಯೋಃ, ಜೀವವೃಕ್ಷಯೋಃ, ಅಣಿಮಧಾನಯೋಃ, ಲವಣೋದಕಯೋಃ, ಗಂಧಾರಪುರುಷಯೋಃ, ಅಜ್ಞಪ್ರಾಣಾದಿನಿಯಾಮಕಯೋಃ, ಸ್ತೇನಾಪಹಾರ್ಯ-ಯೋಶ್ಚ ಐಕ್ಯಮ್ ।**

**'ಸತಿ ಸಂಪದ್ಯ ನ ವಿದುಃ ಸತಿ ಸಂಪತ್ಸ್ಯಾಮಹೇ ಇತಿ ತೇ ಇಹ ವ್ಯಾಘ್ರೋ ವಾ ಸಿಂಹೋ ವಾ' ಇತಿ 'ಸತ ಆಗಮ್ಯ ನ ವಿದುಃ ಸತಃ ಆಗಚ್ಛಾಮಹೇ ಇತಿ ತೇ ಇಹ ವ್ಯಾಘ್ರೋ ವಾ ಸಿಂಹೋ ವಾ' ಇತಿ ಭೇದಾಪರಿಜ್ಞಾನೇನ ಅನರ್ಥವಚನಾಚ್ಚ। ನ ಹಿ ಗೃಹಾದಾಗತಸ್ಯ ಗೃಹೇ ಪ್ರವಿಷ್ಟಸ್ಯ ತದೈಕ್ಯಮ್ ।**

**'ತಾಃ ಸಮುದ್ರಾತ್ ಸಮುದ್ರಮೇವ ಅಪಿಯಂತಿ ಸ ಸಮುದ್ರ ಏವ ಭವತಿ' ಇತ್ಯತ್ರಾಪಿ ಭೇದ ಏವ ಉಚ್ಯತೇ। ಅನ್ಯಥಾ ತಾಃ ಸಮುದ್ರ ಏವ ಭವಂತೀತಿ ವ್ಯಪದೇಶಃ ಸ್ಯಾತ್ । ಅತಃ ನದ್ಯಃ ಸಮುದ್ರಾದಾಗಚ್ಛಂತಿ ತಂ ಪ್ರವಿಶಂತಿ ಚ। ಸಮುದ್ರಸ್ತು ಸ ಏವ ನ ಏತಾಸಾಂ ಸಮುದ್ರತ್ವಂ ಭವತಿ ಇತ್ಯರ್ಥಃ । ನ ಹಿ ಭಿನ್ನಾನಾಂ ನದೀಜಲಪರಮಾಣೂನಾಂ ಸಮುದ್ರಾಣುಭಿಃ ಐಕ್ಯಂ ಯುಜ್ಯತೇ ।**

**ತಥಾ ಸತಿ ಮಹಾಜನಸಮಿತೌ ಪ್ರವಿಷ್ಟಾನಾಂ ದ್ವಿತ್ರಾಣಾಂ ತದೈಕ್ಯಂ ಸ್ಯಾತ್ । ನ ಚ ತದ್ಯುಜ್ಯತೇ ಭೇದೇನ ಅನುಭವಾತ್ ।**

**ಅನುವಾದ**—(ಶಕುನಿ-ಸೂತ್ರ ಇತ್ಯಾದಿಯಾದ ಒಂಬತ್ತೂ ದೃಷ್ಟಾಂತಗಳಲ್ಲಿ ಭೇದವನ್ನೇ ಹೇಳಿದೆ ಎಂದು ಮೇಲೆ ಹೇಳಿದ್ದನ್ನು ಇನ್ನಷ್ಟು ವಿವರಿಸುವರು) ಶಕುನಿ ಮತ್ತು ಸೂತ್ರ, ನಾನಾವೃಕ್ಷಗಳ ರಸಗಳು, ನದಿಗಳು ಮತ್ತು ಸಮುದ್ರ, ಜೀವ ಮತ್ತು ವೃಕ್ಷ, ನ್ಯಗ್ರೋಧಫಲದಲ್ಲಿಯ ಬೀಜ ಮತ್ತು ಅದರಲ್ಲಿಯ ಸೂಕ್ಷ್ಮಸತ್ವ, ಉಪ್ಪು ಮತ್ತು ನೀರು, ಗಂಧಾರದೇಶ ಮತ್ತು ಅಲ್ಲಿಂದ ಕಣ್ಣುಕಟ್ಟಿತಂದ ಪುರುಷ, ಪ್ರಾಣಾದಿಗಳ ನಿಯಾಮಕ ಮತ್ತು ಅವನಿಲ್ಲದೆ ತಿಳಿದುಕೊಳ್ಳಲು ಯೋಗ್ಯತೆಯಿಲ್ಲದ ವ್ಯಕ್ತಿ, ಕಳ್ಳತನ ಮಾಡಿದವ ಮತ್ತು ಅವನು ಕದ್ದ ವಸ್ತು ಇವುಗಳಲ್ಲಿ ಐಕ್ಯವಿದೆಯೆಂದು ಹೇಳುವದು ಸಾಧ್ಯವಿಲ್ಲ.

'ಸತಿ ಸಂಪದ್ಯ' ಇತ್ಯಾದಿಯಾದ ವಾಕ್ಯದಲ್ಲಿ ಪರಮಾತ್ಮನನ್ನು ಆಶ್ರಯಿಸಿಕೊಂಡೇ ಇದ್ದು ಅದನ್ನು ತಿಳಿದುಕೊಳ್ಳದೇ ಇದ್ದು ವ್ಯಾಘ್ರವೋ, ಸಿಂಹವೋ, ಕೀಟವೋ ಇತ್ಯಾದಿಯಾಗಿ ಜನಿಸುವರು, 'ಸತಃ ಆಗಮ್ಯ ನ ವಿದುಃ' ಇತ್ಯಾದಿಯಾದ ವಾಕ್ಯದಲ್ಲಿ 'ಪರಮಾತ್ಮನಿಂದ ಜನ್ಮಾದಿಗಳನ್ನು ಪಡೆದು ಅದನ್ನು ತಿಳಿದುಕೊಳ್ಳದೇ ವ್ಯಾಘ್ರವೋ, ಸಿಂಹವೋ, ಕೀಟವೋ ಇತ್ಯಾದಿಯಾಗಿ ಜನಿಸುವರು ಎಂದು ಭೇದವನ್ನು ತಿಳಿದುಕೊಳ್ಳದಿದ್ದರೆ ಅನರ್ಥವನ್ನು ಹೇಳಿದ್ದಾರೆ ಒಂದು ಮನೆಯಿಂದ ಹೊರಗೆ ಬಂದು ಆ ಮನೆಯನ್ನು ಮತ್ತೆ ಪ್ರವೇಶಿಸಿದವನು ಆ ಮನೆಯಿಂದ ಐಕ್ಯವನ್ನು ಪಡೆದನು ಎಂದು ಹೇಳಲು ಬರುವದಿಲ್ಲ.

'ಆ ನದಿಗಳು ಸಮುದ್ರದಿಂದ ಬಂದು ಸಮುದ್ರವನ್ನೇ ಪ್ರವೇಶಿಸುವವು. ಅದು ಸಮುದ್ರವೇ ಆಗಿರುವದು' ಎಂಬಲ್ಲಿಯೂ ಭೇದವನ್ನೇ ಹೇಳಿರುವರು ಈ ಅಭಿಪ್ರಾಯ ವಿಲ್ಲದಿದ್ದರೆ 'ಆ ನದಿಗಳು ಸಮುದ್ರವೇ ಆಗುವವು' ಎಂದು ಹೇಳುತ್ತಿದ್ದರು. ಆದ್ದರಿಂದ 'ನದಿಗಳು ಸಮುದ್ರದಿಂದ ಬರುವವು, ಸಮುದ್ರವನ್ನು ಪ್ರವೇಶಿಸುವವು, ಸಮುದ್ರವು ಸಮುದ್ರವೇ ಆಗಿರುವದು, ಈ ನದಿಗಳು ಸಮುದ್ರವಾಗುವದಿಲ್ಲ' ಎಂದೇ ಅರ್ಥವಾಗುವದು. ಭಿನ್ನವಾದ ನದಿಯ ನೀರಿನ ಪರಮಾಣುಗಳು ಸಮುದ್ರದ ನೀರಿನ ಪರಮಾಣುಗಳೊಡನೆ ಐಕ್ಯವನ್ನು ಪಡೆಯಲಾರವು ಹಾಗೆ ಆಗುವದಾದರೆ ಮಹಾಜನರ ಸಭೆಯಲ್ಲಿ ಪ್ರವೇಶಿಸಿದ ಇಬ್ಬರು-ಮೂವರು ಅವರೊಡನೆ ಐಕ್ಯವಾಗುವ ಪ್ರಸಂಗ ಬರುವದು. ಇದು ಯುಕ್ತವಲ್ಲ. ಅವರು ಭಿನ್ನರು ಎಂಬುದು ಅನುಭವಸಿದ್ಧವಾದುದು

**ವಿವರಣೆ**—ಶಕುನಿ-ಸೂತ್ರ ಇತ್ಯಾದಿ ಒಂಬತ್ತು ದೃಷ್ಟಾಂತಗಳೂ ಭೇದವನ್ನೇ ತಿಳಿಸುವವು. ಈ ದೃಷ್ಟಾಂತಗಳಲ್ಲಿ ಬಂದಿರುವ ಶಕುನಿ-ಸೂತ್ರ, ನಾನಾವೃಕ್ಷರಸಗಳು, ನದಿಗಳು-ಸಮುದ್ರ ಈ ಯಾವ ಜೋಡಿಗಳಿಗೂ ಐಕ್ಯವನ್ನು ಹೇಳಲು ಬರುವದಿಲ್ಲ.

ನಾನಾವೃಕ್ಷರಸಗಳು ಮತ್ತು ನದೀ-ಸಮುದ್ರ ದೃಷ್ಟಾಂತಗಳಿಗೆ ಅದ್ವೈತಿಗಳು ಅಭೇದಪರವಾದ ಅರ್ಥವನ್ನು ಮಾಡುವರು ಆದರೆ ಈ ದೃಷ್ಟಾಂತಗಳನ್ನು ಕೊಟ್ಟು ಶ್ರುತಿಯು ಇವುಗಳಿಂದ ನಿಷ್ಪನ್ನವಾಗುವ ಜೀವ-ಪರಮಾತ್ಮರ ಭೇದವನ್ನು ತಿಳಿದುಕೊಳ್ಳದೇ ಇರುವವರಿಗೆ ಅನರ್ಥವನ್ನು ಹೇಳುತ್ತದೆ ಆದ್ದರಿಂದ ಈ ದೃಷ್ಟಾಂತಗಳಲ್ಲಿಯೂ ಶ್ರುತಿಗೆ ಭೇದವೇ ಪ್ರತಿಪಾದ್ಯವಾಗಿದೆ ಎಂಬುದು ಸ್ಪಷ್ಟವಾಗುತ್ತದೆ ನಾನಾವೃಕ್ಷರಸಗಳು ಮೊದಲೇ ಇದ್ದ ಮಧುರಸದೊಡನೆ ಐಕ್ಯವನ್ನು ಹೊಂದುವದಿಲ್ಲ ಪರಸ್ಪರ ಭಿನ್ನವೇ ಆದ ಅವು ಹೊಸದಾಗಿ ಮಧುರಸವನ್ನುಂಟುಮಾಡುತ್ತವೆ ಅದ್ವೈತಿಗಳು ಹೇಳುವ ಜೀವ-ಬ್ರಹ್ಮರ ಐಕ್ಯ ಇಂಥ ಐಕ್ಯವಲ್ಲ ಆದ್ದರಿಂದ ಅವರಿಗೆ ಅಭಿಮತವಾದ ಐಕ್ಯವನ್ನು ಹೇಳಲು ಈ ದೃಷ್ಟಾಂತವನ್ನು ಕೊಟ್ಟಿಲ್ಲ ಆದರೆ ನಾನಾಪುಷ್ಪರಸಗಳು ಜೊತೆಗಿದ್ದರೂ ಪರಸ್ಪರ ಭೇದವನ್ನು ತಿಳಿದುಕೊಳ್ಳದೇ ಇರುವಂತೆ ಜೀವನು ಪರಮಾತ್ಮನ ಜೊತೆಗೇ ಇದ್ದರೂ ಭೇದ ವನ್ನು ತಿಳಿದುಕೊಳ್ಳದೇ ಸಿಂಹವೋ, ವ್ಯಾಘ್ರವೋ, ಕೀಟವೋ ಆಗಿ ಹುಟ್ಟುವನು ಎಂದು ಭೇದವಿದ್ದರೂ ಅದರ ಜ್ಞಾನವು ಆಗದೇ ಇರುವದನ್ನೂ ಅದರಿಂದ ಅನರ್ಥವುಂಟಾಗುವದನ್ನೂ ತಿಳಿಸಲು ಈ ದೃಷ್ಟಾಂತವನ್ನು ಕೊಟ್ಟಿದ್ದಾರೆ

ಇದರಂತೆಯೇ ನದೀ-ಸಮುದ್ರ ದೃಷ್ಟಾಂತದಲ್ಲಿಯೂ ಭೇದವನ್ನೇ ಹೇಳಿದೆ. ಇಲ್ಲಿ ನದಿಗಳು ಸಮುದ್ರವನ್ನು ಸೇರಿ ಸಮುದ್ರವಾಗುವವು ಎಂದು ಹೇಳಿಲ್ಲ ಆದರೆ ನದಿಗಳು ಸಮುದ್ರವನ್ನು ಸೇರಿದರೂ ಸಮುದ್ರವು ಸಮುದ್ರವಾಗಿಯೇ ಉಳಿಯುವದು ಎಂದು ಹೇಳಿರುವರು ಇಲ್ಲಿಯೂ ಬೇರೆ ಬೇರೆ ನದಿಗಳು ಸಮುದ್ರದಲ್ಲಿ ಜೊತೆಜೊತೆಯಾಗಿದ್ದರೂ ಪರಸ್ಪರ ಭೇದವನ್ನು ತಿಳಿಯದೇ ಇರುವಂತೆ ಜೀವನು ಪರಮಾತ್ಮನ ಜೊತೆಗಿದ್ದರೂ ಅವನೊಡನಿರುವ ಭೇದವನ್ನು ತಿಳಿಯದೇ ಸಿಂಹ, ವ್ಯಾಘ್ರ, ಕೀಟಾದಿ ಜನ್ಮಗಳನ್ನು ಪಡೆಯುವ ಅನರ್ಥಕ್ಕೀಡಾಗುವನು ಎಂಬುದನ್ನು ತಿಳಿಸುವದೇ ಶ್ರುತಿಯ ಉದ್ದೇಶವಾಗಿದೆ. ನದೀ-ಸಮುದ್ರಗಳ ಐಕ್ಯವನ್ನು ಹೇಳುವದಲ್ಲ. ನದಿಗಳ ಜಲ-ಪರಮಾಣುಗಳೂ ಸಮುದ್ರದ ಜಲಪರಮಾಣುಗಳೂ ಪರಸ್ಪರ ಐಕ್ಯವನ್ನು ಹೊಂದಲಾರವು. ಅಂದಮೇಲೆ ಈ ದೃಷ್ಟಾಂತ ದಿಂದ ಜೀವಪರಮಾತ್ಮರ ಐಕ್ಯವನ್ನು ಹೇಳುವದು ಪ್ರಸಕ್ತವಾಗುವದಿಲ್ಲ

**'ಸ್ವ' ಶಬ್ದ, 'ಮನಃ' ಶಬ್ದ ಮತ್ತು 'ಪ್ರಾಣ' ಶಬ್ದಗಳು ಪರಮಾತ್ಮವಾಚಕವೇ ಆಗಿವೆ.**

**48.** **'ಸ್ವಂಹಿ ಅಪೀತೋ ಭವತಿ' ಇತ್ಯತ್ರಾಪಿ ಸ್ವ ಇತಿ ಪರಮಾತ್ಮನಃ ಅಭಿಧಾನಮ್ । 'ಸ್ವಾತ್ಮನಾ ಚ ಉತ್ತರಯೋಃ' ಇತಿ ಸೂತ್ರಾತ್ ।**

**ಸ್ವಾತಂತ್ರ್ಯಾತ್ ಸ್ವ ಇತಿ ಪ್ರೋಕ್ತಃ ಆತ್ಮಾಯಂ ಚಾತತತ್ವತಃ ।**
**ಬ್ರಹ್ಮಾಯಂ ಗುಣಪೂರ್ಣತ್ವಾತ್ ಭಗವಾನ್ ವಿಷ್ಣುರವ್ಯಯಃ ॥**

**ಇತಿ ಪರಮೋಪನಿಷದಿ.**

ಅಪೀತ ಇತ್ಯಪಿ ಪ್ರವೇಶಮಾತ್ರಂ ಸ್ವಮಿತಿ ದ್ವಿತೀಯಾನಿರ್ದೇಶಾತ್ । ಏಕೀ-ಭಾವವಿವಕ್ಷಾಯಾಂ 'ಸ್ವೇನ' ಇತಿ ನಿರ್ದೇಶಃ ಸ್ಯಾತ್ ।

ಸ್ವಂ ಕುಲಾಯಂ ಯಥಾಪೀತಃ ಪಕ್ಷೀ ಸ್ಯಾದೇವಮೀಶ್ವರಮ್ ।
ಅಪ್ಯೇತಿ ಜೀವಃ ಪ್ರಸ್ವಾಪೇ ಮುಕ್ತೌ ಚಾನ್ಯೋಽಪಿ ಸನ್ ಸದಾ ॥ ಇತಿ ಚ

'ಏವಮೇವ ಖಲು ಸೋಮ್ಯ ಏತನ್ಮನಃ ದಿಶಂ ದಿಶಂ ಪತಿತ್ವಾ ಅನ್ಯತ್ರಾ-ಯತನಮಲಬ್ಧ್ವಾ ಪ್ರಾಣಮೇವೋಪಾಶ್ರಯತೇ' ಇತ್ಯತ್ರಾಪಿ ಮನಃ ಇತಿ ಜೀವಃ, ಪ್ರಾಣಃ ಇತಿ ಪರಮಾತ್ಮಾ । 'ಯತ್ರಾಯಂ ಪುರುಷಃ ಸ್ವಪಿತಿ ನಾಮ' ಇತಿ ತಯೋರೇವ ಪ್ರಸ್ತುತತ್ವಾತ್ ।

ಮನನಾನ್ಮನ ಉದ್ದಿಷ್ಟಃ ಪುದ್ಗಲೋ ನಿರಯಂ ಗಿರನ್ ।
ಕರ್ಮಾನುಶಯನಾಚ್ಚೈವ ಸಂಸಾರ್ಯನುಶಯೀ ಸ್ಮೃತಃ ॥ ಇತಿ ಚ

ಪ್ರಾಣಃ ಪ್ರಣಯನಾದೇಷಃ ಸಾಧುತ್ವಾತ್ ಸನ್ ಹರಿಃ ಸ್ಮೃತಃ । ಇತಿ ಚ

'ಸನ್ಮೂಲಾಃ ಸೋಮ್ಯ ಇಮಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ' ಇತ್ಯತ್ರಾಪಿ ಭೇದ ಏವ ಪ್ರತೀಯತೇ ।

ಸ್ರಷ್ಟೃತ್ವಾದಾಶ್ರಯತ್ವಾಚ್ಚ ಮುಕ್ತಾನಾಂ ಚ ಪ್ರತಿಪ್ರತಿ ।
ಸ್ಥಾಪನಾಚ್ಚ ವಿಭುರ್ವಿಷ್ಣುಃ ಅನ್ಯಃ ಸಂಸಾರಿಣೋ ಮತಃ ॥ ಇತಿ ಚ.

ಅನುವಾದ — ('ಸ್ವಂ ಹಿ ಅಪೀತೋಭವತಿ' ಎಂಬ ಶ್ರುತಿವಾಕ್ಯವು ಅದ್ವೈತಪರವಾಗಿರುವದರಿಂದ ಶಕುನಿ-ಸೂತ್ರದೃಷ್ಟಾಂತವನ್ನು ಯಥಾಕಥಂಚಿತ್ ಅದ್ವೈತಪರವಾಗಿಯೇ ವ್ಯಾಖ್ಯಾನ ಮಾಡಬೇಕು ಭೇದಪರವಾಗಿ ವ್ಯಾಖ್ಯಾನ ಮಾಡಬಾರದು ಎಂಬ ಆಕ್ಷೇಪವನ್ನು ಈಗ ಪರಿಹರಿಸುವರು) 'ಸ್ವಂ ಹಿ ಅಪೀತೋ ಭವತಿ' ಎಂಬ ಶ್ರುತಿವಾಕ್ಯದಲ್ಲಿ 'ಸ್ವಃ' ಎಂಬುದು ಪರಮಾತ್ಮನ ಹೆಸರು. 'ಸ್ವಾತ್ಮನಾ ಚ ಉತ್ತರಯೋಃ' ಎಂದು ಸೂತ್ರವಿರುವದು (ಈ ಸೂತ್ರದಲ್ಲಿ 'ಸ್ವ' ಶಬ್ದವು ಪರಮಾತ್ಮ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವದು) "ಸ್ವತಂತ್ರನಾದ್ದರಿಂದ ವಿಷ್ಣುವು 'ಸ್ವ' ಎಂದು ಕರೆಯಲ್ಪಡುವನು, ಆತತ ಎಂದರೆ ಸರ್ವತ್ರವ್ಯಾಪ್ತನಾದ್ದರಿಂದ 'ಆತ್ಮಾ' ಎಂದು ಕರೆಯಲ್ಪಡುವನು, ಗುಣಪೂರ್ಣನಾದ್ದರಿಂದ 'ಬ್ರಹ್ಮ'ನೆಂದು ಕರೆಯಲ್ಪಡುವನು (ಈ ನಾಮಗಳಿಂದ ಕರೆಯಲ್ಪಡುವ) ವಿಷ್ಣುವು ಭಗವಂತ ಅಂದರೆ ಪರಮೈಶ್ವರ್ಯಶಾಲಿಯೂ ಅವ್ಯಯ ಅಂದರೆ ಚತುರ್ವಿಧನಾಶರಹಿತನೂ ಆಗಿರುವನು" ಎಂದು ಪರಮೋಪನಿಷತ್ತಿನಲ್ಲಿ ಹೇಳಿದೆ 'ಸ್ವಮ್' ಎಂದು ದ್ವಿತೀಯಾವಿಭಕ್ತಿಯಲ್ಲಿ ನಿರ್ದೇಶಮಾಡಿದ್ದರಿಂದ 'ಅಪೀತ' ಶಬ್ದಕ್ಕೆ ಪ್ರವೇಶವನ್ನು ಮಾಡುವನು ಎಂದು ಅರ್ಥ (ಐಕ್ಯವನ್ನು ಪಡೆದನು ಎಂಬ ಅರ್ಥವಲ್ಲ) ಏಕೀಭಾವವು ಅಭಿಪ್ರೇತವಾಗಿದ್ದರೆ 'ಸ್ವೇನ' ಎಂದು (ತೃತೀಯಾವಿಭಕ್ತಿಯಲ್ಲಿ) ನಿರ್ದೇಶವಿರುತ್ತಿತ್ತು. 'ಪಕ್ಷಿಯು ತನ್ನ ಗೂಡನ್ನು ಸೇರುವಂತೆ ಪರಮಾತ್ಮನಿಂದ ಸದಾಕಾಲದಲ್ಲಿಯೂ ಭಿನ್ನನಾದ

ಜೀವನು ಸುಷುಪ್ತಿದಶೆಯಲ್ಲಿಯೂ (ಅಂದರೆ ಗಾಢನಿದ್ರಾದಶೆಯಲ್ಲಿಯೂ) ಮುಕ್ತಿದಶೆಯಲ್ಲಿಯೂ ಪರಮಾತ್ಮನನ್ನು ಸೇರುವನು (ಆದರೆ ಐಕ್ಯವನ್ನು ಹೊಂದುವದಿಲ್ಲ)' ಎಂದು ಹೇಳಿದೆ 'ಇದರಂತೆಯೇ ಈ ಮನಸ್ಸು ಆಯಾ ದಿಕ್ಕುಗಳಲ್ಲಿ ಅಲೆದಾಡಿ ಬೇರೆ ಕಡೆಗೆ ಆಶ್ರಯವನ್ನು ಪಡೆಯದೆ ಪ್ರಾಣವನ್ನೇ ಆಶ್ರಯಿಸುವದು' ಎಂಬಲ್ಲಿ 'ಮನಃ' ಅಂದರೆ ಜೀವನು, ಪ್ರಾಣ ಅಂದರೆ ಪರಮಾತ್ಮನು 'ಎಲ್ಲಿ ಈ ಜೀವನು ಗಾಢನಿದ್ರೆಯನ್ನು ಪಡೆಯುವನು' ಎಂದು ಜೀವ-ಪರಮಾತ್ಮರೇ ಅಲ್ಲಿ ಪ್ರಸಕ್ತರಾಗಿದ್ದಾರೆ "ಜೀವನು ಜ್ಞಾನವುಳ್ಳವನಾದ್ದರಿಂದ 'ಮನಃ' ಎನಿಸಿಕೊಳ್ಳುವನು (ಜಡಕ್ಕೆ ಜ್ಞಾನವಿಲ್ಲ), ನಿರಯ ಅಂದರೆ ನರಕವನ್ನು ಅನುಭವಿಸುವದರಿಂದ ಪುದ್ಗಲ ಎನಿಸಿಕೊಳ್ಳುವನು (ಪುತ್ ಅಂದರೆ ನರಕ, ಅದನ್ನು ಅನುಭವಿಸುವವನು ಪುದ್ಗಲ ಎಂದರ್ಥ), ತನ್ನ ಕರ್ಮಗಳಿಗನುಸಾರವಾಗಿ ಸಂಸಾರದಲ್ಲಿ ತೊಡಕಿಕೊಳ್ಳುವದರಿಂದ (ಅನುಶಯ ಅಂದರೆ ತೊಡಕಿಕೊಳ್ಳುವುದು) ಸಂಸಾರಿಯೂ ಅನುಶಯಿಯೂ ಎನಿಸಿಕೊಳ್ಳುವನು" ಎಂದು ಹೇಳಿದೆ "ಈ ಎಲ್ಲ ಜೀವರೂ 'ಸತ್' ಅಂದರೆ ಪರಮಾತ್ಮನೇ ಮೂಲವಾಗಿ ಉಳ್ಳವರಾಗಿರುವರು, ಅವನೇ ಆಶ್ರಯವಾಗಿ ಉಳ್ಳವರಾಗಿರುವರು ಮತ್ತು ಅವನಲ್ಲಿಯೇ ಪ್ರತಿಷ್ಠಿತರಾಗಿರುವರು (ಅಂದರೆ ಅವನಿಂದಲೇ ಮುಕ್ತಿಯನ್ನು ಪಡೆಯುವರು)" ಎಂಬಲ್ಲಿಯೂ ಭೇದವೇ ಕಂಡುಬರುತ್ತದೆ. "ಸೃಷ್ಟಿಕರ್ತನಾದ್ದರಿಂದಲೂ ಆಶ್ರಯನಾದ್ದರಿಂದಲೂ ಮುಕ್ತರಿಗೆ ಪ್ರತಿಷ್ಠಾಪಕನಾದ್ದರಿಂದಲೂ ವಿಷ್ಣುವು ಜೀವರಿಗಿಂತ ಭಿನ್ನನಾಗಿದ್ದಾನೆ" ಎಂದೂ ಹೇಳಿದೆ

**ವಿವರಣೆ**—'ಸ್ವ' ಶಬ್ದವು 'ತಾನು' ಎಂಬ ಅರ್ಥವುಳ್ಳದ್ದಾದರೂ 'ಸ್ವಂ ಹಿ ಅಪೀತೋ ಭವತಿ' ಎಂಬಲ್ಲಿ ಈ ಅರ್ಥವುಳ್ಳದ್ದಾಗಿಲ್ಲ ಆದರೆ 'ಪರಮಾತ್ಮಾ' ಎಂಬ ಅರ್ಥವುಳ್ಳದ್ದಾಗಿದೆ ಆದ್ದರಿಂದ ಇಲ್ಲಿ ಜೀವನು ತನ್ನನ್ನು ತಾನು ಸೇರಿದನು (ಅಂದರೆ ತನ್ನ ಸ್ವರೂಪವಾದ ಬ್ರಹ್ಮನನ್ನು ಸೇರಿದನು) ಎಂದು ಅರ್ಥವಾಗುವದಿಲ್ಲ ಜೀವನು ಪರಮಾತ್ಮನನ್ನು ಸೇರಿದನು ಎಂದೇ ಅರ್ಥವಾಗುವದು. ಸ್ವಶಬ್ದದ ನಪುಂಸಕರೂಪವು ಮಾತ್ರ 'ತಾನು' ಎಂಬರ್ಥವುಳ್ಳದ್ದಾಗಿದೆ ('ಸ್ವಃ ಜ್ಞಾತೌ ಆತ್ಮನಿ ಸ್ವಮ್' ಎಂಬ ಅಮರಕೋಶವನ್ನು ಗಮನಿಸಬಹುದು) ಪುಲ್ಲಿಂಗವಾದ ಸ್ವಶಬ್ದವು ಪರಮಾತ್ಮವಾಚಕ ಎಂಬುದಕ್ಕೆ ಪರಮೋಪನಿಷತ್ತು ಮತ್ತು ಸೂತ್ರದ ಪ್ರಮಾಣವಿದೆ ಅಲ್ಲದೆ ಇಲ್ಲಿ 'ಸ್ವೇನ' ಎಂದು ಪ್ರಯೋಗಮಾಡದೆ 'ಸ್ವಮ್' ಎಂದು ಪ್ರಯೋಗಮಾಡಿದ್ದರಿಂದ ಐಕ್ಯವು ಅಭಿಪ್ರೇತವಲ್ಲವೆಂದು ಸ್ಪಷ್ಟವಾಗುತ್ತದೆ 'ಮನಃ' ಮತ್ತು 'ಪ್ರಾಣ' ಶಬ್ದಗಳು ಜೀವ ಮತ್ತು ಪರಮಾತ್ಮವಾಚಕಗಳಾಗಿವೆ ಸುಷುಪ್ತಿ ಮತ್ತು ಮುಕ್ತಿದಶೆಗಳಲ್ಲಿ ಜೀವನು ಬ್ರಹ್ಮನೊಡನೆ ಐಕ್ಯವನ್ನು ಪಡೆಯುವದಿಲ್ಲ 'ಸನ್ಮೂಲಾಃ ಸೋಮ್ಯ ಇಮಾಃ ಪ್ರಜಾಃ' ಇತ್ಯಾದಿಯಾದ ಶ್ರುತಿಯಲ್ಲಿ ಬಂದ ಮೂಲ, ಆಯತನ, ಪ್ರತಿಷ್ಠಾ ಶಬ್ದಗಳು ಉಪಾದಾನಕಾರಣವಾಚಕಗಳಲ್ಲ 'ಕಾರಣ' ಎಂದಿಷ್ಟು ಮಾತ್ರ ಹೇಳುವವು ತಂದೆಯು ಮಗನಿಗೆ ಮೂಲನು, ಆಯತನನು, ಪ್ರತಿಷ್ಠಾಪಕನು ಎಂಬ ಪ್ರಯೋಗಗಳಿವೆ. ಇಲ್ಲಿ ಅವನು ಕರ್ತನು ಎಂದಿಷ್ಟು ಮಾತ್ರ ಅರ್ಥ. ಉಪಾದಾನಕಾರಣನೆಂದಲ್ಲ ಆದ್ದರಿಂದ ಶಕುನಿಸೂತ್ರದೃಷ್ಟಾಂತವು

ಐಕ್ಯಪ್ರತಿಪಾದಕವಲ್ಲ ಈ ಸಂದರ್ಭದಲ್ಲಿಯು ಯಾವ ವಾಕ್ಯವೂ ಐಕ್ಯಕ್ಕೆ ಸಹಾಯಕ ವಾಗುವದಿಲ್ಲ ಇಲ್ಲಿ ಭೇದವೇ ಪ್ರತಿಪಾದಿತವಾಗಿದೆ.

**'ಜೀವ' ಶಬ್ದವು ಪರಮಾತ್ಮ ವಾಚಕವಾಗಿದೆ.**

**49.** 'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರ-ವಾಣಿ' ಇತಿ—'ಸ ಏಷ ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೋದಮಾನಃ ತಿಷ್ಠತಿ' ಇತ್ಯತ್ರಾಪಿ ಜೀವಶಬ್ದೇನ ಪರಮಾತ್ಮಾ ಅಭಿಹಿತಃ। 'ಜೀವ ಇತಿ–ಭಗವತಃ ಅನಿರುದ್ಧಸ್ಯ ಆಖ್ಯಾ' ಇತಿ ಶ್ರುತೇಃ।

ವಿಷ್ಣುರ್ಜೀವ ಇತಿ ಪ್ರೋಕ್ತಃ ಸತತಂ ಪ್ರಾಣಧಾರಣಾತ್।
ಸ ಪ್ರವಿಶ್ಯ ಶರೀರಂ ಚ ಸ್ಥಾವರಂ ಜಂಗಮಂ ತಥಾ॥
ಮಹಾಭೂತಾನಿ ಚ ವಿಭುಃ ತ್ರಿವೃತ್ಕರಣಪೂರ್ವಕಮ್।
ಸಂಸಾರಿಣಂ ಭ್ರಾಮಯತಿ ಸದೈವಾನ್ಯತ್ವಲಕ್ಷಣಮ್॥
ತೇನಾಯಂ ಮೋದತೇ ನಿತ್ಯಂ ವೃಕ್ಷಾವಸ್ಥಾಂ ಗತೋಽಪಿ ಸನ್। ಇತಿ ಚ

'ತತ್ತೇಜ ಐಕ್ಷತ, ತಾ ಆಪಃ ಐಕ್ಷಂತ, ಇಮಾಃ ತಿಸ್ರಃ ದೇವತಾಃ' ಇತಿ ಪೂರ್ವಮೇವ ಚೇತನತ್ವಸಿದ್ಧೇಃ 'ಅನೇನ ಜೀವೇನ ಆತ್ಮನಾ' ಇತಿ ಸಂಸಾರಿಣಃ ಪುನಃ ಪ್ರವೇಶಃ ನ ಯುಕ್ತಃ। ಅತಃ ತತ್ರ ಜೀವಶಬ್ದೇನ ಪರಮಾತ್ಮೈವ ಅಭಿಹಿತಃ। 'ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೋದಮಾನಃ ತಿಷ್ಠತಿ' ಇತ್ಯತ್ರಾಪಿ ಜೀವಶಬ್ದೋದಿತಃ ಪರ ಏವ। ಪೇಪೀಯಮಾನಃ ಮೋದಮಾನಸ್ತು ಸಂಸಾರೀ। ನ ಹಿ ಚೇತನಾದನ್ಯಸ್ಯ ಮೋದ ಭೋಗಾದಿಕಂ ಯುಜ್ಯತೇ। ಸುಖಸ್ಯ ಚಾಪ್ಯಾಯತನಂ ಶರೀರಂ ದುಃಖಸ್ಯಚಾಪ್ಯಾಯತನಂ ಶರೀರಮ್।

ಅಚೇತನಂ ಪ್ರಾಕೃತಮೇತದಾಹುಃ ಭೋಕ್ತಾ ತಯೋಃ
ಚೇತನಕಃ ಶರೀರೀ। ಇತಿ ಭಾರತೇ.

'ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತೇ' ಇತ್ಯತ್ರಾಪಿ ಜೀವಶಬ್ದಃ ಪರೇ। ನ ಹಿ ಸಂಸಾರಿಣೋ ಮುಖ್ಯತಃ ಪ್ರಾಣ-ಧಾರಕತ್ವಂ ಯುಜ್ಯತೇ।

'ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ' ಇತಿ ಚ

ಅನುವಾದ—(ವೃಕ್ಷದೃಷ್ಟಾಂತದಲ್ಲಿಯ ಜೀವಶಬ್ದವು ಪರಮಾತ್ಮವಾಚಕ ಎಂಬು ದನ್ನು ಇಲ್ಲಿ ವಿವರಿಸುವರು) ಈ ಹಿಂದೆ ಬಂದ 'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' ಎಂಬಲ್ಲಿಯಂತೆ (ಈ ವೃಕ್ಷದೃಷ್ಟಾಂತದಲ್ಲಿ ಬಂದ) 'ಸ ಏಷ ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೋದಮಾನಃ ತಿಷ್ಠತಿ'

ಎಂಬಲ್ಲಿಯು 'ಜೀವ' ಶಬ್ದದಿಂದ ಪರಮಾತ್ಮನೇ ಹೇಳಲ್ಪಟ್ಟಿರುವನು 'ಜೀವ ಎಂಬುದು ಭಗವಂತನ ಅನಿರುದ್ಧರೂಪದ ಹೆಸರು' ಎಂಬ ಶ್ರುತಿಯಿದೆ "ಯಾವಾಗಲೂ ಪ್ರಾಣಗಳನ್ನು ಅಂದರೆ ಇಂದ್ರಿಯಗಳನ್ನು ಜೀವರಲ್ಲಿ ಧಾರಣಮಾಡಿಸುವದರಿಂದ ವಿಷ್ಣುವಿಗೆ ಜೀವ ಎಂದು ಹೆಸರು. ಅವನು ಸ್ಥಾವರ ಮತ್ತು ಜಂಗಮಗಳ ಶರೀರದಲ್ಲಿ ಪ್ರವೇಶಮಾಡಿ, ಮತ್ತು ಮಹಾಭೂತಗಳಲ್ಲಿ ಪ್ರವೇಶಿಸಿ ತ್ರಿವೃತ್‌ಕರಣಮಾಡಿ, ತನ್ನಿಂದ ಯಾವಾಗಲೂ ಭಿನ್ನನಾದ ಸಂಸಾರಿಯಾದ ಜೀವನನ್ನು ಜಾಗ್ರತ್-ಸ್ವಪ್ನ-ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ತಿರುಗಿಸುತ್ತಿರುವನು ಪರಮಾತ್ಮನ ಸನ್ನಿಧಾನದಿಂದಲೇ ಜೀವನು ವೃಕ್ಷಾದಿ ಅವಸ್ಥೆಗಳನ್ನು ಪಡೆದಾಗಲೂ ಸುಖಾದಿಗಳನ್ನು ಅನುಭವಿಸುವನು" ಎಂದು ಹೇಳಿದೆ 'ತತ್ ತೇಜಃ ಐಕ್ಷತ ತಾ ಅಪಃ ಐಕ್ಷಂತ ಇಮಾಃ ತಿಸ್ರಃ ದೇವತಾಃ' ಎಂಬಲ್ಲಿ (ಉಲ್ಲಿಖಿತರಾದ 'ಅಪ್' ಆದಿಗಳ ಅಭಿಮಾನಿದೇವತೆಗಳು ಚೇತನರೆಂದು) ಚೇತನತ್ವವು ಮೊದಲೇ ಸಿದ್ಧವಾದ್ದರಿಂದ 'ಅನೇನ ಜೀವೇನ ಆತ್ಮನಾ' ಎಂಬುದರಿಂದ ಸಂಸಾರಿಯಾದ ಚೇತನನು (ಅವುಗಳಲ್ಲಿ) ಪ್ರವೇಶಿಸಿದನು ಎಂದು ಹೇಳುವದು ಯುಕ್ತವಾಗುವದಿಲ್ಲ. ಆದ್ದರಿಂದ ಅಲ್ಲಿ 'ಜೀವ' ಶಬ್ದದಿಂದ ಪರಮಾತ್ಮನೇ ಹೇಳಲ್ಪಟ್ಟಿರುವನು 'ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೋದಮಾನಃ ತಿಷ್ಠತಿ' ಎಂಬ (ವೃಕ್ಷದೃಷ್ಟಾಂತದ) ವಾಕ್ಯದಲ್ಲಿಯು 'ಜೀವ' ಶಬ್ದದಿಂದ ಪರಮಾತ್ಮನೇ ಹೇಳಲ್ಪಟ್ಟಿರುವನು. ಪಾನಮಾಡುವವನೂ, ಅದರಿಂದ ಸುಖಪಡುವವನೂ ಸಂಸಾರಿಯಾದ ವೃಕ್ಷಜೀವನು (ಈ ಶಕ್ತಿಯನ್ನು ಕೊಡಲು ಅವನಲ್ಲಿ ಅನುಪ್ರವಿಷ್ಟನಾದ 'ಜೀವ' ಶಬ್ದವಾಚ್ಯನು ಪರಮಾತ್ಮನು) ಸುಖಭೋಗಾದಿಗಳು ಚೇತನರಲ್ಲದವರಿಗೆ ಆಗುವದಿಲ್ಲ (ಆದ್ದರಿಂದ ವೃಕ್ಷಜೀವನು ಪಾನ-ಮೋದವುಳ್ಳವನು, ಕೇವಲ ವೃಕ್ಷವಲ್ಲ ಅವನಲ್ಲಿ ಪ್ರವೇಶಿಸಿ ಇದನ್ನು ಮಾಡಿಸುವವನು 'ಜೀವ' ಶಬ್ದವಾಚ್ಯನಾದ ಪರಮಾತ್ಮನು) "ಶರೀರವು ಸುಖ ಮತ್ತು ದುಃಖಗಳನ್ನು ಅನುಭವಿಸುವ ಸ್ಥಾನವು ಅದು ಭೌತಿಕವಾಗಿದ್ದು ಅಚೇತನವಾಗಿರುವದು (ಆದ್ದರಿಂದ ಶರೀರವೇ ಭೋಕ್ತೃವಲ್ಲ ಅದು ಭೋಗಸ್ಥಾನ ಮಾತ್ರ) ಚೇತನನಾದ ಜೀವನು ಸುಖದುಃಖಗಳ ಭೋಕ್ತೃವು" ಎಂದು ಭಾರತದಲ್ಲಿ ಹೇಳಿದೆ. (ಮೋದಮಾನ ಮತ್ತು ಪೇಪೀಯಮಾನವಾದುದು ವೃಕ್ಷಜೀವ, ಕೇವಲ ವೃಕ್ಷವಲ್ಲ ಅದರಲ್ಲಿ ಪ್ರವಿಷ್ಟವಾದ ಜೀವನು ಜೀವಶಬ್ದವಾಚ್ಯನಾದ ಪರಮಾತ್ಮನು ಎಂಬುದನ್ನು ವಿವರಿಸಲು ಕೇವಲ ಜಡವೃಕ್ಷಕ್ಕೆ ಸುಖಭೋಗಾದಿಗಳಿಲ್ಲ ಎಂಬುದನ್ನು ಇಲ್ಲಿ ವಿವರಿಸಲಾಗಿದೆ) 'ಜೀವಾಪೇತಂ ವಾವ ಕಿಲ ಇದಂ ಮ್ರಿಯತೇ ನ ಜೀವೋ ಮ್ರಿಯತೇ' ಎಂಬಲ್ಲಿಯು 'ಜೀವ' ಶಬ್ದಕ್ಕೆ ಪರಮಾತ್ಮನೆಂದೇ ಅರ್ಥ (ಜೀವಶಬ್ದವಾಚ್ಯನಾದ ಪರಮಾತ್ಮನು ದೇಹವನ್ನು ಬಿಟ್ಟೊಡನೆಯೇ ಸಂಸಾರಿ ಜೀವನು ಪ್ರಾಣಗಳನ್ನು ಕಳೆದುಕೊಳ್ಳುವನು ಜೀವಶಬ್ದವಾಚ್ಯನಾದ ಪರಮಾತ್ಮನು ಮೃತನಾಗುವದಿಲ್ಲ ಎಂಬುದು ಈ ಶ್ರುತಿವಾಕ್ಯದ ಅರ್ಥವು) ಸಂಸಾರಿಯಾದ ಜೀವನು ಮುಖ್ಯತಃ ಪ್ರಾಣಧಾರಕನಲ್ಲ (ಆದ್ದರಿಂದ ಪ್ರಾಣಧಾರಕ ಎಂಬ ಅರ್ಥವಿರುವ ಜೀವಶಬ್ದವು ಪರಮಾತ್ಮವಾಚಕವಾಗಿದೆ)

'ಪರಮಾತ್ಮನು ದೇಹವನ್ನು ಬಿಟ್ಟೊಡನೆಯೇ ನರನು ಮೃತನೆಂದು ಹೇಳಲ್ಪಡುವನು' ಎಂದು ಹೇಳಿದೆ

**ವಿವರಣೆ**—ವೃಕ್ಷದೃಷ್ಟಾಂತದ ಮರ್ಮವನ್ನು ತಿಳಿದುಕೊಳ್ಳಬೇಕಾದರೆ ಜೀವಶಬ್ದ ವಾಚ್ಯನಾದ ಪರಮಾತ್ಮ, ವೃಕ್ಷಜೀವ ಮತ್ತು ವೃಕ್ಷ ಈ ಮೂರರಲ್ಲಿಯ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕು 'ಜೀವ'ಶಬ್ದವಾಚ್ಯನಾದ ಪರಮಾತ್ಮನು ಸನ್ನಿಹಿತನಾಗಿದ್ದಾಗ ಮಾತ್ರ ವೃಕ್ಷಜೀವನು ಮೋದ-ಪಾನಗಳನ್ನು ಮಾಡಬಲ್ಲನು ಇಲ್ಲವಾದರೆ ಇಲ್ಲ. ಆದ್ದರಿಂದ ಜೀವನು ಸರ್ವಥಾ ಪರಮಾತ್ಮನಿಗೆ ಅಧೀನನು, ಭಿನ್ನನು ಎಂದು ಹೇಳುವದೇ ಈ ದೃಷ್ಟಾಂತದ ಉದ್ದೇಶ ವೃಕ್ಷದಲ್ಲಿ ಪ್ರವಿಷ್ಟನಾಗುವ ಜೀವನು ಜೀವಶಬ್ದವಾಚ್ಯ ಪರಮಾತ್ಮನು ಎಂದು ಹೇಳದೆ ವೃಕ್ಷಜೀವನು ಎಂದು ಹೇಳಿದರೆ ಅವನ ಪ್ರವೇಶದಿಂದ ವೃಕ್ಷವೇ ಮೋದ-ಪಾನಗಳನ್ನು ಮಾಡಿತು ಎಂದು ಹೇಳಬೇಕಾಗುವದು ಜಡವಾದ ವೃಕ್ಷಕ್ಕೆ ಇದು ಸಾಧ್ಯವಿಲ್ಲ ಆದ್ದರಿಂದ ಪ್ರವಿಷ್ಟನಾಗುವವನು ಜೀವಶಬ್ದವಾಚ್ಯನಾದ ಪರಮಾತ್ಮನು, ಅವನ ಸನ್ನಿಧಾನವಿದ್ದಾಗ ಮೋದ-ಪಾನ ಮಾಡುವವನು ವೃಕ್ಷಜೀವನು. ಅವನ ಸನ್ನಿಧಾನವಿದ್ದಾಗ ವೃಕ್ಷವನ್ನು ಕಡಿದರೂ ಅದು ಮತ್ತೆ ಚಿಗಿಯುವದು ಇಲ್ಲದಾಗ ಒಣಗಿಹೋಗುವದು ಆದ್ದರಿಂದ ವೃಕ್ಷಜೀವನು ಸರ್ವಥಾ ಪರಮಾತ್ಮನಿಗೆ ಅಧೀನನಾಗಿರುವನು ಎಂಬುದು ಇಲ್ಲಿಯ ಅಭಿಪ್ರಾಯವು 'ಜೀವ' ಶಬ್ದಕ್ಕೆ ಪ್ರಾಣಧಾರಕ ಎಂಬ ಅರ್ಥವಿರುವದು ಇದು ಮುಖ್ಯವಾಗಿ ಪರಮಾತ್ಮನಿಗೇ ಅನ್ವಯಿಸುವದು. 'ಜೀವ' ಅಂದರೆ ಅನಿರುದ್ಧನಾಮಕ ಪರಮಾತ್ಮನು.

ಈ ವೃಕ್ಷದೃಷ್ಟಾಂತದಲ್ಲಿ ಅಲ್ಲದೆ 'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' ಎಂಬ ಹಿಂದೆ ಬಂದ ವಾಕ್ಯದಲ್ಲಿಯೂ 'ಜೀವ' ಶಬ್ದಕ್ಕೆ ಪರಮಾತ್ಮನೆಂದೇ ಅರ್ಥವು. ಅಲ್ಲಿ ಇದು ಇನ್ನೂ ಸ್ಪಷ್ಟವಿದೆ ಅಲ್ಲಿ 'ಅಪ್' ಆದಿಗಳ ಅಭಿಮಾನಿದೇವತೆಗಳು ಚೇತನರೇ ಆಗಿದ್ದಾರೆ. ಅವರಲ್ಲಿ ಇನ್ನೊಬ್ಬ ಸಂಸಾರಿಜೀವನು ಪ್ರವೇಶಿಸುವ ಆಗತ್ಯವಿಲ್ಲ, ಯುಕ್ತವೂ ಅಲ್ಲ. ಆದ್ದರಿಂದ ಜೀವಶಬ್ದವಾಚ್ಯನಾದ ಪರಮಾತ್ಮನೇ ಪ್ರವೇಶಿಸಿ ತ್ರಿವೃತ್‌ಕರಣಾದಿಗಳನ್ನು ಮಾಡುವನು. ಹೀಗೆ ಅಲ್ಲಿ ಸ್ಪಷ್ಟವಾಗಿರುವದರಿಂದ ಅಲ್ಲಿ 'ಜೀವ' ಶಬ್ದಕ್ಕೆ ಪರಮಾತ್ಮನೆಂಬ ಅರ್ಥವಿರುವದನ್ನು ಶ್ರೌತಪ್ರಯೋಗ ದೃಷ್ಟಾಂತವಾಗಿ ಕೊಟ್ಟು ವೃಕ್ಷದೃಷ್ಟಾಂತದಲ್ಲಿ ಬಂದ ಜೀವಶಬ್ದ ವಾಚ್ಯನೂ ಪರಮಾತ್ಮನೇ ಎಂಬುದಕ್ಕೆ ಯುಕ್ತಿಯನ್ನಾಗಿಯೂ ಉಪಯೋಗಿಸಿದ್ದಾರೆ

**'ಅಣಿಮ' ಮತ್ತು 'ಆತ್ಮಾ' ಶಬ್ದಗಳು ಪರಮಾತ್ಮವಾಚಕವಾಗಿವೆ.**

**50. ಯಂ ವೈ ಸೋಮ್ಯ ಏತಂ ಅಣಿಮಾನಂ ನ ನಿಭಾಲಯಸೇ ಅಸ್ಯ ಸೋಮ್ಯ ಏಷಃ ಅಣಿಮ್ನಃ ಏವಂ ಮಹಾನ್ ನ್ಯಗ್ರೋಧಃ ತಿಷ್ಠತಿ ಇತ್ಯತ್ರಾಪಿ 'ಅಣಿಮ' ಶಬ್ದೇನ ಪರ ಏವ ಅಭಿಹಿತಃ । 'ಸ ಏಷೋಽಣಿಮಾ ಏತದಾತ್ಮ್ಯಮಿದಂ ಸರ್ವಂ ತತ್‌ಸತ್ಯಂ ಸ ಆತ್ಮಾ ಅತತ್ ತ್ವಮಸಿ ಶ್ವೇತಕೇತೋ' ಇತ್ಯುಕ್ತತ್ವಾಚ್ಚ ।**

ಧಾನಾಸು ತು ಅಣ್ವ್ಯ ಇವ ಇಮಾ ಧಾನಾ ಇತಿ ಸ್ತ್ರೀಲಿಂಗಪ್ರಯೋಗಾತ್ ಇವಶಬ್ದ-ಪ್ರಯೋಗಾಚ್ಚ ನ ಅಣಿಮತ್ವಮ್ । ನ ಚ ತಾ ನ ನಿಭಾಲಯಸೇ । ಐತದಾತ್ಮ್ಯ-ಮಿತ್ಯೇತದೀಯಮ್ । ಸ ಆತ್ಮೇತಿ ಆತ್ಮಶಬ್ದಸ್ತು ಪರ ಏವ । 'ದ್ಯುಭ್ವಾದ್ಯಾಯ-ತನಂ ಸ್ವಶಬ್ದಾತ್' 'ನಾನುಮಾನಮತಚ್ಛಬ್ದಾತ್' 'ಪ್ರಾಣಭೃಚ್ಚ' ಇತ್ಯತ್ರ 'ತಮೇವ ಏಕಂ ಜಾನಥ ಆತ್ಮಾನಂ' ಇತಿ ಸ್ವಶಬ್ದಪರ್ಯಾಯಾತ್ಮಶಬ್ದಾತ್ ನ ಪ್ರಕೃತಿಜೀವೌ ಅಭಿಧೀಯೇತೇ ಕಿಂತು ಪರ ಏವೇತಿ ಭಗವತಾ ವ್ಯಾಸೇನ ಅಭಿಹಿತಮ್ । ಅತಃ ಆತ್ಮಶಬ್ದಸ್ತು ಅಸ್ಮಿನ್ನೇವ ಮುಖ್ಯಃ ।

ಆತತತ್ವಾಚ್ಚ ಮಾತೃತ್ವಾದಾತ್ಮೇತಿ ಪರಮೋ ಹರಿಃ ।
ಆತ್ಮಾಭಾಸಾಃ ತದನ್ಯೇ ಯೇ ನಹಿ ಏತೇಷಾಂ ತತಾಃ ಗುಣಾಃ ॥

ಇತಿ ಪರಮೋಪನಿಷದಿ

ಅನುವಾದ—(ನ್ಯಗ್ರೋಧಫಲಬೀಜದೃಷ್ಟಾಂತದಲ್ಲಿಯೂ ಭೇದವನ್ನೇ ಪ್ರತಿಪಾದಿಸಿದ್ದನ್ನು ವಿವರಿಸುವರು ) "ಸೋಮ್ಯನೇ ಸೂಕ್ಷ್ಮನಾದ ಯಾರನ್ನು (ಈ ನ್ಯಗ್ರೋಧಫಲ ಬೀಜಗಳಲ್ಲಿ) ನೀನು ಕಾಣುತ್ತಿಲ್ಲವೋ ಈ ಸೂಕ್ಷ್ಮನಾದ ಭಗವಂತನ ಸಾಮರ್ಥ್ಯದಿಂದಲೇ ಈ ದೊಡ್ಡ ನ್ಯಗ್ರೋಧವೃಕ್ಷವು ಬೆಳೆದು ನಿಂತಿರುವದು" ಎಂಬಲ್ಲಿಯೂ 'ಅಣಿಮ' ಶಬ್ದದಿಂದ ಪರಮಾತ್ಮನೇ ಹೇಳಲ್ಪಟ್ಟಿರುವನು. ಯಾಕಂದರೆ 'ಸ ಏಷ ಅಣಿಮಾ ಐತದಾತ್ಮ್ಯಮಿದಮ್' ಇತ್ಯಾದಿಯಾಗಿ ಮುಂದೆಯೇ ಹೇಳಿದ್ದಾರೆ (ಈ ಮುಂದಿನ ವಾಕ್ಯದಲ್ಲಿಯೇ ಅಣಿಮ ಶಬ್ದವನ್ನು ಪರಮಾತ್ಮ ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾರೆ) (ಈ ಅಣಿಮ ಶಬ್ದಕ್ಕೆ 'ಧಾನಾ' ಅಂದರೆ 'ಬೀಜ' ಎಂದು ಅರ್ಥವಲ್ಲ). ಯಾಕಂದರೆ ಧಾನಾ ಅಂದರೆ ಬೀಜಗಳನ್ನು ಕುರಿತು ಉಲ್ಲೇಖಿಸುವಾಗ 'ಅಣ್ವ್ಯಃ ಇವ' ಎಂದು ಸ್ತ್ರೀಲಿಂಗ ಪ್ರಯೋಗವನ್ನೂ ಇವ ಶಬ್ದ ಪ್ರಯೋಗವನ್ನೂ ಮಾಡಿದ್ದಾರೆ (ಅಣ್ವ್ಯ ಇವ ಇಮಾ ಧಾನಾಃ ಎಂಬಲ್ಲಿ) ಆದ್ದರಿಂದ ('ಅಣಿಮಾನಮ್' ಎಂದು ಉಲ್ಲೇಖಿಸಿದ) ಅಣಿಮತ್ವವು (ಸೂಕ್ಷ್ಮತ್ವವು) ಅವುಗಳಿಗಿಲ್ಲ. ಅವುಗಳನ್ನು ಕಾಣುತ್ತಿಲ್ಲ ಎಂದೂ ಹೇಳಲು ಬರುವದಿಲ್ಲ (ಶ್ವೇತಕೇತುವಿಗೆ ಬೀಜಗಳು ಕಾಣುತ್ತಿವೆ. ಆದರೆ ಅದರಲ್ಲಿರುವ ಸೂಕ್ಷ್ಮಶಕ್ತಿ ಅಂದರೆ ಪರಮಾತ್ಮ ಕಾಣುತ್ತಿಲ್ಲ). (ಆದ್ದರಿಂದ 'ಯಂ ವೈ ಸೋಮ್ಯ ಏತಮ್ ಅಣಿಮಾನಂ ನ ನಿಭಾಲಯಸೇ' ಎಂಬಲ್ಲಿ ಅಣಿಮ ಶಬ್ದವು ಪರಮಾತ್ಮವಾಚಕವೇ ಆಗಿದೆ )

**'ಐತದಾತ್ಮ್ಯ' ಎಂಬುದಕ್ಕೆ ಏತದೀಯ ಅಥವಾ ಏತತ್ಸ್ವಾಮಿಕ ಎಂದು ಅರ್ಥವು.**

'ಐತದಾತ್ಮ್ಯ' ಎಂಬುದಕ್ಕೆ 'ಏತದೀಯ' ಅವನಿಗೆ ಸಂಬಂಧಿಸಿದ್ದು ಎಂದು ಅರ್ಥ (ಅವನನ್ನು ಬಿಟ್ಟು ಬೇರೆ ಯಾವದೂ ಇಲ್ಲ ಎಂದು ಅರ್ಥವಲ್ಲ) 'ಸ ಆತ್ಮಾ' ಎಂಬಲ್ಲಿ 'ಆತ್ಮ' ಶಬ್ದವಾಚ್ಯನೂ ಪರಮಾತ್ಮನೇ ಆಗಿದಾನೆ. 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್'

(೧-೩-೧) (ಸ್ವಶಬ್ದ ಅಂದರೆ ಆತ್ಮಶಬ್ದಪ್ರಯೋಗವಿರುವದರಿಂದ ದ್ಯು, ಭೂ ಇತ್ಯಾದಿಗಳಿಗೆ ಪರಮಾತ್ಮನೇ ಆಶ್ರಯನಾಗಿದ್ದಾನೆ) ಪ್ರಾಣಭೃಚ್ಚ (೧ ೩-೪) (ಇದೇ ಕಾರಣದಿಂದ ಜೀವನೂ ಅಲ್ಲ) ಎಂಬ ಸೂತ್ರಗಳಲ್ಲಿ, 'ತಮೇವ ಏಕಂ ಜಾನಥ ಆತ್ಮಾನಮ್' ಎಂಬ ಶ್ರುತಿಯಲ್ಲಿ ಸ್ವಶಬ್ದಪರ್ಯಾಯವಾದ ಆತ್ಮಶಬ್ದವನ್ನು ಪ್ರಯೋಗಿಸಿರುವದರಿಂದ ಪ್ರಕೃತಿ ಅಥವಾ ಜೀವರು ಹೇಳಲ್ಪಡುವದಿಲ್ಲ ಆದರೆ ಪರಮಾತ್ಮನೇ ಹೇಳಲ್ಪಡುವನು ಎಂದು ಭಗವಾನ್ ವ್ಯಾಸರು ಹೇಳಿದ್ದಾರೆ ಆದ್ದರಿಂದ ಆತ್ಮಶಬ್ದವು ಪರಮಾತ್ಮನಲ್ಲಿಯೇ ಮುಖ್ಯವಾಗಿದೆ ಆತತ ಅಂದರೆ ದೇಶ, ಕಾಲ, ಗುಣಗಳಿಂದ ವ್ಯಾಪ್ತನಾದ್ದರಿಂದ, ಮಾತ್ರ ಅಂದರೆ ನಿರ್ಮಾತೃನಾದ್ದರಿಂದ ಶ್ರೀಹರಿಯೇ ಆತ್ಮಶಬ್ದವಾಚ್ಯನು ಅವನಿಂದ ಭಿನ್ನರಾದ ಜೀವರು ಆತ್ಮಾಭಾಸರು ಅಂದರೆ ಅಮುಖ್ಯವೃತ್ತಿಯಿಂದ ಆತ್ಮಶಬ್ದವಾಚ್ಯರು. ಇವರ ಗುಣಗಳು 'ತತ' ಅಂದರೆ ವ್ಯಾಪ್ತವಾಗಿಲ್ಲ

ವಿವರಣೆ—ನ್ಯಗ್ರೋಧ ಫಲಬೀಜದೃಷ್ಟಾಂತದಲ್ಲಿ ಪರಮಾತ್ಮನು ಸೂಕ್ಷ್ಮನಾದ್ದರಿಂದ ಕಂಡುಬರುವದಿಲ್ಲ. ಆದರೆ ಅವನ ಸಾಮರ್ಥ್ಯದಿಂದಲೇ ಎಲ್ಲವೂ ನಡೆಯುವದು ಎಂದು ವಿವರಿಸುವರು ಇಲ್ಲಿ ಪರಮಾತ್ಮನನ್ನು ಉಲ್ಲೇಖಿಸುವ ಶಬ್ದವು 'ಅಣಿಮ' ಶಬ್ದವು. ಈ ಅಣಿಮಶಬ್ದದಿಂದ ಚಿಕ್ಕದಾದ ಬೀಜವನ್ನು ಉಲ್ಲೇಖಿಸಿಲ್ಲ ಆದರೆ ಸೂಕ್ಷ್ಮನಾದ ಪರಮಾತ್ಮನನ್ನು ಉಲ್ಲೇಖಿಸಿರುವರು ಚಿಕ್ಕವಾದ ಬೀಜಗಳನ್ನು 'ಅಣ್ವ್ಯಃ ಧಾನಾಃ' ಎಂಬುದರಿಂದ ಉಲ್ಲೇಖಿಸಿರುವರು. ಈ ಚಿಕ್ಕವಾದ ಬೀಜಗಳಲ್ಲಿಯೂ ಸೂಕ್ಷ್ಮವಾಗಿ ಇರುವವನು 'ಅಣಿಮ'ನು. ಅವನ ಸಾಮರ್ಥ್ಯದಿಂದಲೇ ದೊಡ್ಡ ನ್ಯಗ್ರೋಧವೃಕ್ಷವು ಬೆಳೆದಿರುವದು. ಬೀಜಗಳು ಎಷ್ಟೇ ಚಿಕ್ಕವಿದ್ದರೂ ಕಾಣುವವು. ಆದರೆ ಅವನು ಕಾಣುವದಿಲ್ಲ.

ಇನ್ನು 'ಐತದಾತ್ಮ್ಯಮ್' ಎಂಬ ಶಬ್ದವೂ ಬ್ರಹ್ಮನೊಬ್ಬನೇ ಈ ಜಗತ್ತಿಗೆ ಆತ್ಮಭೂತನಾಗಿರುವನು. ಅವನನ್ನು ಬಿಟ್ಟು ಬೇರೆ ಯಾವದೂ ಇಲ್ಲ ಎಂಬ ಅರ್ಥವುಳ್ಳದ್ದಾಗಿಲ್ಲ 'ಐತದಾತ್ಮ್ಯ' ಅಂದರೆ 'ಏತದೀಯ' ಎಂದು ಅರ್ಥವು. ಈ ಜಗತ್ತೆಲ್ಲವೂ ಅವನಿಗೇ ಸೇರಿದ್ದು ಎಂದು ಅರ್ಥವು. ಅದು ಇಲ್ಲವೇ ಇಲ್ಲ ಎಂದು ಅರ್ಥವಲ್ಲ. 'ಏತತ್‌ಸ್ವಾಮಿಕ' ಅಂದರೆ ಅವನೇ ಈ ಜಗತ್ತಿಗೆ ಒಡೆಯನು ಎಂದೂ ಅರ್ಥಮಾಡಬಹುದು. ಆತ್ಮಶಬ್ದಕ್ಕೆ ಸ್ವಾಮಿ ಎಂಬ ಅರ್ಥವಿದೆ.

'ಸ ಆತ್ಮಾ' ಎಂಬಲ್ಲಿಯ ಆತ್ಮಶಬ್ದವೂ ಪರಮಾತ್ಮವಾಚಕವು. ದ್ಯುಭ್ವಾದ್ಯಧಿಕರಣದಲ್ಲಿ 'ಆತ್ಮ' ಶಬ್ದವು ಪರಮಾತ್ಮನಿಗೆ ಸ್ವಶಬ್ದ ಅಂದರೆ ಅವನನ್ನೇ ಮುಖ್ಯವೃತ್ತಿಯಿಂದ ಹೇಳುವ ಶಬ್ದ ಎಂದು ಶ್ರೀ ಬಾದರಾಯಣರೇ ಹೇಳಿದ್ದಾರೆ. ಆದ್ದರಿಂದ 'ಸ ಆತ್ಮಾ' ಸಃ ಅಂದರೆ ಅಣಿಮನಾದ ಪರಮಾತ್ಮನೇ ಆತ್ಮಾ ಅಂದರೆ ಜೀವನು ಎಂದು ಅರ್ಥ ಕಲ್ಪಿಸಿ ಜೀವಬ್ರಹ್ಮೈಕ್ಯವನ್ನು ಹೇಳಲು ಬರುವದಿಲ್ಲ. ಆದ್ದರಿಂದ 'ಐತದಾತ್ಮ್ಯಮ್' ಎಂಬುದಾಗಲೀ 'ಸ ಆತ್ಮಾ' ಎಂಬುದಾಗಲೀ ಐಕ್ಯಪ್ರತಿಪಾದನೆಗೆ ಸಹಾಯಕವಾಗಿಲ್ಲ.

ಈ ದೃಷ್ಟಾಂತದಲ್ಲಿಯೂ ಪರಮಾತ್ಮನ ಸೂಕ್ಷ್ಮತ್ವವನ್ನೂ ಜೀವ-ಪರಮಾತ್ಮರ ಭೇದವನ್ನೂ ಹೇಳಿರುವರು

**ಮರಣೋನ್ಮುಖನ ಮತ್ತು ಸ್ತೇನನ ದೃಷ್ಟಾಂತಗಳೂ ಭೇದವನ್ನೇ ಪ್ರತಿಪಾದಿಸುವವು.**

**51** 'ತೇಜಃ ಪರಸ್ಯಾಂ ದೇವತಾಯಾಂ ತಾವನ್ನ ಜಾನಾತಿ' ಇತ್ಯತ್ರ ಚ ಯದಾ ಅಸ್ಯ ಪ್ರಾಣಾದೀನ್ ಪರೋ ಗ್ರಸತಿ ತದಾ ನ ಜಾನಾತಿ, ಯದಾ ದದಾತಿ ತದಾ ಜಾನಾತೀತಿ ತದ್ವಶತ್ವಮೇವ ಉಕ್ತಮ್ ।

ಯದಾ ಪ್ರಾಣಾನ್ ದದಾತೀಶಃ ತದಾ ಚೇತನಕೋಽಖಿಲಮ್ ।
ಜಾನಾತಿ ಗ್ರಸ್ತಕರಣಃ ತೇನ ವೇತ್ತಿ ನ ಕಿಂಚನ ॥ ಇತಿ ಚ

'ಅಪಹಾರ್ಷೀತ್ ಸ್ತೇಯಮಕಾರ್ಷೀತ್' ಇತ್ಯತ್ರ ಚ ಅನ್ಯಾಭಿಮತಸ್ಯೈವ ವಸ್ತುನಃ ಅಪಹಾರ್ಯತ್ವಾತ್ ಭೇದ ಏವಾಯಂ ದೃಷ್ಟಾಂತಃ । ಅನ್ಯಂ ಸಂತಂ ಪರಮಾತ್ಮಾನಂ ಸ್ವಯಮಿತಿ ಮನ್ಯಮಾನಃ ಸ್ತೇನ ಏವೇತಿ । ನ ಹಿ ಸ್ವಕೀಯಂ ಪರಿತ್ಯಜನ್ ಸ್ತೇನೋ ಭವತಿ ।

ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ ।
ಶಾಸ್ತ್ರತತ್ವಮವಿಜ್ಞಾಯ ತಥಾ ವಾದಬಲಾಜ್ಜನಾಃ ॥
ಕಾಮಕ್ರೋಧಾಭಿಭೂತತ್ವಾದಹಂಕಾರವಶಂ ಗತಾಃ ।
ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ ॥
ಬ್ರಹ್ಮಸ್ತೇನಾ ನಿರಾನಂದಾಃ ಅಪಕ್ವಮನಸೋಽಶಿವಾಃ ।
ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ ॥
ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಮ್ ।
ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ ॥
ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತಃ । ಇತಿ ಮೋಕ್ಷಧರ್ಮೇ.

ಅನುವಾದ—(ರೋಗಗ್ರಸ್ತನಾಗಿ ಮರಣೋನ್ಮುಖನಾದವನ ದೃಷ್ಟಾಂತ ಮತ್ತು ಕಳ್ಳತನ ಮಾಡಿದ್ದನ್ನು ಪರೀಕ್ಷಿಸಲು ಕಾಯ್ದ ಕೊಡಲಿಯನ್ನು ಹಿಡಿಸಿದ ದೃಷ್ಟಾಂತ – ಈ ಎರಡು ದೃಷ್ಟಾಂತಗಳಲ್ಲಿಯೂ ಭೇದವನ್ನೇ ಹೇಳಿದ್ದನ್ನು ವಿವರಿಸುವರು) 'ತೇಜಃ ಪರಸ್ಯಾಂ ದೇವತಾಯಾಂ ತಾವನ್ನ ಜಾನಾತಿ' ಎಂಬಲ್ಲಿಯೂ ಪ್ರಾಣಾದಿಗಳನ್ನು ಪರಮಾತ್ಮನು ಗ್ರಾಸಮಾಡಿದಾಗ ಅವನಿಗೆ (ಸುತ್ತಲಿದ್ದ ಬಂಧುಬಳಗದವರು) ತಿಳಿದುಬರುವದಿಲ್ಲ. ಅವುಗಳನ್ನು ಅವನಿಗೆ ಕೊಟ್ಟಾಗ ತಿಳಿದುಬರುವವರು ಎಂದು ಪ್ರಾಣಾದಿಗಳೆಲ್ಲವೂ ಪರಮಾತ್ಮನ ಅಧೀನವಾದದ್ದನ್ನೇ ಹೇಳಲಾಗಿದೆ. "ಪರಮಾತ್ಮನು ಪ್ರಾಣಾದಿಗಳನ್ನು

ಕೊಟ್ಟಾಗ ಚೇತನನು (ಜೀವನು) ತಿಳಿದುಕೊಳ್ಳಬಲ್ಲನು ಆದರೆ ಪರಮಾತ್ಮನಿಂದ ಅವನ ಪ್ರಾಣಾದಿಗಳು ಗ್ರಸ್ತವಾದಾಗ ಏನನ್ನೂ ತಿಳಿದುಕೊಳ್ಳಲಾರನು" ಎಂದು ಹೇಳಿದೆ

'ಅಪಹಾರ್ಷೀತ್ ಸ್ತೇಯಮಕಾರ್ಷೀತ್' ಅಪಹರಿಸಿದನು, ಕಳ್ಳತನವನ್ನು ಮಾಡಿದನು ಎಂಬ ದೃಷ್ಟಾಂತದಲ್ಲಿಯೂ (ಅಪಹರಿಸುವವನಿಗಿಂತ) ಭಿನ್ನವಾದ ವಸ್ತುವೇ ಅಪಹರಿಸಿದ್ದಾದ್ದರಿಂದ ಭೇದವನ್ನೇ ಈ ದೃಷ್ಟಾಂತವೂ ಹೇಳುವದು ಭಿನ್ನನಾದ ಪರಮಾತ್ಮನನ್ನು ತಾನೇ ಎಂದು ತಿಳಿದುಕೊಳ್ಳುವವನು ಕಳ್ಳನೇ ಆಗಿದ್ದಾನೆ ತನ್ನದನ್ನು ಬಿಡುವವನು ಕಳ್ಳನೆನಿಸುವದಿಲ್ಲ

"ಕೆಲವು ಅವಿವೇಕಿಗಳು ಜೀವಬ್ರಹ್ಮೈಕ್ಯವನ್ನು ಹೇಳುವರು (ಅಹಂ ಬ್ರಹ್ಮಾಸ್ಮಿ ಇತ್ಯಾದಿ) ಶಾಸ್ತ್ರದ ತತ್ವವು ತಿಳಿಯದೇ ಕೇವಲ ವಾದಮಾಡುತ್ತ ಅವರು ಹೀಗೆ ಹೇಳುವರು ಕಾಮಕ್ರೋಧಗಳಿಂದ ಕೂಡಿದವರಾಗಿಯೂ ಅಹಂಕಾರವಶರಾಗಿಯೂ ಹೀಗೆ ಹೇಳುವರು ಇವರಿಗೆ (ದ್ವಾ ಸುಪರ್ಣಾ ಇತ್ಯಾದಿ) ಶಾಸ್ತ್ರದ ಯಥಾರ್ಥ ಜ್ಞಾನವಿರುವದಿಲ್ಲ. (ಶಾಸ್ತ್ರವು ಅತತ್ವಾವೇದಕ ಎಂದು ಹೇಳಿ) ಇವರು ಶಾಸ್ತ್ರವನ್ನೇ ಕದಿಯುವರು (ಐಕ್ಯವನ್ನು ಹೇಳಿ) ಬ್ರಹ್ಮನನ್ನೇ ಕದಿಯುವರು ಆನಂದದ ಯೋಗ್ಯತೆಯಿಲ್ಲದವರೂ, ಅಪಕ್ವವಾದ ಮನಸ್ಸುಳ್ಳವರೂ, ಅಮಂಗಲಕರರೂ ಆದ ಇವರು ಪರಮಾತ್ಮನು ನಿರ್ಗುಣನೆಂದೇ ಹೇಳುವರು. ಗುಣಗಳನ್ನು ಹೇಳುವದಿಲ್ಲ ತಮೋಗುಣಪ್ರಚುರರಾದ ಇವರಿಗೆ ತಮಸ್ಸೇ ಗತಿಯು. ಸ್ವರೂಪದಿಂದಲೂ, ಜಾತಿಯಿಂದಲೂ, (ದ್ವಾ ಸುಪರ್ಣಾ ಇತ್ಯಾದಿ) ಶ್ರುತಿಯಿಂದಲೂ, ಪ್ರಯೋಜನದಿಂದಲೂ ಭಿನ್ನನಾದ ಪರಮಾತ್ಮನು ನಾನೇ ಇರುವೆನೆಂಬ ಅನ್ವಯವು (ಅಹಂ ಬ್ರಹ್ಮಾಸ್ಮಿ ಇತ್ಯಾದಿ ವಾಕ್ಯಗಳಿಗೆ) ಕೂಡಲಾರದು" ಎಂದು ಮೋಕ್ಷಧರ್ಮದಲ್ಲಿ ಹೇಳಿದೆ

**ವಿವರಣೆ**—ಮರಣೋನ್ಮುಖನ ದೃಷ್ಟಾಂತದಲ್ಲಿ ಜೀವನು ಪರಮಾತ್ಮನಿಗೆ ಅಧೀನವಾಗಿರುವದನ್ನು ವಿವರಿಸಿ ಭೇದವನ್ನೇ ಪ್ರತಿಪಾದಿಸಿದ್ದಾರೆ ಕಳ್ಳತನ ಮಾಡಿದವನ ದೃಷ್ಟಾಂತದಲ್ಲಿಯೂ ಪರಮಾತ್ಮನಿಂದ ಭಿನ್ನನೆಂದು ತಿಳಿದುಕೊಂಡವನು ಸತ್ಯಾಭಿಸಂಧನೂ, ಐಕ್ಯವನ್ನು ಚಿಂತಿಸುವವನು ಅನೃತಾಭಿಸಂಧನೂ ಎಂದು ವಿವರಿಸಿದ್ದಾರೆ ಭೇದಶ್ರುತಿಗಳು ಅತತ್ವಾವೇದಕ ಎಂದು ಹೇಳುವದು ಶಾಸ್ತ್ರಚೌರ್ಯವೇ ಆಗಿದೆ. ಜೀವಬ್ರಹ್ಮೈಕ್ಯವನ್ನು ಹೇಳುವದು ಬ್ರಹ್ಮಸ್ತೇನವೇ ಆಗಿದೆ ಇದನ್ನು ಮಹಾಭಾರತದ ಮೋಕ್ಷಧರ್ಮದ ವಚನಗಳು ಸ್ಪಷ್ಟಪಡಿಸುತ್ತವೆ.

**ಒಂಬತ್ತೂ ದೃಷ್ಟಾಂತಗಳೂ ಭೇದವನ್ನೇ ಪ್ರತಿಪಾದಿಸುವವು.**

**52.** **ಯಥಾ ಪಕ್ಷೀ ಚ ಸೂತ್ರಂ ಚ ನಾನಾವೃಕ್ಷರಸಾ ಯಥಾ ।**
**ಯಥಾ ನದ್ಯಃ ಸಮುದ್ರಶ್ಚ ಶುದ್ಧೋದಲವಣೌ ಯಥಾ ॥**
**ಯಥಾ ಚೋರಾಪಹಾರ್ಯೌ ಚ ಯಥಾ ಪುಂವಿಷಯಾವಪಿ ।**
**ಯಥಾ ಜೀವೇಶ್ವರೌ ಭಿನ್ನೌ ಸರ್ವದೈವ ವಿಲಕ್ಷಣೌ ॥**

ತಥಾಪಿ ಸೂಕ್ಷ್ಮರೂಪತ್ವಾನ್ನ ಜೀವಾತ್ ಪರಮೋ ಹರಿಃ ।
ಭೇದೇನ ಮಂದದೃಷ್ಟೀನಾಂ ದೃಶ್ಯತೇ ಪ್ರೇರಕೋಪಿ ಸನ್ ॥
ವೈಲಕ್ಷಣ್ಯಂ ತಯೋಃ ಜ್ಞಾತ್ವಾ ಮುಚ್ಯತೇ ಬಧ್ಯತೇsನ್ಯಥಾ ।
ಇತಿ ಪರಮೋಪನಿಷದಿ.

ಅನುವಾದ—(ಪ್ರತಿಯೊಂದೂ ದೃಷ್ಟಾಂತದಲ್ಲಿ ಭೇದವೇ ಪ್ರತಿಪಾದಿತವಾಗಿರುವದನ್ನು ಮೇಲೆ ವಿವರಿಸಿದರು ಈಗ ಈ ಎಲ್ಲ ದೃಷ್ಟಾಂತಗಳಲ್ಲಿಯೂ ಭೇದವಿರುವದನ್ನು ಸಂಗ್ರಹಿಸಿ ಹೇಳುವ ಪ್ರಮಾಣವಚನವನ್ನು ಉಲ್ಲೇಖಿಸುವರು) “ಪಕ್ಷಿ ಮತ್ತು ಸೂತ್ರ, ನಾನಾವೃಕ್ಷರಸಗಳು, ನದಿಗಳು ಮತ್ತು ಸಮುದ್ರ, ನೀರು ಮತ್ತು ಉಪ್ಪು, ಕಳ್ಳ ಮತ್ತು ಕದ್ದ ವಸ್ತು, ಗಂಧಾರದೇಶ ಮತ್ತು ಪುರುಷ ಇವುಗಳಲ್ಲಿ ಭೇದವಿರುವಂತೆ, ಜೀವೇಶ್ವರರು ಸದಾಕಾಲದಲ್ಲಿಯೂ ಪರಸ್ಪರ ಭಿನ್ನರು ಮತ್ತು ವಿಲಕ್ಷಣರು ಪರಮಾತ್ಮನು ಸೂಕ್ಷ್ಮನಾದ್ದರಿಂದ ಮಂದದೃಷ್ಟಿಯವರಿಗೆ ಅವನು ಜೀವನ ಜೊತೆಗೇ ಭಿನ್ನನಾಗಿ ಇದ್ದರೂ ಕಂಡುಬರುವದಿಲ್ಲ ಅವನ ಈ ಭೇದವನ್ನು ತಿಳಿದುಕೊಂಡರೆ ಮುಕ್ತಿಯು ದೊರೆಯುವದು, ಇಲ್ಲವಾದರೆ ಬಂಧನದಲ್ಲಿಯೇ ಇರಬೇಕಾಗುವದು” ಎಂದು ಪರಮೋಪನಿಷತ್ತಿನಲ್ಲಿ ಹೇಳಿದೆ.

ವಿವರಣೆ—ಇಲ್ಲಿ ಒಂಬತ್ತೂ ದೃಷ್ಟಾಂತಗಳಲ್ಲಿ ಭೇದವೇ ಇರುವದನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆ ನ್ಯಗ್ರೋಧ ಫಲಬೀಜದೃಷ್ಟಾಂತ ಮತ್ತು ಲವಣೋದಕ ದೃಷ್ಟಾಂತಗಳಲ್ಲಿ ಹೇಳಿದ ಅದೃಶ್ಯನಾದರೂ ಪ್ರೇರಕನಾಗಿಯೂ, ದೃಷ್ಟಸಾಮರ್ಥ್ಯನಾಗಿಯೂ ಇದ್ದಾನೆ ಎಂಬ ಅಂಶವನ್ನೂ ಸ್ತೇನ ದೃಷ್ಟಾಂತದಲ್ಲಿಯ ಭೇದಜ್ಞಾನವುಳ್ಳವರಿಗೆ ಮುಕ್ತಿ, ಇಲ್ಲದವರಿಗೆ ಬಂಧನ ಎಂಬ ಅಂಶವನ್ನೂ ವಿವರಿಸಿದ್ದಾರೆ

**ನಿಷೇಧಿಸಲ್ಪಡಬೇಕಾದ ಐಕ್ಯವು ಪ್ರಾಪ್ತವಾಗುವ ರೀತಿ.**

53. ಪ್ರೇರಕಃ ಸರ್ವಜೀವಾನಾಂ ಪ್ರಾಣಧೀಚೋದಿತಾ ಚ ಸಃ ।
ವಿಷ್ಣುಃ ಸಂಸಾರಿಣೋsನ್ಯೋ ಯಸ್ತಮವಿಜ್ಞಾಯ ಮೂಢಧೀಃ ॥
ದೇಹೇಂದ್ರಿಯಪ್ರಾಣಬುದ್ಧಿನೇತೃತ್ವಂ ಮನ್ಯತೇsತ್ಮನಃ ।
ಅತಃ ಸಂಸಾರಪದವೀಂ ಯಾತಿ ಜೀವೇಶಯೋಃ ಸದಾ ॥
ವೈಲಕ್ಷಣ್ಯಂ ಪರಂ ಜ್ಞಾತ್ವಾ ಮುಚ್ಯತೇ ಬಧ್ಯತೇsನ್ಯಥಾ । ಇತಿ ಚ

ಅನುವಾದ—(ಒಂಬತ್ತು ದೃಷ್ಟಾಂತಗಳೂ ಭೇದವನ್ನು ಹೇಳುವದರಿಂದ ‘ಸ ಆತ್ಮಾ ಅತತ್ ತ್ವಮಸಿ’ ಎಂಬುದನ್ನು ಭೇದಪರವಾಗಿಯೂ, ಅಭೇದನಿಷೇಧಪರವಾಗಿಯೂ ವ್ಯಾಖ್ಯಾನ ಮಾಡಿದಿರಿ ಆದರೆ ಈ ಶ್ರುತಿವಚನವನ್ನು ಬಿಟ್ಟು ಬೇರೆ ರೀತಿಯಿಂದ ಅಭೇದ ಅಥವಾ ಐಕ್ಯವು ಪ್ರಾಪ್ತವೇ ಆಗದಿರುವದರಿಂದ ಅದರ ನಿಷೇಧವನ್ನು ಹೇಗೆ ಮಾಡುವಿರಿ ಎಂಬ ಶಂಕೆಯನ್ನು ನಾಲ್ಕು ವಿಧವಾಗಿ ಪ್ರಾಪ್ತಿಯನ್ನು ತೋರಿಸಿ ಪರಿಹರಿಸುವರು)

ಸರ್ವಜೀವರು, ಪ್ರಾಣ ಅಂದರೆ ಇಂದ್ರಿಯಗಳು ಮತ್ತು ವಾಯುಗಳು, ಧೀ ಅಂದರೆ ಮನಸ್ಸು ಇವುಗಳಿಗೆ ಪ್ರೇರಕನಾದ ವಿಷ್ಣುವು ಜೀವರಿಗಿಂತ ಭಿನ್ನನಾಗಿದ್ದಾನೆ ಎಂಬುದನ್ನು ತಿಳಿಯದೆ ಮೂಢರು ದೇಹ, ಇಂದ್ರಿಯ, ವಾಯುಗಳು, ಮತ್ತು ಮನಸ್ಸುಗಳಿಗೆ ತಾವೇ ಸ್ವತಂತ್ರರಾಗಿ ಒಡೆಯರೆಂದು ತಿಳಿದು ಸಂಸಾರವನ್ನೂ ನಿತ್ಯನರಕವನ್ನೂ ಪಡೆಯುವರು. ಜೀವೇಶ್ವರಭೇದವನ್ನು ತಿಳಿದವರೇ ಮುಕ್ತರಾಗುವರು ಇಲ್ಲವಾದರೆ ಇಲ್ಲ (ಇಲ್ಲಿ ಸಾಮಾನ್ಯವಾಗಿ ಅಹಂಕಾರ ಮಮಕಾರಗಳಿಂದ ಐಕ್ಯಜ್ಞಾನದ ಪ್ರಾಪ್ತಿಯನ್ನು ತೋರಿಸಿರುವರು) 'ಸರ್ವಾನ್ ವೇದಾನ್ ಅಧೀತ್ಯ' ಇತ್ಯಾದಿಯಾದ ಶ್ರುತಿಯಲ್ಲಿ 'ಶ್ವೇತಕೇತು ಎಲ್ಲ ವೇದಗಳ ಅಧ್ಯಯನಮಾಡಿ ತಾನೇ ಎಲ್ಲವನ್ನೂ ಅಧ್ಯಯನಮಾಡಿದ್ದೇನೆ ಎಂಬ ಅಹಂಕಾರವುಳ್ಳವನಾಗಿ ಬಂದನು' ಎಂದು ಹೇಳಿದಂತೆ ತನಗಿಂತ ಭಿನ್ನನಾದ ತನಗೆ ವೇದಾಧ್ಯಯನ ಮಾಡಲು ಶಕ್ತಿಯನ್ನು ಕೊಟ್ಟ ಪರಮಾತ್ಮನನ್ನು ತಿಳಿಯದೇ ಅಹಂಕಾರವುಳ್ಳವನಾದಾಗ ಅವನಿಗೆ ಉಂಟಾದ ಅಹಂಕಾರವನ್ನು ನಿರಾಕರಿಸಿ ಪರಮಾತ್ಮನಿಷ್ಠೆಯನ್ನು (ಅತತ್ತ್ವಮಸಿ ಎಂಬಲ್ಲಿ) ಬೋಧಿಸಲಾಗಿದೆ (ಇಲ್ಲಿ ಶ್ವೇತಕೇತುವಿಗೆ ಉಪದೇಶಕ್ಕಿಂತ ಮೊದಲು ಐಕ್ಯಜ್ಞಾನದ ಪ್ರಾಪ್ತಿಯನ್ನು ತೋರಿಸಿರುವರು) 'ತದ್ಧ ಏಕೇ ಆಹುಃ ಅಸದೇವೇದಮ್ ಅಗ್ರೇ ಆಸೀತ್' ಕೆಲವರು ಸೃಷ್ಟಿಪೂರ್ವದಲ್ಲಿ ಎಲ್ಲವೂ ಶೂನ್ಯವಾಗಿತ್ತು ಎಂಬಲ್ಲಿಯಂತೆ ವಾದಿಪ್ರಸಿದ್ಧವಾದ ಐಕ್ಯವೂ (ಅತತ್ ತ್ವಮಸಿ) ಎಂಬಲ್ಲಿ ನಿರಾಕರಿಸಲ್ಪಟ್ಟಿದೆ (ಇಲ್ಲಿ ವಾದಿಪ್ರಸಿದ್ಧಿಯಿಂದ ಐಕ್ಯದ ಪ್ರಾಪ್ತಿಯನ್ನು ತೋರಿಸಿದ್ದಾರೆ) 'ಇಷ್ಟಾಪೂರ್ತಂ ಮನ್ಯಮಾನಾಃ ವರಿಷ್ಠಮ್' ಇತ್ಯಾದಿಯಾದ ಶ್ರುತಿಯಲ್ಲಿ "ಮೂಢರು ಈಶ್ವರವಿಷಯಕವಲ್ಲದ ಯಾಗಾದಿಗಳು ಮತ್ತು ಅನ್ನದಾನಾದಿಗಳನ್ನೇ ಪರಮಶ್ರೇಷ್ಠವೆಂದು ತಿಳಿಯುವರು. ಭಗವತ್ಪ್ರಸಾದಾದಿಗಳನ್ನು ಶ್ರೇಯಸ್ಸೆಂದು ತಿಳಿಯುವದಿಲ್ಲ" ಎಂಬಲ್ಲಿ ಶ್ರುತಿತಾತ್ಪರ್ಯವನ್ನು ತಿಳಿಯದೇ ಪ್ರವರ್ತಿಸುವವರನ್ನು ಪ್ರಸ್ತಾಪಿಸಿರುವಂತೆ (ಅಹಂ ಬ್ರಹ್ಮಾಸ್ಮಿ ಇತ್ಯಾದಿ ಶ್ರುತಿಗಳು ಅಂತರ್ಯಾಮಿಪರ ಎಂಬ) ಶ್ರುತಿಯ ತಾತ್ಪರ್ಯವನ್ನು ತಿಳಿಯದೆಯೂ ಐಕ್ಯವು ಪ್ರಾಪ್ತವಾಗುವದು (ಇಲ್ಲಿ ಶ್ರುತಿತಾತ್ಪರ್ಯದ ಅಜ್ಞಾನದಿಂದ ಐಕ್ಯಪ್ರಾಪ್ತಿಯನ್ನು ತೋರಿಸಿರುವರು) ಇದನ್ನು 'ಐಕಾತ್ಮ್ಯಂ ನಾಮ ಯದಿದಮ್' ಇತ್ಯಾದಿಯಾಗಿ (ಮೋಕ್ಷಧರ್ಮದ ವಚನವನ್ನು ಉಲ್ಲೇಖಿಸಿ) ಈಗಾಗಲೇ ತೋರಿಸಲಾಗಿದೆ

**ವಿವರಣೆ**—'ಸ ಆತ್ಮಾ ಅತತ್ ತ್ವಮಸಿ' ಎಂಬ ಶ್ರುತಿಯನ್ನು ಭೇದಪರವಾಗಿ ವ್ಯಾಖ್ಯಾನಮಾಡಿ ಐಕ್ಯವನ್ನು ನಿಷೇಧಿಸಬೇಕಾದರೆ ಐಕ್ಯದ ಪ್ರಾಪ್ತಿಯನ್ನು ತೋರಿಸಬೇಕಾಗುವದು ಅಪ್ರಾಪ್ತವಾದದ್ದರ ನಿಷೇಧವನ್ನು ಮಾಡಲಿಕ್ಕೆ ಬರುವದಿಲ್ಲ ಎಂದು ಅದ್ವೈತಿಗಳು ಆಕ್ಷೇಪಿಸುವರು. ಈ ಆಕ್ಷೇಪವನ್ನು ಇಲ್ಲಿ ಪರಿಹರಿಸಲಾಗಿದೆ. ಐಕ್ಯದ ಪ್ರಾಪ್ತಿಯನ್ನು ನಾಲ್ಕುವಿಧವಾಗಿ ತೋರಿಸಿದ್ದಾರೆ —

(೧) ಮೂಢರಾದವರು ತಾವೇ ತಮ್ಮ ದೇಹೇಂದ್ರಿಯಾದಿಗಳಿಗೆ ಪ್ರೇರಕರು ಎಂದು ತಿಳಿದು, ಇವುಗಳಿಗೆಲ್ಲ ಪ್ರೇರಕನಾಗಿ ಪರಮಾತ್ಮನಿದ್ದಾನೆ ಎಂಬುದನ್ನೂ ಅವನಿಗೂ ತಮಗೂ

ಇರುವ ಭೇದವನ್ನೂ ತಿಳಿಯದೇ ಇರುವದು ಈ ಸಾಮಾನ್ಯ ಅಜ್ಞಾನದಿಂದ ಪ್ರಾಪ್ತವಾದ ಐಕ್ಯವನ್ನು 'ಅತತ್ ತ್ವಮಸಿ' ಎಂದು ನಿರಾಕರಿಸಲಾಗಿದೆ

(೨) ಪ್ರಕೃತ ಸಂದರ್ಭದಲ್ಲಿ ಶ್ವೇತಕೇತುವು ತಾನೇ ಸಮಗ್ರ ವೇದಾಧ್ಯಯನವನ್ನು ಮಾಡಿದ್ದೇನೆ ಎಂಬ ಅಹಂಕಾರವುಳ್ಳವನಾಗಿ ತನಗೆ ಈ ಶಕ್ತಿಯನ್ನು ಕೊಟ್ಟ ಪರಮಾತ್ಮನನ್ನೂ, ಅವನೊಡನಿರುವ ಭೇದವನ್ನೂ ತಿಳಿಯದೇ ಇರುವದರಿಂದ ಪ್ರಾಪ್ತವಾದ ಐಕ್ಯವನ್ನು 'ಅತತ್ ತ್ವಮಸಿ' ಎಂದು ನಿರಾಕರಿಸಲಾಗಿದೆ

(೩) 'ಅಸದೇವೇದಮಗ್ರ ಆಸೀತ್' ಇತ್ಯಾದಿಯಾಗಿ ವಾದಿಪ್ರಸಿದ್ಧವಾದ ಐಕ್ಯವನ್ನು ನಿರಾಕರಿಸಲಾಗಿದೆ

(೪) 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಶ್ರುತಿಗಳ ಅಂತರ್ಯಾಮಿ ಪರವಾದ ಶ್ರುತಿ ತಾತ್ಪರ್ಯವನ್ನು ತಿಳಿಯದೇ ಪ್ರಾಪ್ತವಾದ ಐಕ್ಯವನ್ನು ನಿರಾಕರಿಸಲಾಗಿದೆ ಆದ್ದರಿಂದ ಪ್ರಾಪ್ತವೇ ಆಗದ ಐಕ್ಯವನ್ನು ಹೇಗೆ ನಿಷೇಧಿಸುವಿರಿ ಎಂಬ ಶಂಕೆಗೆ ಅವಕಾಶವಿಲ್ಲ

**ಛಾಂದೋಗ್ಯದ ಆರನೆಯ ಅಧ್ಯಾಯದ ಆರಂಭದಲ್ಲಿ ಪರಮಾತ್ಮನು ಉಪಾದಾನ ಕಾರಣ ಎಂದು ಹೇಳಿಲ್ಲ.**

**54. ತದ್ವಶತ್ವಜ್ಞಾಪನಾರ್ಥಂ ಚ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಸೃಷ್ಟಿಕಥನಮ್ । ಏಕವಿಜ್ಞಾನೇನ ಸರ್ವವಿಜ್ಞಾನಂ ಚ ಪ್ರಾಧಾನ್ಯಾತ್, ಕಿಂಚಿತ್ ಸಾದೃಶ್ಯಾತ್, ಕಾರಣತ್ವಾಚ್ಚ । ನ ತು ತದನ್ಯಸ್ಯ ಮಿಥ್ಯಾತ್ವಾತ್ । ನ ಹಿ ಸತ್ಯಜ್ಞಾನೇನ ಮಿಥ್ಯಾಜ್ಞಾನಂ ಭವತಿ ।**

ಅನುವಾದ—('ಆತ್ಮಾ ಅತತ್ ತ್ವಮಸಿ' ಎಂಬ ವಾಕ್ಯವಿರುವ ಛಾಂದೋಗ್ಯ-ಉಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಪೂರ್ವಾರ್ಧದಲ್ಲಿ ಬ್ರಹ್ಮನ ಜಗತ್ಕಾರಣತ್ವವನ್ನು ಹೇಳಿದೆ ಬ್ರಹ್ಮನು ನಿರ್ವಿಕಾರನಾದ್ದರಿಂದ ಅವನು ಪರಿಣಾಮಿ ಉಪಾದಾನಕಾರಣವಾಗುವಂತಿಲ್ಲ ವಿವರ್ತೋಪಾದಾನನೇ ಆಗಬೇಕು ಅಂದರೆ ಅವನು ಜಗತ್ತಿನ ಆರೋಪಕ್ಕೆ ಅಧಿಷ್ಠಾನನು, ಜಗತ್ತು ಮಿಥ್ಯೆ ಅಂದಂತಾಯಿತು ಇದರಿಂದ ಬ್ರಹ್ಮೈಕ್ಯವು ಸಿದ್ಧವಾದಂತಾಯಿತು. ಅಂದಮೇಲೆ ಇದೇ ಅಧ್ಯಾಯದ ಉತ್ತರಾರ್ಧದಲ್ಲಿ 'ಅತತ್ ತ್ವಮಸಿ' ಎಂದು ಭೇದವನ್ನು ಶ್ರುತಿಯು ಹೇಳಲಾರದು ಎಂಬ ಆಕ್ಷೇಪವನ್ನು ಇನ್ನು ಮುಂದೆ ಪರಿಹರಿಸುವರು )

'ಸದೇವ ಸೋಮ್ಯ ಇದಮಗ್ರ ಆಸೀತ್' ಇತ್ಯಾದಿಯಾಗಿ ಜಗತ್ಸೃಷ್ಟಿಯನ್ನು ಜಗತ್ತು ಪರಮಾತ್ಮನಿಗೆ ಅಧೀನವಾಗಿದೆ ಎಂಬುದನ್ನು ತೋರಿಸಲು ಹೇಳಿರುವರು. (ಇದು ಬ್ರಹ್ಮನು ಕರ್ತಾ ಅಥವಾ ನಿಮಿತ್ತಕಾರಣ ಎಂದು ಹೇಳಿದರೆ ಮಾತ್ರ ಹೊಂದುವದು. ಉಪಾದಾನ ಕಾರಣ ಎಂದು ಹೇಳಿದರೆ ಹೊಂದುವದಿಲ್ಲ ಘಟವು ಕುಲಾಲನಿಗೆ ಅಧೀನವಾಗಿರುತ್ತದೆ. ಮೃತ್ತಿಗೆ ಅಧೀನವಾಗಿರುವದಿಲ್ಲ ಮೃತ್ ಮತ್ತು ಘಟ ಎರಡೂ ಜಡವಾಗಿವೆ.

ಚೇತನನಿಗೆ ಅಧೀನವಾಗಿವೆ) ಏಕಜ್ಞಾನದಿಂದ ಸರ್ವವಿಜ್ಞಾನವು (ಬ್ರಹ್ಮನು) ಪ್ರಧಾನನಾಗಿರುವದರಿಂದಲೂ, ಜೀವಜಡಗಳು ಅವನಿಗೆ ಕಿಂಚಿತ್ ಸದೃಶವಾಗಿರುವದರಿಂದಲೂ, (ಬ್ರಹ್ಮನು) ನಿಮಿತ್ತಕಾರಣ ಅಥವಾ ಕರ್ತನಾಗಿರುವದರಿಂದಲೂ ಆಗುವದು (ಉಪಾದಾನಕಾರಣನಾಗಿರುವದರಿಂದ ಅಲ್ಲ) (ಅದ್ವೈತಿಗಳು ಬ್ರಹ್ಮನು ವಿವರ್ತೋಪಾದಾನಕಾರಣನಾದ್ದರಿಂದ, ಬ್ರಹ್ಮಾತಿರಿಕ್ತವಾದುದೆಲ್ಲ ಮಿಥ್ಯಾ ಆದ್ದರಿಂದ ಏಕವಿಜ್ಞಾನ ಅಂದರೆ ಬ್ರಹ್ಮವಿಜ್ಞಾನದಿಂದ ಸರ್ವವಿಜ್ಞಾನ ಎಂದು ಹೇಳುವರು ಇದು ಸರಿಯಲ್ಲ ) ಬ್ರಹ್ಮಾತಿರಿಕ್ತವಾದುದೆಲ್ಲ ಮಿಥ್ಯಾ ಆದ್ದರಿಂದ ಬ್ರಹ್ಮಜ್ಞಾನದಿಂದ ಸರ್ವವಿಜ್ಞಾನ ಎಂಬುದು ಸರಿಯಲ್ಲ ಯಾಕಂದರೆ ಸತ್ಯವಾದದ್ದರ ಜ್ಞಾನದಿಂದ ಮಿಥ್ಯಾ ಆದದ್ದರ ಜ್ಞಾನವಾಗಲಾರದು. (ಅದ್ವೈತಮತದಲ್ಲಿ ಬ್ರಹ್ಮನು ಸತ್ಯ, ಜಗತ್ತು ಮಿಥ್ಯೆ, ಈ ಮಿಥ್ಯಾ ಜಗತ್ತಿಗೆ ಆರೋಪಾಧಿಷ್ಠಾನನಾಗಿ ವಿವರ್ತೋಪಾದಾನಕಾರಣನಾದ ಬ್ರಹ್ಮಜ್ಞಾನದಿಂದ ಸರ್ವಜ್ಞಾನ ಎಂದು ಹೇಳುವರು. ಇದು ಸರಿಯಲ್ಲ ಯಾಕಂದರೆ ಬ್ರಹ್ಮನು ಸತ್ಯನು, ಜಗತ್ತು ಮಿಥ್ಯೆಯು ಸತ್ಯಜ್ಞಾನದಿಂದ ಮಿಥ್ಯಾಜ್ಞಾನವಾಗುವದು ಎಲ್ಲಿಯೂ ಕಂಡುಬಂದಿಲ್ಲ ಆದ್ದರಿಂದ ಸತ್ಯನಾದ ಬ್ರಹ್ಮನ ಜ್ಞಾನದಿಂದ ಮಿಥ್ಯಾಭೂತವಾದ ಜಗತ್ತಿನ ಜ್ಞಾನವಾಗಲಾರದು)

**ವಿವರಣೆ**—'ಸದೇವ ಸೋಮ್ಯೇದಮಗ್ರ ಆಸೀತ್' ಎಂಬಲ್ಲಿ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನು ಎಂಬುದನ್ನು ಪ್ರತಿಪಾದಿಸಿದೆ ಎಂದು ಅದ್ವೈತಿಗಳ ವಾದ ಈ ಉಪಾದಾನಕಾರಣತ್ವವೂ ಘಟಕ್ಕೆ 'ಮೃತ್' ಉಪಾದಾನಕಾರಣವಾಗಿರುವಂತೆ ಪರಿಣಾಮಿ ಉಪಾದಾನಕಾರಣವಲ್ಲ ಯಾಕಂದರೆ ನಿರ್ವಿಕಾರನಾದ ಬ್ರಹ್ಮನಿಗೆ ವಿಕಾರವಿಲ್ಲ ಆದ್ದರಿಂದ ಶುಕ್ತಿರಜತಕ್ಕೆ ಶುಕ್ತಿಯು ಆರೋಪಾಧಿಷ್ಠಾನವಾಗಿದ್ದು ವಿವರ್ತೋಪಾದಾನವಾಗಿರುವಂತೆ ಬ್ರಹ್ಮನು ಜಗತ್ತಿನ ಆರೋಪಕ್ಕೆ ಅಧಿಷ್ಠಾನನಾಗಿದ್ದು ಅದಕ್ಕೆ ವಿವರ್ತೋಪಾದಾನಕಾರಣನಾಗಿದ್ದಾನೆ. ಹೀಗೆ ಉಪಾದಾನಕಾರಣನಾದ್ದರಿಂದ ಕಾರಣನಾದ ಬ್ರಹ್ಮನ ಜ್ಞಾನದಿಂದ ಕಾರ್ಯವಾದ ಜಗತ್ತಿನ ಜ್ಞಾನವಾಗುವದು ಇದೇ ಏಕವಿಜ್ಞಾನದಿಂದ ಸರ್ವವಿಜ್ಞಾನವು ಎಂದು ಅದ್ವೈತಿಗಳ ವಾದ ಬ್ರಹ್ಮಾತಿರಿಕ್ತವಾದ ಜಗತ್ತೇ ಇಲ್ಲದ್ದರಿಂದ ಬ್ರಹ್ಮಜ್ಞಾನವೇ ಸರ್ವಜ್ಞಾನ ಎಂದು ಅವರ ಅಭಿಪ್ರಾಯ ಹೀಗೆ ಬ್ರಹ್ಮನ ಉಪಾದಾನಕಾರಣತ್ವವನ್ನು ಪ್ರತಿಪಾದಿಸಿ ಐಕ್ಯವನ್ನು ಛಾಂದೋಗ್ಯದ ಆರನೆಯ ಅಧ್ಯಾಯದ ಪೂರ್ವಾರ್ಧದಲ್ಲಿ ಪ್ರತಿಪಾದಿಸಿದ್ದರಿಂದ ಅದೇ ಅಧ್ಯಾಯದ ಉತ್ತರಾರ್ಧದಲ್ಲಿ 'ಅತತ್ ತ್ವಮಸಿ' ಎಂದು ಶ್ರುತಿಯು ಭೇದವನ್ನು ಪ್ರತಿಪಾದಿಸಲಾರದು ಎಂದೂ ಅವರ ವಾದ

ಈ ಮೇಲಿನ ವಾದ ಸರಿಯಲ್ಲ 'ಸದೇಹ ಸೋಮ್ಯೇದಮಗ್ರ ಆಸೀತ್' ಎಂಬಲ್ಲಿ ಬ್ರಹ್ಮನ ಉಪಾದಾನಕಾರಣತ್ವವನ್ನು ಹೇಳಿಲ್ಲ. ಆದರೆ ಅವನ ಕರ್ತೃತ್ವವನ್ನು ಹೇಳಿದೆ. 'ಸದೇವ ಸೋಮ್ಯ' ಇತ್ಯಾದಿಯಾಗಿ ಸೃಷ್ಟಿ ಪ್ರಕ್ರಿಯೆಯನ್ನು ವಿವರಿಸುತ್ತ 'ತದೈಕ್ಷತ, ತತ್ತೇಜೋ ಅಸೃಜತ' ಇತ್ಯಾದಿಯಾಗಿ ಇಚ್ಛಾಪೂರ್ವಕ ಸೃಷ್ಟಿಯನ್ನು ಹೇಳಲಾಗಿದೆ. ಉಪಾದಾನಕಾರಣವಾದ 'ಮೃತ್' ಇಚ್ಛಾಪೂರ್ವಕಸೃಷ್ಟಿಯನ್ನು ಮಾಡಲಾರದು.

ನಿಮಿತ್ತಕಾರಣ ಅಂದರೆ ಕರ್ತೃವಾದ ಕುಲಾಲನೇ ಹಾಗೆ ಮಾಡಬಲ್ಲನು ಆದ್ದರಿಂದ ಇಲ್ಲಿ ಇಚ್ಛಾಪೂರ್ವಕಸೃಷ್ಟಿಯನ್ನು ಮಾಡಬಲ್ಲ ಕರ್ತೃವನ್ನು ಹೇಳುವದೇ ಶ್ರುತಿಗೆ ಅಭಿಪ್ರೇತ ವಾಗಿದೆ ಉಪಾದಾನಕಾರಣವನ್ನು ಹೇಳುವದಲ್ಲ ಇದನ್ನು ಹೇಳುವ ಉದ್ದೇಶವು ಹೀಗೆ ಸೃಷ್ಟವಾದ ಜಗತ್ತು ಸೃಷ್ಟಿಕರ್ತನಾದ ಪರಮಾತ್ಮನಿಗೆ ಅಧೀನವಾಗಿದೆ ಎಂದು ತಿಳಿಸುವದೇ ಆಗಿದೆ ಅಂದಮೇಲೆ ಆರನೆಯ ಅಧ್ಯಾಯದ ಈ ಪೂರ್ವಾರ್ಧದಲ್ಲಿ ಬ್ರಹ್ಮನ ಉಪಾದಾನ ಕಾರಣತ್ವವನ್ನೇ ಹೇಳದೇ ಇರುವದರಿಂದ ತನ್ಮೂಲಕವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನ ಮತ್ತು ಐಕ್ಯಗಳನ್ನು ಇಲ್ಲಿ ಪ್ರತಿಪಾದಿಸುವ ಪ್ರಸಕ್ತಿಯೇ ಇಲ್ಲ ಆದ್ದರಿಂದ ಉತ್ತರಾರ್ಧದಲ್ಲಿ ಪ್ರತಿಪಾದಿಸಿದ ಭೇದವು ಅದಕ್ಕೆ ವಿರುದ್ಧವಾಗುವ ಪ್ರಸಕ್ತಿಯೇ ಇಲ್ಲ

ಇಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನಪ್ರತಿಪಾದನೆಯನ್ನು ಉಪಾದಾನಕಾರಣತ್ವದ ಪ್ರಸಕ್ತಿಯಿಲ್ಲದೆಯೇ ಈ ಕೆಳಗಿನ ಮೂರು ರೀತಿಯಿಂದ ವಿವರಿಸಲಾಗಿದೆ —

(೧) ಪರಮಾತ್ಮನು ಪ್ರಧಾನನು ಜಗತ್ತು ಅಪ್ರಧಾನವು. ಪ್ರಧಾನದ ಜ್ಞಾನ ವಾದರೆ ಅಪ್ರಧಾನದ ಜ್ಞಾನದಿಂದುಂಟಾಗುವ ಫಲವು ಗತಾರ್ಥವೇ ಆಗುತ್ತದೆ ಹೀಗೆ ಪ್ರಧಾನವಾದ ಏಕದ ವಿಜ್ಞಾನದಿಂದ ಅಪ್ರಧಾನವಾದ ಎಲ್ಲದರ ವಿಜ್ಞಾನವಾಗುತ್ತದೆ ಎಂಬುದು ಒಂದು ವಿವರಣೆ

(೨) ಜಗತ್ತು ಸತ್ತಾದಿಗಳುಳ್ಳದ್ದಾಗಿ ಪರಮಾತ್ಮನಿಗೆ ಕಿಂಚಿತ್ ಸದೃಶವಾಗಿದೆ. ಆದ್ದರಿಂದ ಸದೃಶವಾದ ಏಕವಿಜ್ಞಾನ ಅಂದರೆ ಪರಮಾತ್ಮನ ಜ್ಞಾನದಿಂದ ಅವನಿಗೆ ಕಿಂಚಿತ್ ಸದೃಶವಾದ ಸರ್ವದ ಅಂದರೆ ಜಗತ್ತಿನ ಜ್ಞಾನವಾಗುವದು ಎಂಬುದು ಎರಡನೆಯ ವಿವರಣೆ.

(೩) ಪರಮಾತ್ಮನು ಜಗತ್ತಿಗೆ ಕರ್ತಾ ಅಂದರೆ ನಿಮಿತ್ತಕಾರಣ, ಜಗತ್ತು ಕಾರ್ಯ. ಕಾರಣನಾದ ಪರಮಾತ್ಮನ ಜ್ಞಾನದಿಂದ ಕಾರ್ಯವಾದ ಜಗತ್ತಿನ ಜ್ಞಾನವಾಗುವದು ಎಂಬುದು ಮೂರನೆಯ ವಿವರಣೆ (ಇವುಗಳಿಗೆ ಶ್ರುತಿಯಲ್ಲಿ ಕೊಟ್ಟ ದೃಷ್ಟಾಂತಗಳನ್ನು ಮುಂದೆ ವಿವರಿಸುವರು)

ಹೀಗೆ ಉಪಾದಾನತ್ವದ ಪ್ರಸಕ್ತಿಯಿಲ್ಲದೆಯೇ ಏಕವಿಜ್ಞಾನದಿಂದ ಸರ್ವವಿಜ್ಞಾನ ವನ್ನು ವಿವರಿಸುವದೇ ಯುಕ್ತವು ಅದ್ವೈತಿಗಳು ಹೇಳುವಂತೆ ಬ್ರಹ್ಮಾತಿರಿಕ್ತವಾದದ್ದೆಲ್ಲ ಮಿಥ್ಯಾ ಎಂದು ಹೇಳಿ ವಿವರಿಸುವದು ಉಚಿತವಲ್ಲ ಯಾಕಂದರೆ ಹಾಗೆ ಹೇಳಿದರೆ ಸತ್ಯನಾದ ಬ್ರಹ್ಮನ ಜ್ಞಾನದಿಂದ ಮಿಥ್ಯಾಭೂತವಾದ ಜಗತ್ತಿನ ಜ್ಞಾನ ಎಂದು ಹೇಳಿದಂತಾಗುವದು ಸತ್ಯವಾದ ವಸ್ತುವಿನ ಜ್ಞಾನದಿಂದ ಮಿಥ್ಯಾಭೂತವಾದ ವಸ್ತುವಿನ ಜ್ಞಾನವಾಗುವದು ಸಾಧ್ಯವಿಲ್ಲ.

**ಅಧಿಷ್ಠಾನಜ್ಞಾನದಿಂದ ಆರೋಪಿತವಾದದ್ದರ ಜ್ಞಾನವಾಗುವದಿಲ್ಲ.**

**55. ನಹಿ ಶುಕ್ತಿಜ್ಞಃ ರಜತಜ್ಞ ಇತ್ಯುಚ್ಯತೇ । ವಿರೋಧಾತ್ ತಯೋಃ ಜ್ಞಾನಯೋಃ 'ನೇದಂ ರಜತಮ್' ಇತಿ ಅರಜತಜ್ಞೋ ಹಿ ಶುಕ್ತಿಜ್ಞೋ ಭವತಿ ।**

**ರಜತಜ್ಞ ಶ್ಚೇತ್ ನ ಶುಕ್ತಿಜ್ಞಃ । ನ ಹಿ ತಜ್ಞಃ ತದಭಾವಜ್ಞೋ ಭವತಿ । ತದಭಾವಸ್ಯ ತಜ್ಞಾನಪೂರ್ವಕತ್ವಂ ಚ ಅನ್ಯತ್ರ ತಸ್ಯ ಸತ್ತ್ವಾದೇವ ದೃಷ್ಟೇಃ । ತದನಂಗೀಕಾರೇ ತದೇವ ನ ಯುಜ್ಯತೇ ।**

**ಅನುವಾದ**—(ಸತ್ಯಜ್ಞಾನದಿಂದ ಮಿಥ್ಯಾಜ್ಞಾನವಾಗುವದಿಲ್ಲ ಎಂಬುದನ್ನು ಇನ್ನಷ್ಟು ವಿವರಿಸುವರು) (ಅಧಿಷ್ಠಾನವಾದ) ಶುಕ್ತಿಯನ್ನು ತಿಳಿದುಕೊಂಡವನು (ಆರೋಪಿತವಾದ) ರಜತಜ್ಞಾನವುಳ್ಳವನು ಆಗಲಾರನು ಅವೆರಡು ಪರಸ್ಪರ ವಿರುದ್ಧವಾದ ಜ್ಞಾನಗಳು (ಅಧಿಷ್ಠಾನದ ಜ್ಞಾನವಿದ್ದವನಿಗೆ ಆರೋಪದ ಜ್ಞಾನವಿರಲಾರದು. ಆರೋಪದ ಜ್ಞಾನ ವಿದ್ದವನಿಗೆ ಅಧಿಷ್ಠಾನದ ಜ್ಞಾನವಿರಲಾರದು) 'ಇದು ರಜತವಲ್ಲ' ಎಂದು ಆರೋಪಿತ ವಾದ ರಜತವನ್ನು ಕಾಣದಿದ್ದವನೇ (ಅಧಿಷ್ಠಾನವಾದ) ಶುಕ್ತಿಯನ್ನು ಕಾಣಬಲ್ಲನು (ಆರೋಪಿತವಾದ) ರಜತವನ್ನು ಕಂಡವನು (ಅಧಿಷ್ಠಾನವಾದ) ಶುಕ್ತಿಯನ್ನು ಕಾಣಲಾರ ಒಂದು ವಸ್ತುವನ್ನು ಕಂಡವನು ಅದರ ಅಭಾವವನ್ನು (ಅದೇ ದೇಶಕಾಲಗಳಲ್ಲಿ) ಕಾಣಲಾರ (ಆದ್ದರಿಂದ ಶುಕ್ತಿ ಮತ್ತು ರಜತಗಳು ಪರಸ್ಪರರ ಅನ್ಯೋನ್ಯಾಭಾವರೂಪವಾದ್ದರಿಂದ ಒಂದನ್ನು ಕಂಡಾಗ ಅದೇ ದೇಶಕಾಲಗಳಲ್ಲಿ ಇನ್ನೊಂದನ್ನು ಕಾಣಲಾರ) ಒಂದು ವಸ್ತುವಿನ ಅಭಾವದ ಜ್ಞಾನವು ಆ ವಸ್ತುಜ್ಞಾನಪೂರ್ವಕ ಎಂಬುದು (ಅಂದರೆ ಅಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನ ಬೇಕು ಎಂಬುದು) ಆ ವಸ್ತುವು ದೇಶಾಂತರ ಕಾಲಾಂತರದಲ್ಲಿ ಇರಬೇಕೆಂಬುದೇ ಆಗಿದೆ ಹೀಗೆ ಅಂಗೀಕರಿಸದೇ ಇದ್ದರೆ (ಅಂದರೆ ಅಭಾವಜ್ಞಾನಕ್ಕೆ ದೇಶಾಂತರ ಕಾಲಾಂತರದಲ್ಲಿರುವ ಪ್ರತಿಯೋಗಿ ಜ್ಞಾನ ಅಗತ್ಯ ಎಂದು ಅಂಗೀಕರಿಸದೇ ಇದ್ದರೆ, ಅದೇ ದೇಶ ಅದೇ ಕಾಲದಲ್ಲಿ ಪ್ರತಿಯೋಗಿಯಿರಬೇಕೆಂದು ಆಗ್ರಹಪಟ್ಟರೆ) ಆ ವಸ್ತುವಿನ ಅಭಾವಜ್ಞಾನವೇ ಆಗಲಾರದು (ಆದ್ದರಿಂದ ಪರಸ್ಪರ ಅನ್ಯೋನ್ಯಾಭಾವ ರೂಪವಾದ ಶುಕ್ತಿಜ್ಞಾನ ಮತ್ತು ರಜತಜ್ಞಾನ ಒಬ್ಬನಿಗೇ ಆಗಲಾರವು ಆದ್ದರಿಂದ ಸತ್ಯವಾದ ಶುಕ್ತಿರೂಪ ಉಪಾದಾನ ಕಾರಣಜ್ಞಾನದಿಂದ ಮಿಥ್ಯಾಭೂತವಾದ ರಜತರೂಪ ಕಾರ್ಯಜ್ಞಾನವಾಗಲಾರದು ಆದ್ದರಿಂದ ಬ್ರಹ್ಮ ಮತ್ತು ಜಗತ್ತಿನ ವಿವರ್ತೋಪಾ ದಾನೋಪಾದೇಯಭಾವದಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಪಾದಿಸಲು ಬರುವದಿಲ್ಲ)

**ವಿವರಣೆ**—ಅದ್ವೈತಿಗಳು ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನು ಎಂದು ಹೇಳಿ ಉಪಾದಾನಕಾರಣನಾದ ಬ್ರಹ್ಮನ ಜ್ಞಾನದಿಂದ ಜಗತ್ತಿನ ಜ್ಞಾನವಾಗುತ್ತದೆ ಎಂಬರ್ಥದಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ವಿವರಿಸುವರು ಅವರು ಹೇಳುವ ಈ ಉಪಾದಾನ-ಉಪಾದೇಯಭಾವ ವಿವರ್ತೋಪಾದಾನ-ಉಪಾದೇಯಭಾವ ಮೃತ್ ಮತ್ತು ಘಟಗಳಂತೆ ಪರಿಣಾಮಿ ಉಪಾದಾನ-ಉಪಾದೇಯಭಾವವಲ್ಲ ವಿವರ್ತೋಪಾದಾನ-ಉಪಾದೇಯ ಭಾವವು ಶುಕ್ತಿ-ರಜತಗಳಿಗಿರುವಂಥ ಉಪಾದಾನ-ಉಪಾದೇಯಭಾವವು ಇದರಲ್ಲಿ ಶುಕ್ತಿಯು ಅಧಿಷ್ಠಾನ, ರಜತವು ಆರೋಪಿತ. ಆರೋಪಿತಕ್ಕೆ ಅಧಿಷ್ಠಾನವು ಉಪಾದಾನ

ಕಾರಣ ಇದರಂತೆಯೇ ಬ್ರಹ್ಮನು ಅಧಿಷ್ಠಾನ, ಜಗತ್ತು ಆರೋಪಿತ ಇಂಥ ಉಪಾದಾನ ಜ್ಞಾನದಿಂದ ಉಪಾದೇಯಜ್ಞಾನವಾಗಬೇಕೆಂದರೆ ಅಧಿಷ್ಠಾನಜ್ಞಾನದಿಂದ ಆರೋಪಿತದ ಜ್ಞಾನವಾಗಬೇಕು ಆದರೆ ಅಧಿಷ್ಠಾನವಾದ ಶಕ್ತಿಯು ಶುಕ್ತಿಯೆಂದು ಜ್ಞಾನವಿದ್ದವರಿಗೆ ರಜತದ ಆರೋಪವಿರುವದಿಲ್ಲ ಆರೋಪಿತವಾದ ರಜತದ ಜ್ಞಾನವಿದ್ದವರಿಗೆ ಶುಕ್ತಿಯು ಜ್ಞಾನವಿರುವದಿಲ್ಲ ಎಂಬುದು ಅನುಭವಸಿದ್ಧವಾದುದು ಈ ಜ್ಞಾನಗಳು ಪರಸ್ಪರ ವಿರುದ್ಧ ವಾದವುಗಳು ಅಂದರೆ ಒಂದು ಇದ್ದಾಗ ಇನ್ನೊಂದು ಇರದಂಥ ಸ್ವಭಾವದವು ಆದ್ದರಿಂದ ಅಧಿಷ್ಠಾನವಾದ ಬ್ರಹ್ಮನ ಜ್ಞಾನವಿದ್ದರೆ ಆರೋಪಿತವಾದ ಜಗತ್ತಿನ ಜ್ಞಾನವಿರಲಾರದು. ಆರೋಪಿತವಾದ ಜಗತ್ತಿನ ಜ್ಞಾನವಿದ್ದರೆ ಅಧಿಷ್ಠಾನವಾದ ಬ್ರಹ್ಮನ ಜ್ಞಾನವಿರಲಾರದು ಆದ್ದರಿಂದ ಸತ್ಯವಾದ ಬ್ರಹ್ಮನ ಜ್ಞಾನದಿಂದ ಮಿಥ್ಯಾಭೂತವಾದ ಜಗತ್ತಿನ ಜ್ಞಾನವಾಗ ಲಾರದು ಆದ್ದರಿಂದ ಉಪಾದಾನವಾದ ಬ್ರಹ್ಮನ ಜ್ಞಾನವೆಂಬ ಏಕವಿಜ್ಞಾನದಿಂದ ಉಪಾ-ದೇಯವಾದ ಮಿಥ್ಯಾಜಗತ್ತಿನ ಸರ್ವವಿಜ್ಞಾನವಾಗುವದೆಂಬ ಅದ್ವೈತಿಗಳ ವಿವರಣೆಯು ಸಮಂಜಸವಲ್ಲ

**ಪ್ರಾಧಾನ್ಯ, ಕಾರಣತ್ವ, ಸಾದೃಶ್ಯಮೂಲಕವಾಗಿಯೇ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳಲಾಗಿದೆ.**

**56. ಪ್ರಧಾನಜ್ಞಾನಾತ್ ಅಪ್ರಧಾನಸ್ಯ ಜ್ಞಾನವತ್ ವ್ಯಪದೇಶಃ ಅಸ್ತ್ಯೇವ। ಯಥಾ ಪ್ರಧಾನಪುರುಷಾಣಾಂ ಜ್ಞಾನಾಹ್ವಾನನಾಶದ್ಯೈಃ ಗ್ರಾಮಃ ಜ್ಞಾತಃ ಆಹೂತಃ ನಾಶಿತಃ ಇತಿ ವ್ಯಪದೇಶಃ। ಕಾರಣೇ ಚ ಪಿತರಿ ಜ್ಞಾತೇ ಪುತ್ರೋ ಜ್ಞಾತಃ ಇತಿ ಜಾನಾಮಿ ಏನಮಸ್ಯ ಪುತ್ರಃ ಅಯಮಿತಿ ವ್ಯಪದೇಶಃ ಇತಿ। ಏವಮತ್ರಾಪಿ ಏತತ್ಸೃಷ್ಟಂ ಸರ್ವಮಿತ್ಯಾದಿ। ಸಾದೃಶ್ಯಾಚ್ಚ ಏಕಸ್ತ್ರೀಜ್ಞಾನಾದನ್ಯ-ಸ್ತ್ರೀಜ್ಞಾನಮಿತಿ।**

**ಅನುವಾದ**—(ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಅದ್ವೈತರೀತ್ಯಾ ವಿವರಿಸು ವದನ್ನು ನಿರಾಕರಿಸಿದ ಮೇಲೆ, ಸ್ವಮತರೀತ್ಯಾ ಮೂರು ವಿಧವಾಗಿ ವಿವರಿಸಿದ್ದನ್ನು ಇನ್ನಷ್ಟು ಸ್ಪಷ್ಟೀಕರಿಸುವರು ) ಪ್ರಧಾನವಾದದ್ದರ ಜ್ಞಾನದಿಂದ ಅಪ್ರಧಾನವಾದದ್ದರ ಜ್ಞಾನದ ಫಲವು ಗತಾರ್ಥವು ಎಂಬ ರೀತಿಯ ಪ್ರಯೋಗಗಳು ಇರುವವು ಉದಾಹರಣೆಗೆ (ಒಂದು ಗ್ರಾಮದಲ್ಲಿಯ) ಪ್ರಧಾನಪುರುಷರ ಜ್ಞಾನ, ಆಹ್ವಾನ ಅಥವಾ ವಿನಾಶವಾದಾಗ ಆ ಗ್ರಾಮದ್ದೇ ಜ್ಞಾನ, ಆಹ್ವಾನ ಅಥವಾ ವಿನಾಶವಾಯಿತೆಂಬ ಪ್ರಯೋಗ ಕಂಡುಬರು ತ್ತದೆ. (ಹೀಗೆಯೇ ಪ್ರಧಾನನಾದ ಪರಮಾತ್ಮನ ಜ್ಞಾನದಿಂದ ಇನ್ನಿತರ ಸರ್ವದ ಜ್ಞಾನವು ಗತಾರ್ಥವಾಯಿತು ಎಂಬರ್ಥದಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳಲಾಗಿದೆ). ಕಾರಣನಾದ ತಂದೆಯ ಜ್ಞಾನದಿಂದ ಪುತ್ರನ ಜ್ಞಾನವಾದದ್ದರ ' ಇವನು ಇಂಥವನ ಮಗ ನೆಂದು ಬಲ್ಲೆನು ' ಎಂಬ ಪ್ರಯೋಗವಿರುವದು (ಹೀಗೆಯೇ ಸೃಷ್ಟಿಕರ್ತನಾದ ಪರಮಾತ್ಮನ ಜ್ಞಾನದಿಂದ) ಇನ್ನಿತರ ಸರ್ವಜಗತ್ತು ಅವನಿಂದ ಸೃಷ್ಟವಾದದ್ದು ಎಂದು ತಿಳಿದು

(ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುವದನ್ನು ಹೇಳಲಾಗಿದೆ.) ಸಾದೃಶದಿಂದ ಏಕಸ್ತ್ರೀ-ಜ್ಞಾನದಿಂದ (ಇವಳಂತೆ ಸ್ತನಕೇಶಾದಿಗಳುಳ್ಳವರೆಲ್ಲ ಸ್ತ್ರೀಯರು ಎಂದು) ಇತರ ಸ್ತ್ರೀಯರ ಜ್ಞಾನವಾಗುವದು (ಹೀಗೆ ಪರಮಾತ್ಮನು ಸತ್ಯನೆಂಬ ಜ್ಞಾನದಿಂದ ಪ್ರಾಮಾಣಿಕತ್ವಾದಿ ವಿಷಯದಲ್ಲಿ ಅವನೊಡನೆ ಸಾದೃಶ್ಯವನ್ನು ಪಡೆದ ಜಗತ್ತು ಸತ್ಯವೆಂಬ, ಚಿತ್ತ್ವ ಮತ್ತು ಆನಂದಗಳಲ್ಲಿ ಸಾದೃಶ್ಯವನ್ನು ಪಡೆದ ಜೀವರ ಜ್ಞಾನವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುವದು)

**ವಿವರಣೆ**—ಪ್ರಧಾನಜ್ಞಾನದಿಂದ ಅಪ್ರಧಾನಜ್ಞಾನ, ಸದೃಶವಾದವುಗಳಲ್ಲಿ ಒಂದರ ಜ್ಞಾನದಿಂದ ಉಳಿದವುಗಳ ಜ್ಞಾನ, ನಿಮಿತ್ತಕಾರಣ ಅಥವಾ ಕರ್ತೃವಿನ ಜ್ಞಾನದಿಂದ ಕಾರ್ಯಜ್ಞಾನ ಈ ಮೂರು ಅರ್ಥದಲ್ಲಿ ಸ್ವಮತರೀತ್ಯಾ ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂದು ಮೇಲೆ ಹೇಳಿರುವರು ಆದರೆ ಲೋಕದಲ್ಲಿ ಪ್ರಧಾನನಾದ ರಾಜನ ಜ್ಞಾನವಾದರೂ ಭೃತ್ಯನ ಜ್ಞಾನವಾಗುವದಿಲ್ಲ ಸದೃಶವಾದ ಗೋಜ್ಞಾನವಿದ್ದರೂ (ಗವಯವನ್ನು ಪ್ರತ್ಯಕ್ಷವಾಗಿ ನೋಡದೆ) ಗವಯಜ್ಞಾನವಿರುವದಿಲ್ಲ ಕರ್ತನಾದ ಕುಲಾಲನ ಜ್ಞಾನವಿದ್ದರೂ ಕಾರ್ಯವಾದ (ಘಟವನ್ನೇ ನೋಡದೆ) ಘಟಜ್ಞಾನವಿರುವದಿಲ್ಲ ಆದ್ದರಿಂದ ಈ ಮೂರು ಪ್ರಕಾರಗಳಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಗೆ ಸಮರ್ಥಿಸುವಿರಿ ಎಂಬ ಶಂಕೆಗೆ ಪರಿಹಾರರೂಪವಾಗಿ ಈ ಮೂರೂ ರೀತಿಗಳನ್ನು ವಿವರಿಸುತ್ತಾರೆ ಪ್ರಧಾನಜ್ಞಾನದಿಂದ ಅಪ್ರಧಾನಜ್ಞಾನವೆಂದರೆ ಅಪ್ರಧಾನಜ್ಞಾನದಿಂದ ಯಾವ ಪ್ರಯೋಜನಗಳು ದೊರೆಯುವವೋ ಅವುಗಳನ್ನು ಪ್ರಧಾನಜ್ಞಾನದಿಂದಲೇ ಪಡೆಯುವದು ಕರ್ಮದೇವತಾದಿಗಳ ಶ್ರವಣಮನನಾದಿಗಳಿಂದ ಯಾವ ಫಲಗಳು ದೊರೆಯುವವೋ ಅವುಗಳನ್ನೂ ಅದಕ್ಕಿಂತ ಹೆಚ್ಚಿನ ಫಲವನ್ನೂ ಪಡೆಯುವದೇ ಪ್ರಧಾನನಾದ ಪರಮಾತ್ಮನ ಜ್ಞಾನದಿಂದ ಅಪ್ರಧಾನವಾದ ಕರ್ಮದೇವತಾದಿಗಳ ಜ್ಞಾನದ ಫಲವನ್ನು ಪಡೆಯುವದು ಇದು ಒಂದು ವಿಧವಾದ ಏಕಜ್ಞಾನದಿಂದ ಸರ್ವವಿಜ್ಞಾನವು ಇಂಥ ಫಲಪರ್ಯವಸಾಯಿಯಾದ ಪ್ರಯೋಗಗಳು ಲೋಕದಲ್ಲಿಯೂ ಇರುವವು. ಊರಲ್ಲಿಯ ಕೆಲವು ಪ್ರಮುಖರನ್ನು ಬಲ್ಲರೆ ಊರನ್ನೇ ಬಲ್ಲಂತೆ ಇತ್ಯಾದಿಯಾದ ಪ್ರಯೋಗಗಳಿವೆ

ನಿಮಿತ್ತಕಾರಣ ಅಥವಾ ಕರ್ತೃವಿನ ಜ್ಞಾನದಿಂದ ಕಾರ್ಯದ ಜ್ಞಾನವನ್ನು ಪಡೆಯುವದೆಂದರೆ ಇವನು ಇಂಥದರ ಕರ್ತೃವೆಂದು ತಿಳಿಯುವದರಿಂದ ಅದು ಅವನ ಕಾರ್ಯ ಎಂದು ತಿಳಿಯುವದು. ಪರಮಾತ್ಮನು ಜಗತ್ಸೃಷ್ಟಿಕರ್ತಾ ಎಂದು ತಿಳಿಯುವದು ಮುಮುಕ್ಷುವಿಗೆ ಹೆಚ್ಚು ಪ್ರಯೋಜನಕಾರಿಯಾದುದು. ಇದರಿಂದ ಅವನು ಸೃಷ್ಟಿಸಿದ ಜಗತ್ತು ತಿಳಿದೇ ತಿಳಿಯುವದು. ಭಗವಂತನ ಸೃಷ್ಟಿ ಎಂದು ತಿಳಿದುಕೊಳ್ಳದೇ ಕೇವಲ ಜಗತ್ತಿನ ಸ್ವರೂಪವನ್ನು ತಿಳಿದುಕೊಳ್ಳುವದರಿಂದ ಯಾವ ಪ್ರಯೋಜನವೂ ಇಲ್ಲ. ಯಜ್ಞದತ್ತನು ದೇವದತ್ತನ ತಂದೆ ಎಂದು ತಿಳಿದರೆ ದೇವದತ್ತನು ಯಜ್ಞದತ್ತನ ಮಗನು ಎಂಬುದು ತಿಳಿದೇ ತಿಳಿಯುವದು. ಹೀಗೆ ಪರಮಾತ್ಮನು ಸೃಷ್ಟಿಕರ್ತನು ಎಂಬುದನ್ನು

ತಿಳಿದು ಅವನಿಂದ ಸೃಷ್ಟವಾದ ಜಗತ್ತನ್ನು ತಿಳಿಯುವದು ಇನ್ನೊಂದು ವಿಧವಾದ ಏಕವಿಜ್ಞಾನದಿಂದ ಸರ್ವವಿಜ್ಞಾನವು.

ಪರಮಾತ್ಮನಿಂದ ಸತ್ತಾದಿ ವಿಷಯದಲ್ಲಿ ಸಾದೃಶ್ಯವನ್ನು ಪಡೆದ ಜಗತ್ತು ಮತ್ತು ಚಿತ್ತ್ವ, ಆನಂದಾದಿ ವಿಷಯಗಳಲ್ಲಿ ಸಾದೃಶ್ಯವನ್ನು ಪಡೆದ ಜೀವರನ್ನು ಪರಮಾತ್ಮನನ್ನು ತಿಳಿದು ತಿಳಿಯುವದು ಸಾದೃಶ್ಯಮೂಲಕವಾದ ಏಕವಿಜ್ಞಾನದಿಂದ ಸರ್ವವಿಜ್ಞಾನವು

ಹೀಗೆ ಇಲ್ಲಿ ಶ್ರುತಿಯು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳುವದರ ಉದ್ದೇಶವು ಪರಮಾತ್ಮನ ಪ್ರಾಧಾನ್ಯ, ಸೃಷ್ಟಿಕರ್ತೃತ್ವಾದಿ ಮಹಿಮೆಗಳು ಇವುಗಳನ್ನು ಹೇಳುವದು ಆಗಿದೆಯೇ ಹೊರತು ಜಗನ್ಮಿಥ್ಯಾತ್ವವನ್ನೂ ಆತ್ಮೈಕ್ಯವನ್ನೂ ಹೇಳುವದಲ್ಲ

**ಮೃತ್ಪಿಂಡ-ಮೃಣ್ಮಯ ದೃಷ್ಟಾಂತದಲ್ಲಿ ಸಾದೃಶ್ಯ ಮೂಲಕವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನವೇ ಅಭಿಪ್ರೇತವಾಗಿದೆ.**

**57. ತದೇವ ಸಾದೃಶ್ಯಮತ್ರಾಪಿ ವಿವಕ್ಷಿತಮ್ 'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ ಇತ್ಯಾದಿನಾ । ಅನ್ಯಥಾ ಏಕಶಬ್ದಃ ಪಿಂಡಶಬ್ದಶ್ಚ ವ್ಯರ್ಥಃ ಸ್ಯಾತ್ । ಮೃದಾ ವಿಜ್ಞಾತಯಾ ಇತ್ಯೇತಾವತಾ ಪೂರ್ಣತ್ವಾತ್ । ನ ಹಿ ಏಕಮೃತ್ಪಿಂಡಾತ್ಮಕಾನಿ ಅನ್ಯಮೃಣ್ಮಯಾನಿ । ಸಾದೃಶ್ಯ-ಮೇವ ತೇಷಾಮ್ ।**

**'ಯಥಾ ಸೋಮ್ಯ ಏಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್, ಯಥಾ ಸೋಮ್ಯ ಏಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್' ಇತ್ಯಾದಿಕಮಪಿ ವ್ಯರ್ಥಂ ಸ್ಯಾತ್ । ನ ಹಿ ಏಕಮಣ್ಯಾತ್ಮಕಮನ್ಯಲ್ಲೋಹಮಯಮ್ । ನ ಚ ಏಕನಖನಿಕೃಂತನಾತ್ಮಕಂ ಸರ್ವಂ ಕಾರ್ಷ್ಣಾಯಸಮ್ ॥**

**ಅನುವಾದ**—(ಮೇಲೆ ಸಾದೃಶ್ಯದಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂದು ಪ್ರತಿಪಾದಿಸಿದರು. ಶ್ರುತಿಯಲ್ಲಿ ಕೊಟ್ಟ ಮೃತ್ಪಿಂಡ-ಮೃಣ್ಮಯಾದಿ ದೃಷ್ಟಾಂತಗಳೂ ಇದನ್ನೇ ಪ್ರತಿಪಾದಿಸುವವು ಎಂದು ಈಗ ವಿವರಿಸುವರು) (ಏಕವಿಜ್ಞಾನದಿಂದ ಸರ್ವ ವಿಜ್ಞಾನಕ್ಕೆ ಹೇತುವೆಂದು ವಿವರಿಸಿದ) ಸಾದೃಶ್ಯವೇ 'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್' ಎಂಬ ಶ್ರುತ್ಯುಕ್ತದೃಷ್ಟಾಂತದಲ್ಲಿ ವಿವಕ್ಷಿತವಾಗಿದೆ. ಹೀಗೆ ವಿವಕ್ಷಿತವಾಗದೇ ಇದ್ದರೆ 'ಏಕ' ಮತ್ತು 'ಪಿಂಡ' ಶಬ್ದಗಳು ವ್ಯರ್ಥವಾಗುವವು. 'ಮೃದಾ ವಿಜ್ಞಾತಯಾ' ಎಂದಿಷ್ಟರಿಂದಲೇ ಪ್ರಕೃತಪ್ರಯೋಜನವು ಪೂರ್ಣವಾಗುತ್ತಿತ್ತು (ಸಾದೃಶ್ಯವು ಅಭಿಪ್ರೇತವಾಗದೆ ಉಪಾದಾನ-ಉಪಾದೇಯ ಭಾವವು ಅಭಿಪ್ರೇತವಾಗಿದ್ದರೆ 'ಮೃತ್'ನ್ನು ತಿಳಿಯುವದರಿಂದ ಎಲ್ಲ ಮೃಣ್ಮಯ ಪದಾರ್ಥ ಗಳೂ ತಿಳಿಯುತ್ತವೆ ಎಂಬ ವಾಕ್ಯಾರ್ಥವು ಪೂರ್ಣವಾಗುತ್ತಿತ್ತು. 'ಏಕ' ಮತ್ತು

'ಪಿಂಡ' ಶಬ್ದಗಳ ಅಗತ್ಯವಿರುತ್ತಿರಲಿಲ್ಲ). ಅಲ್ಲದೆ, ಎಲ್ಲ ಮೃಣ್ಮಯ ಪದಾರ್ಥಗಳು ಏಕಮೃತ್ಪಿಂಡಾತ್ಮಕವಾದವುಗಳೂ ಅಲ್ಲ (ಆದ್ದರಿಂದ ಅವುಗಳಿಗೆ ಉಪಾದಾನ-ಉಪಾದೇಯಭಾವವೂ ಇಲ್ಲ) ಅವುಗಳಿಗೆ ಸಾದೃಶ್ಯಮಾತ್ರವಿರುವದು. (ಆದ್ದರಿಂದ ಈ ದೃಷ್ಟಾಂತವು ಉಪಾದಾನ-ಉಪಾದೇಯಭಾವಮೂಲಕವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳುವದಿಲ್ಲ ಆದರೆ ಸಾದೃಶ್ಯಮೂಲಕವಾಗಿಯೇ ಹೇಳುವದು)

'ಯಥಾ ಸೋಮ್ಯ ಏಕೇನ ಲೋಹಮಣಿನಾ' 'ಯಥಾ ಸೋಮ್ಯ ಏಕೇನ ನಖನಿಕೃಂತನೇನ' ಈ ದೃಷ್ಟಾಂತಗಳಲ್ಲಿಯೂ (ಸಾದೃಶ್ಯಮೂಲಕತ್ವವನ್ನು ಹೇಳದೇ ಇದ್ದರೆ) ಏಕ, ಲೋಹಮಣಿ, ನಖನಿಕೃಂತನಶಬ್ದಗಳು ವ್ಯರ್ಥವಾಗುವವು ಅಲ್ಲದೆ, ಇತರ ಎಲ್ಲ ಲೋಹಮಯ ಪದಾರ್ಥಗಳು ಏಕಮಣ್ಯಾತ್ಮಕವಾಗಿಲ್ಲ ಎಲ್ಲ ಕಾರ್ಷ್ಣಾಯಸ ಪದಾರ್ಥಗಳೂ ಏಕನಖನಿಕೃಂತನಾತ್ಮಕವಾಗಿಲ್ಲ (ಆದ್ದರಿಂದ ಅವುಗಳಿಗೆ ಉಪಾದಾನ-ಉಪಾದೇಯಭಾವವೂ ಇಲ್ಲ)

ವಿವರಣೆ—ಅದ್ವೈತಿಗಳು ಬ್ರಹ್ಮ ಮತ್ತು ಜಗತ್ತಿಗೆ ಉಪಾದಾನ-ಉಪಾದೇಯ ಭಾವವನ್ನು ಹೇಳಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಉಪಪಾದಿಸುವರು. ಈ ಸಂದರ್ಭದಲ್ಲಿ ಶ್ರುತಿಯಲ್ಲಿ ಹೇಳಿದ ಮೃತ್ಪಿಂಡ-ಮೃಣ್ಮಯಾದಿ ಮೂರು ದೃಷ್ಟಾಂತಗಳನ್ನು ಉಪಾದಾನ-ಉಪಾದೇಯ ಪರವಾಗಿ ವ್ಯಾಖ್ಯಾನಮಾಡುವರು ಇದು ಹೊಂದುವದಿಲ್ಲ ಎಂದು ಇಲ್ಲಿ ತೋರಿಸಲಾಗಿದೆ 'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್' ಎಂಬ ದೃಷ್ಟಾಂತದಲ್ಲಿ ಒಂದು ಮೃತ್ಪಿಂಡದ ಜ್ಞಾನದಿಂದ ಎಲ್ಲ ಮೃಣ್ಮಯ ಪದಾರ್ಥಗಳ ಜ್ಞಾನವಾಗುತ್ತದೆಂದು ಹೇಳಿದೆ ಇಲ್ಲಿ ಉಪಾದಾನ-ಉಪಾದೇಯಭಾವ ಪ್ರಯುಕ್ತವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳುವ ಉದ್ದೇಶವು ಶ್ರುತಿಗೆ ಇದ್ದರೆ 'ಮೃತ್'ದ ಜ್ಞಾನದಿಂದ ಮೃಣ್ಮಯಗಳ ಜ್ಞಾನವಾಗುತ್ತದೆ ಎಂದಿಷ್ಟು ಹೇಳಿದ್ದರೆ ಸಾಕಾಗುತ್ತಿತ್ತು. ಏಕಪದವನ್ನೂ ಪಿಂಡಪದವನ್ನೂ ಉಪಯೋಗಿಸುವ ಅವಶ್ಯಕತೆಯಿರಲಿಲ್ಲ ಅಲ್ಲದೆ ಎಲ್ಲ ಮೃಣ್ಮಯ ಪದಾರ್ಥಗಳೂ ಒಂದು ಮೃತ್ಪಿಂಡದಿಂದ ಉಂಟಾಗಿಲ್ಲ. ಆದ್ದರಿಂದ ಒಂದು ಮೃತ್ಪಿಂಡಕ್ಕೂ ಎಲ್ಲ ಮೃಣ್ಮಯಪದಾರ್ಥಗಳಿಗೂ ಉಪಾದಾನ-ಉಪಾದೇಯಭಾವವೇ ಇಲ್ಲ ಆದ್ದರಿಂದ ಉಪಾದಾನ-ಉಪಾದೇಯಭಾವ ಪ್ರಯುಕ್ತವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಳಲು ಈ ದೃಷ್ಟಾಂತವನ್ನು ಕೊಟ್ಟಿಲ್ಲ ಆದರೆ ಒಂದು ಮೃತ್ಪಿಂಡವನ್ನು ತಿಳಿದುಕೊಂಡರೆ ಸಾದೃಶ್ಯದಿಂದ ಎಲ್ಲ ಮೃಣ್ಮಯಪದಾರ್ಥಗಳ ಜ್ಞಾನವಾಗುವದು ಎಂದು ಸಾದೃಶ್ಯಮೂಲಕವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ತಿಳಿಸಲು ಕೊಡಲಾಗಿದೆ ಪರಮಾತ್ಮನ ಜ್ಞಾನದಿಂದ ಅವನಿಂದ ಸತ್ತಾದಲ್ಲಿ ಸದೃಶವಾದ ಜಗತ್ತಿನ, ಚಿತ್ತ್ವ ಮತ್ತು ಆನಂದದಲ್ಲಿ ಸದೃಶರಾದ ಜೀವರ ಜ್ಞಾನವಾಗುತ್ತದೆ ಎಂದು ತಿಳಿಸಲು ಮೃತ್ಪಿಂಡ-ಮೃಣ್ಮಯ ದೃಷ್ಟಾಂತಪೂರ್ವಕವಾಗಿ ಸಾದೃಶ್ಯದಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಬೋಧಿಸಲಾಗಿದೆ. ಇದೇ ರೀತಿ

*

ಯಾಗಿ ಲೋಹಮಣಿ, ನಖನಿಕೃಂತನ ದೃಷ್ಟಾಂತಗಳಿಂದಲೂ ಸಾದೃಶ್ಯಮೂಲಕವಾಗಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಬೋಧಿಸಲಾಗಿದೆ ಅಲ್ಲಿಯೂ ಒಂದು ಲೋಹ-ಮಣಿಯು ಎಲ್ಲ ಲೋಹಮಯಪದಾರ್ಥಗಳಿಗೆ ಉಪಾದಾನಕಾರಣವಲ್ಲ ಒಂದು ನಖ-ನಿಕೃಂತನ ಅಂದರೆ ಉಗುರು ತೆಗೆಯುವ ಸಾಧನವು ಎಲ್ಲ ಕಬ್ಬಿಣದ ಪದಾರ್ಥಗಳಿಗೆ ಉಪಾದಾನಕಾರಣವಲ್ಲ ಆದ್ದರಿಂದ ಉಪಾದಾನ-ಉಪಾದೇಯಭಾವವನ್ನು ಅವಲಂಬಿಸಿ ಈ ದೃಷ್ಟಾಂತಗಳು ಹೊರಟಿಲ್ಲ ಆದರೆ ಸಾದೃಶ್ಯವನ್ನು ಅವಲಂಬಿಸಿಯೇ ಹೊರಟಿರುವವು. ವಿಷಯ ಪ್ರತಿಪಾದನೆಗೆ ಸಾದೃಶ್ಯಮೂಲಕವಾಗ ಒಂದೇ ದೃಷ್ಟಾಂತವು ಸಾಕಾಗಿದ್ದರೂ ಇದರಿಂದ ಪ್ರತಿಪಾದಿತವಾಗುವ ಪ್ರಮೇಯವು ದೃಢವಾಗಿ ಮನಸ್ಸಿನಲ್ಲಿ ಬೇರೂರಲು ಮೂರು ದೃಷ್ಟಾಂತಗಳನ್ನು ಕೊಟ್ಟಿದ್ದಾರೆ ಒಂದೊಂದು ದೃಷ್ಟಾಂತಕ್ಕೆ ಪ್ರತ್ಯೇಕವಾದ ಪ್ರಯೋಜನವನ್ನೂ ಆಚಾರ್ಯರು ಬೇರೆ ಕಡೆಗೆ ಹೇಳಿದ್ದಾರೆ ಅದ್ವೈತಮತದಲ್ಲಿಯೂ ಕೂಡ ಈ ಮೂರು ದೃಷ್ಟಾಂತಗಳನ್ನು ಒಂದೇ ಉದ್ದೇಶಕ್ಕೆ ಬಳಸಿಕೊಂಡಿದ್ದಾರೆ.

**ವಾಚಾರಂಭಣದೃಷ್ಟಾಂತದಲ್ಲಿ ಮಿಥ್ಯಾತ್ವಪ್ರತಿಪಾದನೆಯು ಅಭಿಪ್ರೇತವಾಗಿಲ್ಲ.**

**58. ‘ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್’ ಇತ್ಯತ್ರ ಚ ವಾಚಾ ನಾಮ್ನಾಮ್ ಆರಂಭಣಂ ವಿಕಾರಃ, ಅವಿಕೃತಂ ನಿತ್ಯಂ ನಾಮಧೇಯಂ ಮೃತ್ತಿಕೇತ್ಯೇವ ಇತ್ಯೇತದ್ವಚನಂ ಸತ್ಯಮಿತಿ ಶ್ರುತ್ಯರ್ಥಃ। ನ ಚ ವಾಚಾರಂಭಣಶಬ್ದೋಽಪಿ ಮಿಥ್ಯಾತ್ವೇ ಪ್ರಸಿದ್ಧಃ। ವಾಚಾರಂಭಣಮಾತ್ರಮಿತಿ ಚ ಅಶ್ರುತಕಲ್ಪನಮ್। ತಸ್ಮಿನ್ ಪಕ್ಷೇ ನಾಮಧೇಯಶಬ್ದಃ ಇತಿಶಬ್ದಶ್ಚ ವ್ಯರ್ಥಃ ಸ್ಯಾತ್। ಅತೋ ನ ಕುತ್ರಾಪಿ ಜಗತೋ ಮಿಥ್ಯಾತ್ವಮುಚ್ಯತೇ ॥**

**ಅನುವಾದ** — (ಮೃತ್ಪಿಂಡಾದಿದೃಷ್ಟಾಂತವಾಕ್ಯಗಳಿಗೆ ಶೇಷವಾಕ್ಯವಾಗಿ ‘ವಾಚಾರಂಭಣಂ ವಿಕಾರೋ’ ಇತ್ಯಾದಿಯಾದ ವಾಕ್ಯವು ಮೇಲೆ ಹೇಳಿದ ಮೂರೂ ದೃಷ್ಟಾಂತಗಳ ನಂತರವೂ ಬಂದಿದೆ ಅಲ್ಲಿ ಜಗನ್ಮಿಥ್ಯಾತ್ವವನ್ನು ಹೇಳಿದೆ ಎಂಬ ಅದ್ವೈತಿಗಳ ವಾದವನ್ನು ಈಗ ನಿರಾಕರಿಸುವರು) ‘ವಾಚಾರಂಭಣಂ ವಿಕಾರೋ’ ಇತ್ಯಾದಿಯಾದ ಶ್ರುತಿವಾಕ್ಯಕ್ಕೆ ‘ವಾಚಾ’ ಅಂದರೆ ವಾಗಿಂದ್ರಿಯದಿಂದ, ನಾಮ್ನಾಂ ಅಂದರೆ ಸಂಸ್ಕೃತಭಿನ್ನವಾದ ಪದಗಳ, ಆರಂಭಣಂ ಅಂದರ ಉಚ್ಚಾರಣವು, ವಿಕಾರಃ ಅಂದರೆ ಅವುಗಳ ಉತ್ಪಾದನವೇ ಆಗಿದೆ. (ಸಂಸ್ಕೃತ ಶಬ್ದಗಳಂತೆ ಇವು ಅಭಿವ್ಯಂಜಿತವಾದವುಗಳಲ್ಲ, ಆದರೆ ಉತ್ಪಾದಿಸಲ್ಪಟ್ಟವು) ಮೃತ್ತಿಕಾ ಇತ್ಯೇವ ಅಂದರೆ ‘ಮೃತ್ತಿಕಾ’ ಇತ್ಯಾದಿ ಸಂಸ್ಕೃತ ಪದಗಳೇ ನಾಮಧೇಯಂ ಅಂದರೆ ಅವಿಕೃತವಾದ ಪದಗಳು, ಸತ್ಯಂ ಅಂದರೆ ನಿತ್ಯವಾದವುಗಳು ಎಂಬುದು ಈ ಶ್ರುತಿವಾಕ್ಯದ ಅರ್ಥ (ಹೀಗೆ ಅವು ನಿತ್ಯವೂ ಅವಿಕೃತವೂ ಆದ್ದರಿಂದ ಪ್ರಧಾನವಾದವುಗಳು ಮಾತೀ, ಮಣ್ಣು ಇತ್ಯಾದಿ ಪ್ರಾಕೃತ ಪದಗಳು ಉತ್ಪಾದಿತವೂ ಅನಿತ್ಯವೂ ಆದ್ದರಿಂದ ಅಪ್ರಧಾನವಾದವುಗಳು. ಪ್ರಧಾನ ಜ್ಞಾನದಿಂದ ಅಪ್ರಧಾನದ

ಜ್ಞಾನವು ಗತಾರ್ಥ ಎಂದು ಹೇಳುವದೇ ಈ ಶ್ರುತಿಯಲ್ಲಿಯ ದೃಷ್ಟಾಂತದ ಉದ್ದೇಶ. ಜಗನ್ಮಿಥ್ಯಾತ್ವವನ್ನು ಹೇಳುವದಲ್ಲ)

'ವಾಚಾರಂಭಣ' ಶಬ್ದವು ಮಿಥ್ಯಾ ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿಲ್ಲ 'ವಾಚಾರಂಭಣ ಮಾತ್ರ' ಎಂದು ತೆಗೆದುಕೊಳ್ಳುವದು (ಮತ್ತು ಇದಕ್ಕೆ ಮಿಥ್ಯಾ ಎಂದು ಅರ್ಥ ಮಾಡುವದು) ಶ್ರುತಿಯಲ್ಲಿ ಇಲ್ಲದೇ ಇರುವದರ ಕಲ್ಪನೆಯಾಗುವದು. (ಶ್ರುತಿಯಲ್ಲಿ 'ವಾಚಾರಂಭಣ' ಎಂದಿಷ್ಟೇ ಇದೆ. 'ವಾಚಾರಂಭಣಮಾತ್ರ' ಎಂದಿಲ್ಲ). ಅಲ್ಲದೆ ಹೀಗೆ ವಾಚಾರಂಭಣಮಾತ್ರ ಎಂದು ಕಲ್ಪಿಸಿದ ಪಕ್ಷದಲ್ಲಿ ಮುಂದೆ 'ನಾಮಧೇಯಮ್' ಕೇವಲ ನಾಮಮಾತ್ರ ಎಂದು ಮತ್ತೆ ಹೇಳಿದ್ದು (ಪುನರುಕ್ತವಾಗಿ) ವ್ಯರ್ಥವಾಗುತ್ತದೆ 'ಮೃತ್ತಿಕಾ' ಶಬ್ದವನ್ನು ಶಬ್ದಪರವಾಗಿ ತೆಗೆದುಕೊಳ್ಳದೆ ಅರ್ಥಪರವಾಗಿ ತೆಗೆದುಕೊಂಡರೆ ಇತಿ ಶಬ್ದವೂ ವ್ಯರ್ಥವಾಗುತ್ತದೆ ಆದ್ದರಿಂದ ಜಗನ್ಮಿಥ್ಯಾತ್ವವನ್ನು ಎಲ್ಲಿಯೂ ಹೇಳಿಲ್ಲ. (ವಾಚಾರಂಭಣವಾಕ್ಯದಲ್ಲಿ, ಮೃಣ್ಮಯಾದಿದೃಷ್ಟಾಂತವಾಕ್ಯಗಳಲ್ಲಿ, ಏಕವಿಜ್ಞಾನ ವಾಕ್ಯದಲ್ಲಿ, ಸೃಷ್ಟಿವಾಕ್ಯದಲ್ಲಿ ಈ ಯಾವ ವಾಕ್ಯಗಳಲ್ಲಿಯೂ ಜಗನ್ಮಿಥ್ಯಾತ್ವವನ್ನು ಹೇಳಿಲ್ಲ).

**ವಿವರಣೆ**—ಅದ್ವೈತಿಗಳು 'ವಾಚಾರಂಭಣಂ ವಿಕಾರೋ ನಾಮಧೇಯಮ್' ಇತ್ಯಾದಿಯಾದ ವಾಕ್ಯಕ್ಕೆ 'ವಾಚಾರಂಭಣಂ' ಅಂದರೆ ಕೇವಲ ವಾಙ್ಮಾತ್ರಾವಲಂಬಿಯಾದುದು, ವಿಕಾರಃ ನಾಮಧೇಯಂ ಅಂದರೆ (ಘಟಪಟಾದಿ) ವಿಕಾರಗಳು ಕೇವಲ ನಾಮಮಾತ್ರ, ಮೃತ್ತಿಕೇತ್ಯೇವ ಸತ್ಯಂ ಮೃತ್ತಿಕೆಯೆಂಬ ವಸ್ತು ಮಾತ್ರ ಸತ್ಯ, ಘಟಪಟಾದಿಗಳು ಮಿಥ್ಯಾ ಎಂದು ಅರ್ಥಮಾಡುವರು. ಈ ವಾಕ್ಯವನ್ನು ಮೃಣ್ಮಯಾದಿ ದೃಷ್ಟಾಂತವಾಕ್ಯಗಳ ಶೇಷವಾಕ್ಯವೆಂದು ತೆಗೆದುಕೊಳ್ಳುವರು ಪ್ರತ್ಯೇಕ ದೃಷ್ಟಾಂತವಾಕ್ಯಗಳೆಂದು ತೆಗೆದುಕೊಳ್ಳುವದಿಲ್ಲ ಈ ಶೇಷವಾಕ್ಯದಲ್ಲಿ ಮಿಥ್ಯಾತ್ವವನ್ನು ಪ್ರತಿಪಾದಿಸಿರುವದರಿಂದ ಮೃಣ್ಮಯಾದಿದೃಷ್ಟಾಂತವಾಕ್ಯಗಳಲ್ಲಿಯೂ ಜಗನ್ಮಿಥ್ಯಾತ್ವವು ಪ್ರತಿಪಾದಿತವಾಗಿದೆ ಎಂದು ವಾದಿಸುವರು ಇದು ಸರಿಯಲ್ಲ ಈ ವಾಕ್ಯದಲ್ಲಿಯೂ ಮಿಥ್ಯಾತ್ವವು ಪ್ರತಿಪಾದಿತವಾಗಿಲ್ಲ. ಇಲ್ಲಿ ಮೃತ್ತಿಕೆ ಮಾತ್ರ ಸತ್ಯ, ಅದರ ವಿಕಾರಗಳಾದ ಘಟಪಟಾದಿಗಳು ಕೇವಲ ವಾಙ್ಮಾತ್ರ, ಕೇವಲ ನಾಮಮಾತ್ರ ಎಂಬ ವಿಷಯವೇ ಪ್ರತಿಪಾದಿತವಾಗಿಲ್ಲ ಇಲ್ಲಿ 'ಮೃತ್ತಿಕಾ' ಎಂಬ ಶಬ್ದದ ವಿಷಯ ಚರ್ಚಿಸಲ್ಪಟ್ಟಿದೆಯೇ ಹೊರತು ಅದರ ಅರ್ಥವಾದ ಮಣ್ಣಿನ ವಿಷಯ ಪ್ರಸ್ತಾಪಿಸಲ್ಪಟ್ಟಿಲ್ಲ 'ಮೃತ್ತಿಕಾ ಇತಿ' ಎಂದು ಇತಿಶಬ್ದವಿರುವದರಿಂದ ಇದು ಶಬ್ದದ ವಿಷಯವೆಂದು ಸ್ಪಷ್ಟವಾಗುತ್ತದೆ ಅಲ್ಲದೆ ಘಟಪಟಾದಿ ವಿಕಾರಗಳು ನಾಮಮಾತ್ರ ಎಂದು ಹೇಳಲು 'ವಾಚಾರಂಭಣಮ್' ಮತ್ತು 'ನಾಮಧೇಯಮ್' ಎಂದು ಎರಡು ಸಲ ಹೇಳುವ ಅಗತ್ಯವಿರಲಿಲ್ಲ ಆದ್ದರಿಂದ ಇಲ್ಲಿ ಆ ವಿಷಯವೇ ಪ್ರಸ್ತುತವಾಗಿಲ್ಲ. ಆದರೆ 'ಮೃತ್ತಿಕಾ' ಎಂಬ ಸಂಸ್ಕೃತಪದ ಮತ್ತು ಮಾತೀ, ಮಣ್ಣು ಇತ್ಯಾದಿ ಪ್ರಾಕೃತಪದಗಳು, ಇವುಗಳಲ್ಲಿ ಮಾತೀ, ಮಣ್ಣು ಇತ್ಯಾದಿಗಳು ಉತ್ಪಾದಿತ, ಅನಿತ್ಯ, ಅಪ್ರಧಾನ, 'ಮೃತ್ತಿಕಾ' ಎಂಬ ಸಂಸ್ಕೃತಪದವು ಅಭಿವ್ಯಂಜಿತ, ನಿತ್ಯ, ಪ್ರಧಾನ. ಆದ್ದರಿಂದ ಪ್ರಧಾನವಾದ

ವ್ಯತ್ತಿಕಾಪದಜ್ಞಾನದಿಂದ ಇತರ ಅಪ್ರಧಾನವಾದ ಸರ್ವಪದಗಳ ಜ್ಞಾನವು ಗತಾರ್ಥವಾಗು ವಂತೆ ಪ್ರಧಾನನಾದ ಪರಮಾತ್ಮನ ಜ್ಞಾನದಿಂದ ಇತರ ಎಲ್ಲ ಪದಾರ್ಥಗಳ ಜ್ಞಾನವು ಗತಾರ್ಥವು ಎಂದು ತಿಳಿಸಲು ಈ ದೃಷ್ಟಾಂತವನ್ನು ಕೊಡಲಾಗಿದ ಇದು ಒಂದು ಪ್ರತ್ಯೇಕ ದೃಷ್ಟಾಂತ, ಕೇವಲ ಶೇಷವಾಕ್ಯವಲ್ಲ .

**ಜಗತ್ಸತ್ಯತ್ವಪ್ರತಿಪಾದಕವಾದ ಶ್ರುತಿಸ್ಮೃತಿವಚನಗಳು.**

**59 ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ ।**

**ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ । ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಮ್ । ಪ್ರಘಾನ್ನಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಮ್**

**ಅನಾದ್ಯನಂತಂ ಜಗದೇತದೀದೃಕ್ ಪ್ರವರ್ತತೇ ನಾತ್ರ ವಿಚಾರ್ಯಮಸ್ತಿ ।**
**ತದನ್ಯಥಾ ಕ್ವಾಪಿ ಚ ಕಸ್ಯಚೇದಮಭೂತ್ ಪುರಾ ನಾಪಿ ತಥಾ ಭವಿಷ್ಯತ್ ॥**

**ಅಸತ್ಯಮಾಹುಃ ಜಗದೇತದಜ್ಞಾಃ ಶಕ್ತಿಂ ಹರೇಃ ಯೇ ನ ವಿದುಃ ಪರಾಂ ಹಿ ।**
**ಯಃ ಸತ್ಯರೂಪಂ ಜಗದೇತದೀದೃಕ್ ಸೃಷ್ಟ್ವಾ ಸ್ವತ್ವಭೂತ್**
**ಸೃಷ್ಟಿಕರ್ಮಾ ಮಹಾತ್ಮಾ ॥**

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥**

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ಇತ್ಯಾದೇಶ್ಚ**

**ಅನುವಾದ**—(ಈವರೆಗೆ ಜಗನ್ಮಿಥ್ಯಾತ್ವವನ್ನು ಖಂಡಿಸಿದರು ಈಗ ಜಗತ್ಸತ್ಯತ್ವ ಪ್ರತಿಪಾದಕವಾದ ಶ್ರುತಿಸ್ಮೃತಿವಚನಗಳನ್ನು ಉದಾಹರಿಸುವರು) ಸರ್ವಜ್ಞನೂ, ಎಲ್ಲರ ಮನಸ್ಸುಗಳ ಸ್ವಾಮಿಯೂ, ಸರ್ವೋತ್ತಮನೂ, ಸ್ವತಂತ್ರನೂ ಆದ ಪರಮಾತ್ಮನು ಮಹತ್ತತ್ವವೇ ಮೊದಲಾದ ಪದಾರ್ಥಗಳನ್ನು ಸದಾಕಾಲದಲ್ಲಿಯೂ ಸತ್ಯವಸ್ತುಗಳ ನ್ನಾಗಿಯೇ ನಿರ್ಮಿಸಿರುವನು

ಸ್ಪಾರ್ಹ ಅಂದರೆ ಸ್ಪೃಹಣೀಯವಾದ ಹವಿರಾದಿ ವಸ್ತುಗಳನ್ನು (ಜೇತಾ) ಭಕ್ತರಿಂದ ಪಡೆಯುವ, ಮತ್ತು ಅವರಿಗೆ ಸ್ಪಾರ್ಹ ಅಂದರೆ ಸ್ಪೃಹಣೀಯವಾದ ಫಲಗಳನ್ನು (ದಾತಾ) ಕೊಡುವ ಪರಮೇಶ್ವರನು ಸೃಷ್ಟಿಸಿದ ಜಗತ್ತು ಸತ್ಯವೇ ಆಗಿದೆ ಮೋಘ ಅಂದರೆ ಮಿಥ್ಯಾ-ಭೂತವಾದುದು ಆಗಿಲ್ಲ ಮಘವಾನಾ ಅಂದರೆ ಇಂದ್ರ ಮತ್ತು ಬೃಹಸ್ಪತಿಗಳೇ ನಿಮಗೆ ಅಧೀನವಾದ ಈ ಜಗತ್ತು ಸತ್ಯವೇ ಆಗಿದೆ. ಸತ್ಯಜಗತ್ಪಾಲನಾದಿ ನಿಮ್ಮ ವ್ರತವನ್ನು

ಆಪಃ ಅಂದರೆ ಎಲ್ಲ ದೇವತೆಗಳೂ ಬಲ್ಲವರಾಗಿದ್ದಾರೆ ಸರ್ವೋತ್ಕೃಷ್ಟನಾದ ಪರಮಾತ್ಮನ ಮಹತ್ತರವಾದ ಮತ್ತು ಸತ್ಯವಾದ ಕಾರ್ಯಗಳನ್ನು ಈಗ ಹಾಡಿದೆನು.

ಅನಾದ್ಯನಂತವಾದ ಈ ಜಗತ್ತು ಈ ರೀತಿಯಾಗಿ ನಾನಾವಿಧವಾಗಿ ಪ್ರವರ್ತಿಸುತ್ತದೆ ಇದರಲ್ಲಿ ಸಂದೇಹವಿಲ್ಲ ಇದು ಯಾರಿಗೂ ಎಂದಿಗೂ ಈ ಹಿಂದೆ ಬಾಧಿತವಾಗಿಲ್ಲ. ಮುಂದೆಯೂ ಬಾಧಿತವಾಗುವದಿಲ್ಲ

ಶ್ರೀಹರಿಯ ಪರಮಶ್ರೇಷ್ಠವಾದ ಶಕ್ತಿಯನ್ನು ಅರಿಯದೇ ಇದ್ದ ಅಜ್ಞರು ಈ ಜಗತ್ತು ಅಸತ್ಯವೆಂದು ಹೇಳುವರು ಮಹಾತ್ಮನಾದ ಪರಮಾತ್ಮನು ಸತ್ಯವಾದ ಈ ಜಗತ್ತನ್ನು ಸೃಷ್ಟಿಸಿ 'ಸತ್ಯಕರ್ಮಾ' ಎಂಬ ನಾಮವುಳ್ಳವನಾಗಿದ್ದಾನೆ

ಅಸುರರಾದವರು ಈ ಜಗತ್ತು ಅಸತ್ಯವೂ, ಅಪ್ರತಿಷ್ಠಿತವೂ ಅಂದರೆ ಬಾಧಿತವಾಗುವಂಥದೂ, ಈಶ್ವರರಹಿತವೂ, ಪ್ರಕೃತಿಯಿಂದ ಮಹತ್, ಮಹತ್ತಿನಿಂದ ಅಹಂಕಾರ ಹೀಗೆ ಪರಸ್ಪರವಾಗಿ ಸಂಭೂತವಾಗದೇ ಇರುವದೂ, ಕಾಮಹೈತುಕ ಅಂದರೆ ಮಿಥ್ಯಾಜ್ಞಾನ-ಪ್ರಯುಕ್ತವಾದುದೂ ಎಂದು ಹೇಳುವರು ಇಂಥ ತಪ್ಪು ದೃಷ್ಟಿಯುಳ್ಳವರಾಗಿ ಕ್ಷುದ್ರ-ಮನಸ್ಸು ಮತ್ತು ಅಲ್ಪಜ್ಞಾನವುಳ್ಳವರಾಗಿ ಉಗ್ರಕಾರ್ಯಗಳಲ್ಲಿ ನಿರತರಾಗಿ ಜಗತ್ತಿನ ಅಹಿತಕ್ಕೇ ಕಾರಣರಾಗುತ್ತಾರೆ

ವಿವರಣೆ—ಈಶಾವಾಸ್ಯೋಪನಿಷತ್ತು, ಋಕ್-ಸಂಹಿತೆ, ಮತ್ತು ಗೀತೆಯಿಂದ ಜಗತ್ತಿನ ಸತ್ಯತ್ವವನ್ನು ಪ್ರತಿಪಾದಿಸುವ ಮತ್ತು ಜಗತ್ತು ಮಿಥ್ಯಾ ಎಂದು ತಿಳಿದುಕೊಂಡರೆ ಆಗುವ ಅನರ್ಥವನ್ನು ತಿಳಿಸುವ ವಚನಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

**ಜಗತ್ತು ಸ್ವಪ್ನಸದೃಶ, ಮಾಯಾಮಯ, ಇತ್ಯಾದಿಯಾಗಿ ಅಲ್ಲಲ್ಲಿ ಹೇಳಿದ್ದು ಮಿಥ್ಯಾತ್ವ ಪ್ರತಿಪಾದಕವಲ್ಲ.**

**60.** ಅನಿತ್ಯತ್ವ-ವಿಕಾರಿತ್ವ-ಪಾರತಂತ್ರ್ಯಾದಿರೂಪತಃ ।
ಸ್ವಪ್ನಾದಿಸಾಮ್ಯಂ ಜಗತಃ ನ ತು ಬೋಧನಿವರ್ತ್ಯತಾ ॥
ಸರ್ವಜ್ಞಸ್ಯ ಯತೋ ವಿಷ್ಣೋಃ ಸರ್ವದೈವ ಪ್ರತೀಯತೇ ।
ಬೋಧಾಸಹಂ ತತೋ ನೈತತ್ ಕಿಂತ್ವಾಜ್ಞಾವಶಮಸ್ಯ ಹಿ ॥

ಇತಿ ಪರಮೋಪನಿಷದಿ

ಪ್ರಜ್ಞಾವಿನಿರ್ಮಿತಂ ಯಸ್ಮಾದತೋ ಮಾಯಾಮಯಂ ಜಗತ್ ।
ಅನೇನಾನುಗತಂ ಯಸ್ಮಾದನೃತಂ ತೇನ ಕಥ್ಯತೇ ॥
ಬೋಧಾನಿವರ್ತ್ಯಮಪಿ ತು ನಿತ್ಯಮೇವ ಪ್ರವಾಹತಃ ।
ಅ ಇತ್ಯುಕ್ತಃ ಪರೋ ದೇವಃ ತೇನ ಸತ್ಯಮಿದಂ ಜಗತ್ ॥
ತದಧೀನಸ್ವರೂಪತ್ವಾತ್ ಅಸತ್ಯಂ ತೇನ ಕಥ್ಯತೇ ।
ಸತ್ಯಸ್ಯ ಸತ್ಯಃ ಸ ವಿಭುರಿಂದ್ರಚಾಪಸ್ಯ ಸೂರ್ಯವತ್ ॥

**ತಸ್ಯೋಪನಿಷತ್ ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮಿತಿ ಚ ।**
**ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।**
**ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾsನಂತ ಕಥ್ಯತೇ ॥**
**ಪ್ರಕೃತಿಃ ಪ್ರಕೃಷ್ಟಕರಣಾದ್ ವಾಸನಾ ವಾಸಯೇದ್ಯತಃ ।**
**ಅ ಇತ್ಯುಕ್ತೋ ಹರಿಸ್ತಸ್ಯ ವಿದ್ಯಾsವಿದ್ಯೇತಿ ಸಂಜ್ಞಿತಾ ॥**
**ಮಾಯೇತ್ಯುಕ್ತಾ ಪ್ರಕೃಷ್ಟತ್ವಾತ್ ಪ್ರಕೃಷ್ಟಂ ಚ ಮಯಾಭಿದಮ್ ।**
**ವಿಷ್ಣೋಃ ಪ್ರಜ್ಞಪ್ತಿರೇವೈಕಾ ಶಬ್ದೈರೇತೈರುದೀರ್ಯತೇ ॥**
**ಪ್ರಜ್ಞಪ್ತಿರೂಪೋ ಹಿ ಹರಿಃ ಸಾ ಚ ಸ್ವಾನಂದಲಕ್ಷಣಾ ।  ಇತಿ ಚ**

**ಅನುವಾದ**—(ಕೆಲವು ಶ್ರುತಿಸ್ಮೃತಿಗಳಲ್ಲಿ ಜಗತ್ತು ಸ್ವಪ್ನಸಮ, ಮಾಯಾಮಯ ಇತ್ಯಾದಿಯಾಗಿ ಹೇಳಿದ್ದರಿಂದ ಜಗತ್ತು ಮಿಥ್ಯಾ ಅಲ್ಲವೆಂದು ಹೇಗೆ ಹೇಳುವಿರಿ ಎಂಬ ಆಕ್ಷೇಪವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ವಪ್ನಮಯ, ಮಾಯಾಮಯ ಇತ್ಯಾದಿ ಶಬ್ದಗಳೇ ಮಿಥ್ಯಾತ್ವವಾಚಕಗಳಲ್ಲ ಎಂದು ತಿಳಿಸಲು ಅವುಗಳ ಸರಿಯಾದ ಅರ್ಥವನ್ನು ಹೇಳುವ ವಚನಗಳನ್ನು ಉಲ್ಲೇಖಿಸುವರು) ಜಗತ್ತು ಅನಿತ್ಯವೂ ವಿಕಾರವುಳ್ಳದ್ದೂ ಪರತಂತ್ರವೂ ಆದ್ದರಿಂದ ಸ್ವಪ್ನಾದಿಸಾಮ್ಯವನ್ನು ಅದಕ್ಕೆ ಹೇಳುವರು. ಜ್ಞಾನನಿವರ್ತ್ಯ ಅಂದರೆ ಬಾಧ್ಯ ಅಥವಾ ಮಿಥ್ಯಾ ಎಂಬ ಅರ್ಥದಲ್ಲಿ ಹೇಳುವದಿಲ್ಲ ಜಗತ್ತು ಸರ್ವಜ್ಞನಾದ ಪರಮಾತ್ಮನ ಜ್ಞಾನಕ್ಕೆ ಯಾವಾಗಲೂ ವಿಷಯವಾಗಿರುತ್ತದೆ ಆದ್ದರಿಂದ ಜಗತ್ತು ಜ್ಞಾನ ನಿವರ್ತ್ಯವಲ್ಲ ಆದರೆ ಯಾವಾಗಲೂ ಪರಮಾತ್ಮನ ಆಜ್ಞೆಗೆ ಅಧೀನವಾಗಿರುವಂಥದು ಎಂದು ಪರಮೋಪನಿಷತ್ತಿನಲ್ಲಿ ಹೇಳಿದೆ.

ಜಗತ್ತು ಭಗವಂತನ ಪ್ರಜ್ಞೆಯಿಂದ ನಿರ್ಮಿತವಾಗಿರುವುದರಿಂದ ಅದಕ್ಕೆ ಮಾಯಾಮಯ ಎಂದು ಹೇಳುವರು (ಭಗವಂತನ ಪ್ರಜ್ಞೆಗೆ 'ಮಾಯಾ' ಎಂದು ಹೆಸರಿದೆ) 'ಅನ' ಅಂದರೆ ಚೇಷ್ಟಕನಾದ ಪರಮಾತ್ಮನಿಂದ 'ಋತ' ಅಂದರೆ ಗತ ಅಥವಾ ವ್ಯಾಪ್ತವಾದದ್ದರಿಂದ (ಈ ಜಗತ್ತು) "ಅನೃತ" ಎಂದು ಹೇಳಲ್ಪಡುತ್ತದೆ. ಜಗತ್ತು ಜ್ಞಾನದಿಂದ ನಿವರ್ತ್ಯವಾಗುವಂಥದಲ್ಲ. ಅದು ಪ್ರವಾಹತೋ ನಿತ್ಯವಾದುದು 'ಅ' ಅಂದರೆ ಪರಮಾತ್ಮನು, ಸತ್ಯವಾದ ಜಗತ್ತು ಅವನಿಗೆ ಅಧೀನವಾಗಿರುವದರಿಂದ 'ಅಸತ್ಯ' ಎಂದು ಹೇಳಲ್ಪಡುತ್ತದೆ. ಸೂರ್ಯನು ಇಂದ್ರಧನುಸ್ಸಿಗೆ ನಿಯಾಮಕನಾಗಿರುವಂತೆ ಪರಮಾತ್ಮನು ಸತ್ಯವಾದ ಜಗತ್ತಿನ ಸತ್ಯತೆಗೇ ನಿಯಾಮಕನಾಗಿ 'ಸತ್ಯಸ್ಯ ಸತ್ಯಃ' ಎನಿಸಿದ್ದಾನೆ ಎಂದು ಹೇಳಿದೆ.

'ಸತ್ಯಸ್ಯ ಸತ್ಯ' ಎಂಬುದು ಪರಮಾತ್ಮನ ರಹಸ್ಯನಾಮವು. ಪ್ರಾಣಾಃ ಅಂದರೆ ಬ್ರಹ್ಮಾದಿಗಳು ಸತ್ಯರು ಅವರ ಸತ್ಯನು (ಅಂದರೆ ಅವರ ಸತ್ಯತೆಯ ನಿಯಾಮಕನು) ಪರಮಾತ್ಮನು ಎಂದೂ ಹೇಳಿದೆ.

ಮಹಾಮಾಯಾ, ಅವಿದ್ಯಾ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ ಎಂದು ನಿನ್ನ ಇಚ್ಛೆಯು ಕರೆಯಲ್ಪಡುತ್ತದ ಪ್ರಕೃಷ್ಟವಾಗಿ ಮಾಡುವದರಿಂದ ಪ್ರಕೃತಿಯು, ವಾಸನ ಅಂದರೆ ಉತ್ಪಾದನೆಯನ್ನು ಮಾಡುವದರಿಂಪ ವಾಸನಾ (ವಾಸಯೇತ್ ಭಾವಯೇತ್ ಉತ್ಪಾದಯೇತ್ ಎಂದು ಇದರ ವಿವರಣೆಯು), 'ಅ' ಅಂದರೆ ಪರಮಾತ್ಮನು, ಅವನ ವಿದ್ಯೆಯು ಅವಿದ್ಯೆಯು, ಪ್ರಕೃಷ್ಟವಾದದ್ದು ಮಯವು, ಆದ್ದರಿಂದ ಪ್ರಕೃಷ್ಟತ್ವದಿಂದ ಮಾಯಾ ಹೀಗೆ ವಿಷ್ಣುವಿನ ಪ್ರಜ್ಞಪ್ತಿ ಅಂದರೆ ಇಚ್ಛೆಯೇ ಈ ಎಲ್ಲ ಹೆಸರುಗಳಿಂದ ಕರೆಯಲ್ಪಡುತ್ತದ ಪರಮಾತ್ಮನು ಈ ಪ್ರಜ್ಞಪ್ತಿರೂಪನು, ಇದು ಅವನ ಸ್ವಾನಂದರೂಪವಾದುದು

**ವಿವರಣೆ**—ಜಗತ್ತನ್ನು ಕೆಲವು ಸಲ ಸ್ವಪ್ನಸದೃಶ, ಮಾಯಾಮಯ ಎಂದು ಹೇಳಿದ್ದನ್ನು ಮಿಥ್ಯಾಭೂತ ಎಂಬ ಅರ್ಥದಲ್ಲಿ ತೆಗೆದುಕೊಳ್ಳದೆ ಅನಿತ್ಯ, ವಿಕಾರ ಹೊಂದು ವಂಥದು, ಪರಮಾತ್ಮನಿಗೆ ಅಧೀನ ಎಂಬ ಅರ್ಥದಲ್ಲಿ ತೆಗೆದುಕೊಳ್ಳಬೇಕು ಎಂಬುದನ್ನು ಅನೇಕ ಪ್ರಮಾಣವಚನಗಳಿಂದ ಇಲ್ಲಿ ವಿವರಿಸಿದ್ದಾರೆ ಭಗವಂತನ ಇಚ್ಛೆಗೆ ಅವಿದ್ಯಾ, ಮಾಯಾ ಇತ್ಯಾದಿ ಅನೇಕ ಹೆಸರುಗಳಿರುವದನ್ನು ವಿವರಿಸಿದ್ದಾರೆ

**ಎಲ್ಲ ವೇದಗಳು ವಿಷ್ಣುವಿನ ಸರ್ವೋತ್ಕೃಷ್ಟತ್ವ ಮತ್ತು ಸರ್ವ ವಿಲಕ್ಷಣತ್ವವನ್ನೇ ಹೇಳುವವು.**

**61.** **ಸರ್ವೇ ವೇದಾಃ ಹರೇರ್ಭೇದಂ ಸರ್ವಸ್ಮಾತ್ ಜ್ಞಾಪಯಂತಿ ಹಿ ।**
**ಭೇದಃ ಸ್ವಾತಂತ್ರ್ಯ ಸಾರ್ವಜ್ಞ ಸರ್ವೈಶ್ವರ್ಯಾದಿಕಶ್ಚ ಸಃ ॥**
**ಸ್ವರೂಪಮೇವ ಭೇದೋಽಯಂ ವ್ಯಾವೃತ್ತಿಶ್ಚ ಸ್ವರೂಪತಾ ।**
**ಸರ್ವವ್ಯಾವೃತ್ತಯೇ ಯಸ್ಮಾತ್ ಸ್ವಶಬ್ದೋಽಯಂ ಪ್ರಯುಜ್ಯತೇ**
**ಸರ್ವವ್ಯಾವೃತ್ತತಾಮೇವ ನೇತಿನೇತ್ಯಾದಿಕಾ ಶ್ರುತಿಃ ।**
**ವಿಷ್ಣೋರತೋ ವದೇದನ್ಯಾ ಅಪಿ ಸರ್ವಾ ನ ಸಂಶಯಃ ॥**

ಇತಿ ನಾರಾಯಣಶ್ರುತಿಃ

**ಅನುವಾದ**—(ಅಭೇದ ಪರವಾದ ಒಂದೂ ಆಗಮವಿಲ್ಲವೆಂದು ಮೇಲೆ ಹೇಳಿದರು. ಈಗ ಎಲ್ಲ ಆಗಮಗಳೂ ಭೇದಪರವಾಗಿವೆ ಎಂದು ಹೇಳುವರು) ಎಲ್ಲ ವೇದಗಳೂ ಎಲ್ಲ ಜೀವ-ಜಡ ಪದಾರ್ಥಗಳೊಡನೆ ಹರಿಗಿರುವ ಭೇದವನ್ನೇ ಹೇಳುವವು ಭೇದವು ಹರಿ ಯಲ್ಲಿರುವ ಸ್ವಾತಂತ್ರ್ಯ, ಸರ್ವಜ್ಞತ್ವ, ಸರ್ವೈಶ್ವರ್ಯ ಇತ್ಯಾದಿಗುಣಸ್ವರೂಪವೇ ಆಗಿದೆ. ಭೇದವು ಹರಿಯ ಸ್ವರೂಪವೇ ಆಗಿದೆ. ಆದ್ದರಿಂದ ಸ್ವಾತಂತ್ರ್ಯಾದಿರೂಪಭೇದಸ್ವರೂಪ ನಾದ ಹರಿಯಲ್ಲಿಯೇ ಆಗಮಗಳ ತಾತ್ಪರ್ಯವು. ಪರಮಾತ್ಮನಲ್ಲಿರುವ ಜೀವಜಡಗಳ ವ್ಯಾವೃತ್ತಿಯು ಪರಮಾತ್ಮ ಸ್ವರೂಪವೇ ಆಗಿದೆ ಸ್ವರೂಪಶಬ್ದದಲ್ಲಿಯ 'ಸ್ವ' ಶಬ್ದವು ಇತರ ಸರ್ವದಿಂದ ವ್ಯಾವೃತ್ತಿಯನ್ನು ತಿಳಿಸುವದಕ್ಕಾಗಿಯೇ ಪ್ರಯೋಗಿಸಲ್ಪಡುವದು.

' ನೇತಿ ನೇತಿ ' ಇತ್ಯಾದಿ ಶ್ರುತಿಯು ಪರಮಾತ್ಮನಲ್ಲಿ ಇತರ ಸರ್ವದಿಂದ ವ್ಯಾವೃತ್ತಿಯಿರುವದನ್ನೇ ಬೋಧಿಸುವದು ಇನ್ನಿತರ (ಯಃ ಸರ್ವಜ್ಞಃ ಇತ್ಯಾದಿ) ಶ್ರುತಿಗಳೂ ಇದನ್ನೇ ಹೇಳುವವು

**ವಿವರಣೆ**—ಎಲ್ಲ ವೇದಗಳೂ ಜೀವ ಜಡಗಳಿಂದ ಪರಮಾತ್ಮನಿಗೆ ಇರುವ ಭೇದವನ್ನೇ ಹೇಳುವವು ಇದರ ಮೇಲೆ ಒಂದು ಆಕ್ಷೇಪ ಬರುವದು. ಎಲ್ಲ ವೇದಗಳೂ ಪರಮಾತ್ಮನ ಸರ್ವೋತ್ಕೃಷ್ಟತ್ವವನ್ನೇ ಹೇಳುವವು ಎಂದು ಹಿಂದೆ ಹೇಳಿದಿರಿ ಈಗ ಭೇದವನ್ನು ಹೇಳುವವು ಎಂದು ಹೇಳುವಿರಿ. ಹೀಗೆ ಎರಡನ್ನು ಹೇಗೆ ಹೇಳುವವು ? ಇದಕ್ಕೆ ಸಮಾಧಾನವೆಂದರೆ ಪರಮಾತ್ಮನ ಸರ್ವೋತ್ಕೃಷ್ಟತ್ವ ಪ್ರತಿಪಾದಕವಾದ ಸ್ವಾತಂತ್ರ್ಯ ಸರ್ವಜ್ಞಾದಿಗುಣಗಳೂ ಅವನಲ್ಲಿರುವ ಜೀವ-ಜಡಗಳ ಭೇದವೂ ಬೇರೆ ಬೇರೆ ಅಲ್ಲ ಗುಣಗಳೇ ಭೇದ, ಭೇದವೇ ಗುಣಗಳು. ಈ ಗುಣಗಳೂ ಅವನ ಸ್ವರೂಪಕ್ಕಿಂತ ಭಿನ್ನವಾದವುಗಳಲ್ಲ ಅವನಲ್ಲಿರುವ ಜೀವ-ಜಡಗಳ ಭೇದ ಅಥವಾ ವ್ಯಾವೃತ್ತಿಯೂ ಭಿನ್ನವಲ್ಲ ಆದ್ದರಿಂದ ಆಗಮಗಳಿಗೆ ಪರಮಾತ್ಮನಲ್ಲಿ, ಅವನ ಸರ್ವೋತ್ಕೃಷ್ಟತ್ವದಲ್ಲಿ, ಅವನಲ್ಲಿರುವ ಜೀವ-ಜಡಗಳ ಭೇದದಲ್ಲಿ ತಾತ್ಪರ್ಯ ಎಂದು ಹೇಳಿದರೆ ಬೇರೆ ಬೇರೆ ವಿಷಯಗಳಲ್ಲಿ ಆಗಮಗಳ ತಾತ್ಪರ್ಯ ಎಂದು ಹೇಳಿದಂತಾಗುವದಿಲ್ಲ ಆದ್ದರಿಂದಲೇ ' ನೇತಿ ನೇತಿ ' ಎಂದು ಸರ್ವವ್ಯಾವೃತ್ತಿಯನ್ನು ಹೇಳುವ ಶ್ರುತಿಯೂ ಸರ್ವೋತ್ಕೃಷ್ಟತ್ವವನ್ನು ಹೇಳುವದು ' ಯಃ ಸರ್ವಜ್ಞಃ ' ಇತ್ಯಾದಿಯಾಗಿ ಸರ್ವೋತ್ಕೃಷ್ಟತ್ವವನ್ನು ಹೇಳುವ ಶ್ರುತಿಯೂ ವ್ಯಾವೃತ್ತಿಯನ್ನೂ ಹೇಳುವದು. ಆದ್ದರಿಂದ ಪರಮಾತ್ಮನ ಸರ್ವೋತ್ಕೃಷ್ಟತ್ವದಲ್ಲಿ ಎಲ್ಲ ಆಗಮಗಳ ತಾತ್ಪರ್ಯ ಎಂದು ಹಿಂದೆ ಹೇಳಿದ್ದಕ್ಕೂ ಭೇದದಲ್ಲಿ ಸರ್ವ ಆಗಮಗಳ ತಾತ್ಪರ್ಯ ಎಂದು ಈಗ ಹೇಳುವದಕ್ಕೂ ಯಾವ ವಿರೋಧ ಅಥವಾ ಅಸಂಗತಿಯೂ ಇಲ್ಲ.

**' ಅಹಂ ಬ್ರಹ್ಮಾಸ್ಮಿ ' ' ಸೋಽಹಮ್ ' ಇತ್ಯಾದಿಗಳು ಅಭೇದವನ್ನು ಹೇಳುವದಿಲ್ಲ.**

**62. ' ಅಹಂ ಬ್ರಹ್ಮಾಸ್ಮಿ ' ' ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್ ' ' ಯೋಽಸಾವಾದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ ' ಇತ್ಯಾದಿ ತು ಅಂತರ್ಯಾಮ್ಯಪೇಕ್ಷಯಾ । ' ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ ' ' ಅ ಇತಿ ಬ್ರಹ್ಮ ತತ್ರಾಗತಮಹಮಿತಿ ತಸ್ಯೋಪ-ನಿಷದಹಮ್ ' ಇತಿ**

**ಅಹಂ ನಾಮಾ ಹರಿರ್ನಿತ್ಯಮಹೇಯತ್ವಾತ್ ಪ್ರಕೀರ್ತಿತಃ ।**
**ತ್ವಂ ಚಾಸೌ ಪ್ರತಿಯೋಗಿತ್ವಾತ್ ಪರೋಕ್ಷತ್ವಾತ್ ಸ ಇತ್ಯಪಿ ॥**
**ಸರ್ವಾಂತರ್ಯಾಮಿಣಿ ಹರೌ ಅಸ್ಮಚ್ಛಬ್ದ ವಿಭಕ್ತಯಃ ।**
**ಯುಷ್ಮಚ್ಛಬ್ದಗತಾಶ್ಚೈವ ಸರ್ವಾಃ ತಚ್ಛಬ್ದಗಾ ಅಪಿ ॥**
**ಸರ್ವಶಬ್ದಗತಾಶ್ಚೈವ ವಚನಾನ್ಯಖಿಲಾನ್ಯಪಿ ।**
**ಸ್ವತಂತ್ರತ್ವಾತ್ ಪ್ರವರ್ತಂತೇ ವ್ಯಾವೃತ್ತ್ಯೇಽಪ್ಯಖಿಲಾತ್ ಸದಾ ॥**

**ತತ್ಸಂಬಂಧಾತ್ತು ಜೀವೇಷು ತತ್ಸಂಬಂಧಾದಚಿತ್ಸ್ವಪಿ ।**
**ವರ್ತಂತ ಉಪಚಾರೇಣ ತಿಙ್ಪದಾನ್ಯಖಿಲಾನ್ಯಪಿ ॥**
**ತಸ್ಮಾತ್ ಸರ್ವಗತೋ ವಿಷ್ಣುರೇಕೋ ಭಿಚ್ಛ ತತೋ ಬಹುಃ ।**

ಇತಿ ನಾರಾಯಣಶ್ರುತಿಃ

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಞಾನಂ ವಿದ್ಧಿ ಸಾತ್ವಿಕಮ್ ॥**

ಇತಿ ಭಗವದ್ವಚನಮ್ ।

**ಅನುವಾದ**—'ಅಹಂ ಬ್ರಹ್ಮಾಸ್ಮಿ' 'ತದ್ಯೋಽಹಂ ಸೋಽಸೌ' 'ಯೋಽಸಾವಾದಿತ್ಯೇ ಪುರುಷಃ' ಇತ್ಯಾದಿ ಶ್ರುತಿಗಳಲ್ಲಿ ಅಂತರ್ಯಾಮಿಯಾದ ಪರಮಾತ್ಮನನ್ನು ಉದ್ದೇಶಿಸಿ (ಅಹಂ ಪದದ) ಪ್ರಯೋಗವನ್ನು ಮಾಡಲಾಗಿದೆ (ಅಹಂ ಬ್ರಹ್ಮಾಸ್ಮಿ ಎಂಬುದಕ್ಕೆ ಅಹಂ ಅಂದರೆ ನನ್ನಲ್ಲಿ ಅಂತರ್ಯಾಮಿಯಾದವನು ಬ್ರಹ್ಮ ಅಸ್ಮಿ ಅಂದರೆ ದೇಶಕಾಲಗುಣಗಳಿಂದ ಪೂರ್ಣನಾಗಿದ್ದಾನೆ ಎಂದು ಅರ್ಥವು) 'ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್' ಎಂಬುದಕ್ಕೆ ನನ್ನಲ್ಲಿ ಅಂತರ್ಯಾಮಿಯಾದವನೇ ಸೂರ್ಯನಲ್ಲಿ ಅಂತರ್ಯಾಮಿಯಾಗಿರುವನು, ಸೂರ್ಯನಲ್ಲಿ ಅಂತರ್ಯಾಮಿಯಾದವನೇ ನನ್ನಲ್ಲಿ ಅಂತರ್ಯಾಮಿಯಾಗಿರುವನು ಎಂದು ಅರ್ಥವು ಇಲ್ಲಿ ಸ್ಥಾನಭೇದದಿಂದ ಅಂತರ್ಯಾಮಿಗಳಲ್ಲಿ ಭೇದವಿಲ್ಲವೆಂದು ಹೇಳಲಾಗಿದೆ 'ಯೋಽಸಾವಾದಿತ್ಯೇ ಪುರುಷ' ಸೋಽಹಮಸ್ಮಿ ಸ ಏವಾಹಮಸ್ಮಿ' ಎಂಬುದಕ್ಕೆ ಆದಿತ್ಯನಲ್ಲಿ ಅಂತರ್ಯಾಮಿಯಾದ ಪುರುಷನೇ ನನ್ನಲ್ಲಿಯೂ 'ಅಂತರ್ಯಾಮಿಯಾಗಿರುವನು' ಎಂದು ಅರ್ಥ (ಈ ಮೂರೂ ಶ್ರುತಿಗಳಲ್ಲಿಯೂ 'ಅಹಂ' ಶಬ್ದವನ್ನು ಮದಂತರ್ಯಾಮಿ ಎಂಬರ್ಥದಲ್ಲಿ ಉಪಯೋಗಿಸಲಾಗಿದೆ) 'ಸ ಯಶ್ಚಾಯಂ ಪುರುಷೋ ಯಶ್ಚಾಸಾವಾದಿತ್ಯೇ ಸ ಏಕಃ' ಪುರುಷನಲ್ಲಿದ್ದವನೂ ಆದಿತ್ಯನಲ್ಲಿದ್ದವನೂ ಒಬ್ಬನೇ ಆಗಿದ್ದಾನೆ (ಎಂಬ ಸಮಾಖ್ಯಾನವಿರುವದರಿಂದ 'ಅಹಂ' ಶಬ್ದಕ್ಕೆ ಅಂತರ್ಯಾಮಿಪರವಾಗಿ ಅರ್ಥಮಾಡಬೇಕು) 'ಅ' ಅಂದರೆ ಬ್ರಹ್ಮನು, 'ಅಹಂ' ಎಂಬುದೂ ಬ್ರಹ್ಮವಿಷಯಕವಾದುದೇ 'ಅಹಂ' ಎಂಬುದು ಬ್ರಹ್ಮನ ರಹಸ್ಯನಾಮವು

ಹರಿಯು ಯಾವಾಗಲೂ ಅಹೇಯನಾದ್ದರಿಂದ (ಯಾವಾಗಲೂ ಅವನನ್ನು ಬಿಟ್ಟಿರುವದು ಸಾಧ್ಯವಿಲ್ಲದ್ದರಿಂದ) ಅಹಂನಾಮಕನು, ಅಭಿಮುಖನಾದ್ದರಿಂದ ತ್ವಂ ಶಬ್ದವಾಚ್ಯನು, ಪರೋಕ್ಷನಾದ್ದರಿಂದ 'ಸಃ' ಶಬ್ದವಾಚ್ಯನು. ಸರ್ವಾಂತರ್ಯಾಮಿಯಾದ ಹರಿಯಲ್ಲಿ 'ಅಸ್ಮತ್' ಶಬ್ದದ ಎಲ್ಲ ವಿಭಕ್ತಿಯ ರೂಪಗಳೂ ಪ್ರವೃತ್ತವಾಗುವವು ಅವನಲ್ಲಿ 'ಯುಷ್ಮತ್' ಶಬ್ದದ ಎಲ್ಲ ರೂಪಗಳೂ 'ತತ್' ಶಬ್ದದ ಎಲ್ಲ ರೂಪಗಳೂ ಪ್ರವೃತ್ತವಾಗುವವು (ಅವನು ಎಲ್ಲ ಕಾರಕಗಳ ಪ್ರಧಾನಕ್ರಿಯೆಗಳಲ್ಲಿಯೂ ಅವಾಂತರಕ್ರಿಯೆಗಳಲ್ಲಿಯೂ ಸ್ವತಂತ್ರನಾದ್ದರಿಂದ) ಎಲ್ಲ ಶಬ್ದಗಳ ಎಲ್ಲ ವಿಭಕ್ತಿವಚನಗಳೂ ಅವನಲ್ಲಿ ಪ್ರವೃತ್ತವಾಗುವವು ಅವನು ವ್ಯಾವೃತ್ತ ಅಂದರೆ ಭೇದರಹಿತನಾದರೂ (ಅವನಲ್ಲಿ ಏಕತ್ವ ದ್ವಿತ್ವ

ಬಹುತ್ವ ಸಂಖ್ಯೆಗಳಿರುವದರಿಂದ) ಎಲ್ಲ ವಚನಗಳೂ ಪ್ರವೃತ್ತವಾಗುವವು. ಅವನ ಸಂಬಂಧದಿಂದ ಜೀವರಲ್ಲಿಯೂ, ಅವರ ಸಂಬಂಧದಿಂದ ಜಡವಸ್ತುವಿನಲ್ಲಿಯೂ ಶಬ್ದಗಳು ಪರಮಮುಖ್ಯವೃತ್ತಿ ಬಿಟ್ಟು ಬೇರೆ ವೃತ್ತಿಗಳಿಂದ ಪ್ರವೃತ್ತವಾಗುವವು ತಿಙಂತಪದಗಳೂ ಅವನಲ್ಲಿ ಪ್ರವೃತ್ತವಾಗುವವು ಆದ್ದರಿಂದ ಸರ್ವಗತನಾದ ವಿಷ್ಣುವು ಒಬ್ಬನೇ ಆಗಿದ್ದಾನೆ ಬಹು ಅಂದರೆ ಪೂರ್ಣನಾಗಿದ್ದಾನೆ. ತತಃ ಭಿಚ್ಚ ಅಂದರೆ ಎಲ್ಲ ಜೀವಜಡಗಳಿಂದ ಭಿನ್ನನೂ ಆಗಿದ್ದಾನೆ

'ಪರಮಾತ್ಮನೊಡನೆಯೂ ಪರಸ್ಪರವಾಗಿಯೂ ಭಿನ್ನವಾದ ಎಲ್ಲ ಚೇತನಾಚೇತನಗಳಲ್ಲಿ ಸ್ವಗತಭೇದವರ್ಜಿತನಾಗಿಯೂ, ಅವ್ಯಯನಾಗಿಯೂ, ಇರುವ ಸರ್ವೋತ್ತಮನಾದ ಪರಮಾತ್ಮನನ್ನು ತಿಳಿದುಕೊಳ್ಳುವ ಜ್ಞಾನವೇ ಸಾತ್ವಿಕಜ್ಞಾನವು' ಎಂದು ಭಗವಂತನು ಗೀತೆಯಲ್ಲಿ ಹೇಳಿದ್ದಾನೆ

**ವಿವರಣೆ**—ಆಪಾತತಃ ಅದ್ವೈತಕ್ಕೆ ಅನುಕೂಲವಾಗಿ ತೋರುವ 'ಅಹಂ ಬ್ರಹ್ಮಾಸ್ಮಿ' 'ಸೋಽಹಮ್' 'ಸ ಏವಾಹಮಸ್ಮಿ' ಇತ್ಯಾದಿ ಶ್ರುತಿಗಳಲ್ಲಿ ಬರುವ 'ಅಹಂ' ಅಂತರ್ಯಾಮಿಪರವಾಗಿದೆ 'ಅಹಂ' ಶಬ್ದಕ್ಕೆ 'ಅಹೇಯ' ಎಂದೂ ಅರ್ಥವಿದೆ. ಹೀಗೆ ಪರಮಾತ್ಮನಿಗೆ ಅನ್ವಯವಾಗುವ ಆಯಾ ಅರ್ಥಗಳನ್ನು ಪಡೆದು ಸಕಲ ಸರ್ವನಾಮಗಳೂ, ನಾಮಪದಗಳೂ, ತಿಙಂತಪದಗಳೂ ಹೀಗೆ ಎಲ್ಲ ಪದಗಳೂ ಎಲ್ಲ ವಿಭಕ್ತಿವಚನಗಳಲ್ಲಿಯೂ ಪರಮಾತ್ಮವಾಚಕಗಳಾಗಿವೆ ಪರಮಮುಖ್ಯವೃತ್ತಿಯಿಂದ ಅವನೇ ಸರ್ವಶಬ್ದವಾಚ್ಯನು. ಅವನ ಸಂಬಂಧದಿಂದ ಇತರ ಜೀವ-ಜಡ ಪದಾರ್ಥಗಳು ಯಥೋಚಿತವೃತ್ತಿಯಿಂದ ಆಯಾ ಪದವಾಚ್ಯಗಳು. 'ಅಹಂ' ಶಬ್ದವು ಪರಮಾತ್ಮನ ರಹಸ್ಯನಾಮ ಎಂಬಿತ್ಯಾದಿ ಸೂಕ್ಷ್ಮ ವಿಷಯಗಳನ್ನು ಇಲ್ಲಿ ತಿಳಿಸಿದ್ದಾರೆ.

**63. ನ ಚ ಅಸತ್ಯೋ ಭೇದಃ । 'ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ', 'ಸತ್ಯಃ ಸೋಽಸ್ಯ ಮಹಿಮಾ ಗೃಣೇ ಶವೋ ವಿಪ್ರರಾಜ್ಯೇ', 'ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ । ಮೈವಾರುವಣ್ಯೋ ಮೈವಾರುವಣ್ಯೋ ಮೈವಾರುವಣ್ಯಃ', 'ಆತ್ಮಾ ಹಿ ಪರಮಸ್ವತಂತ್ರಃ ಸರ್ವವಿತ್ ಸರ್ವಶಕ್ತಿಃ ಪರಮಸುಖಃ ಪರಮಃ, ಜೀವಸ್ತು ತದ್ವಶಃ ಅಲ್ಪಜ್ಞಃ ಅಲ್ಪಶಕ್ತಿಃ ಆರ್ತಃ ಅಲ್ಪಕಃ' ಇತ್ಯಾದಿಶ್ರುತಿಭ್ಯಃ ।**

**ಅನುವಾದ**—(ಯುಕ್ತಿಗಳಿಂದ ಭೇದಸತ್ಯತ್ವವನ್ನು ಹಿಂದೆ ಸಮರ್ಥಿಸಿರುವರು. ಈಗ ಶ್ರುತಿ ವಚನಗಳನ್ನು ಉದಾಹರಿಸಿ ಸಮರ್ಥಿಸುವರು). ಭೇದವು ಅಸತ್ಯವಲ್ಲ. 'ಸ್ತೋತ್ರಮಾಡುತ್ತಿರುವ ಇಂದ್ರನ ಮಿತ್ರನಾದ ವಿಷ್ಣುವನ್ನು ಆಶ್ರಯಿಸಿಕೊಂಡೇ ಎಲ್ಲ ಪ್ರಾಣಿಗಳು ಸುಖದಿಂದಿರುವವು' (ಹೀಗೆ ಪರಮಾತ್ಮನು ಉಪಜೀವ್ಯ, ಜೀವರು ಉಪಜೀವಕರಾಗಿ ಭಿನ್ನರಾಗಿರುವರು.) 'ಪರಮಾತ್ಮನ ಈ ಮಹಿಮೆಯು ಸತ್ಯವಾದುದು.

ಸತ್ಯವಾದ ಈ ಮಹಿಮೆಯನ್ನು ನಾನು ವಿಪ್ರರ ರಾಜ್ಯವಾದ ಯಜ್ಞಗಳಲ್ಲಿ ಸುಖಪ್ರಾಪ್ತಿಗಾಗಿ ಸ್ತುತಿಸುವೆನು ' 'ಪರಮಾತ್ಮನು ಸತ್ಯನು, ಜೀವರು ಸತ್ಯರು, ಭೇದವು ಸತ್ಯವು, ಭೇದವು ಸತ್ಯವು, ಭೇದವು ಸತ್ಯವು' (ಶಪಥರೂಪವಾದ ಉಕ್ತಿಯಾದ್ದರಿಂದ ಮೂರುಸಾರಿ ಹೇಳಲಾಗಿದೆ). ಪರಮಾತ್ಮನು ದೋಷಿಗಳಿಂದ ಭಜನೀಯನಲ್ಲ, ದೋಷಿಗಳಿಂದ ಭಜನೀಯನಲ್ಲ, ದೋಷಿಗಳಿಂದ ಭಜನೀಯನಲ್ಲ (ಆರುಭಿಃ ದೂಷಿಭಿಃ ವನ್ಯಃ ಭಜನೀಯಃ ವ್ಯೈವ) 'ಪರಮಾತ್ಮನು ಪರಮ ಸ್ವತಂತ್ರನು, ಸರ್ವಜ್ಞನು, ಸರ್ವಶಕ್ತಿಯು, ಪರಮಸುಖನು, ಸರ್ವೋತ್ತಮನು ಜೀವನು ಅವನಿಗೆ ಅಧೀನನು, ಅಲ್ಪಜ್ಞನು, ಅಲ್ಪಶಕ್ತಿಯು, ಆರ್ತನು, ಅಲ್ಪನು' ಎಂಬ ಶ್ರುತಿವಚನಗಳಿವೆ

ವಿವರಣೆ—ಗೃಣತಃ – ಸ್ತೋತ್ರಮಾಡುವ, ಮಘೋನಃ – ಇಂದ್ರನ, ರಾತಿಂ – ಮಿತ್ರನಾದ ವಿಷ್ಣುವನ್ನು, ಅನು—ಆಶ್ರಯಿಸಿಕೊಂಡು, ವಿಶ್ವೇ—ಎಲ್ಲ ಪ್ರಾಣಿಗಳೂ, ಮದಂತಿ—ಸುಖದಿಂದಿರುವರು

ಯಜ್ಞೇಷು ವಿಪ್ರರಾಜ್ಯೇ—ವಿಪ್ರರ ರಾಜ್ಯವಾದ ಯಜ್ಞಗಳಲ್ಲಿ, ಶವಃ—ಸುಖಪ್ರಾಪ್ತಿಗಾಗಿ, ಗೃಣೇ—ಸ್ತೋತ್ರಮಾಡುವೆನು

ಆರುಭಿಃ ದೂಷಿಭಿಃ ವನ್ಯಃ ಭಜನೀಯಃ ಆರುವಣ್ಯಃ, ವ್ಯೈವ ಆರುವಣ್ಯಃ ವ್ಯೈವಾರುವಣ್ಯಃ ಈ ಶ್ರುತಿಗಳಲ್ಲಿ ಪರಮಾತ್ಮನ ಸರ್ವೋತ್ತಮತ್ವವನ್ನೂ ಜೀವರ ಅಲ್ಪತ್ವವನ್ನೂ ಜೀವ-ಪರಮಾತ್ಮರ ಭೇದವನ್ನೂ ಪ್ರತಿಪಾದಿಸಲಾಗಿದೆ ಭೇದವು ಸತ್ಯವೆಂದು ಸಾರಲಾಗಿದ

**ಜೀವೇಶ್ವರ ಭೇದವು ವ್ಯಾವಹಾರಿಕವಲ್ಲ. ಮೋಕ್ಷವಾದ ಮೇಲೆಯೂ ಭೇದವು ಇರುವುದು.**

**64. ನ ಚ ಅವಾಂತರಸತ್ಯತ್ವಮಿದಂ ।**
**ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ।**
**ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ**
**ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ ಇಮಾನ್ ಲೋಕಾನ್**
**ಕಾಮಾನ್ ನೀಕಾಮರೂಪೀ ಅನುಸಂಚರನ್ ಏತತ್ ಸಾಮಗಾಯನ್ನಾಸ್ತೇ**
**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್**
**ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।**
**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಮ್**
**ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ॥**
**ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿ-**
**ನಿಷ್ಪದ್ಯತೇ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್**
**ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ಅಜ್ಞಾತಿಭಿರ್ವಾ**

'ಯತ್ರ ತು ಅಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ತತ್ ಕೇನ ಕಂ ಜಿಘ್ರೇತ್ ತತ್ ಕೇನ ಕಂ ವಿಜಾನೀಯಾತ್, ಯೇನೇದಂ ಸರ್ವಂ ವಿಜಾನಾತಿ ತಂ ಚ ಕೇನ ವಿಜಾನೀಯಾತ್ ವಿಜ್ಞಾತಾರಮರೇ ಕೇನ ವಿಜಾನೀಯಾತ್'

'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ'

'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ'

'ಅಮೃತಸ್ಯೈಷ ಸೇತುಃ'

ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ ।
ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ
ಈಶಮಾಶ್ರಿತ್ಯ ತಿಷ್ಠಂತಿ ಮುಕ್ತಾಃ ಸಂಸಾರಸಾಗರಾತ್ ।
ಯಥೇಷ್ಟಭೋಗಭೋಕ್ತಾರಃ ಬ್ರಹ್ಮಾಂತಾ ಉತ್ತರೋತ್ತರಮ್ ॥
ಇತಿ ನೋಕ್ತಾನಂತರಂ ಭೇದಶ್ರುತಿಭ್ಯಃ ।
ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇऽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।
ಇತಿ ಭಗವದ್ವಚನಮ್ ।

ಓಂ ಜಗದ್ವ್ಯಾಪಾರವರ್ಜ್ಯಮ್ ಓಂ, ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ ಇತ್ಯಾದಿ ಚ ।

ಅನುವಾದ—(ಭೇದವು ವ್ಯಾವಹಾರಿಕವಲ್ಲ ಅದು ಸತ್ಯ ಯಾಕಂದರೆ ಮುಕ್ತಿಯ ನಂತರವೂ ಭೇದವಿರುವದು ಅನೇಕ ಶ್ರುತಿಸ್ಮೃತಿವಚನಗಳಿಂದ ಸ್ಪಷ್ಟವಾಗುತ್ತದೆ ಎಂದು ವಿವರಿಸುವರು) ಭೇದಶ್ರುತಿಗಳು ಹೇಳುವ ಸತ್ಯತ್ವವು ವ್ಯಾವಹಾರಿಕ ಸತ್ಯತ್ವವು ಎಂಬುದು ಸರಿಯಲ್ಲ ಯಾಕಂದರೆ 'ಯಾರು ಹೃದಯಗುಹೆಯಲ್ಲಿಯೂ ಪರಮವ್ಯೋಮದಲ್ಲಿಯೂ ಇರುವವನನ್ನು ತಿಳಿದುಕೊಳ್ಳುವನೋ ಅವನು ಸರ್ವಜ್ಞನಾದ ಪರಮಾತ್ಮನೊಡನಿದ್ದು ಎಲ್ಲ ಭೋಗಗಳನ್ನೂ ಭೋಗಿಸುವನು ಆನಂದಮಯನಾದ ಪರಮಾತ್ಮನ ಸಮೀಪಕ್ಕೆ ಹೋಗಿ, ಈ ಲೋಕಗಳಲ್ಲಿ ಸಂಚರಿಸುತ್ತ, ಯಥೇಚ್ಛಿತವಾದ ರೂಪವುಳ್ಳವನಾಗಿ, ಯಥೇಚ್ಛಿತವಾದ ಭೋಗಗಳನ್ನು ಪಡೆಯುತ್ತ ಈ ಸಾಮದ ಗಾಯನವನ್ನು ಮಾಡುತ್ತಿರುವನು'

"ತ್ವಃ ಬ್ರಹ್ಮಾ ಅಂದರೆ ಓರ್ವ ಚತುರ್ಮುಖಬ್ರಹ್ಮನು 'ಋಕ್'ಗಳ ಉಚ್ಚಾರಣೆಯನ್ನು ಪರಿಪುಷ್ಟವಾಗಿ ಮಾಡುತ್ತಿರುವನು ತ್ವಃ ಓರ್ವ ಚತುರ್ಮುಖಬ್ರಹ್ಮನು 'ಋಕ್'ಗಳಲ್ಲಿ ಗಾಯತ್ರ ಸಾಮವನ್ನು ಹಾಡುವನು ತ್ವಃ ಓರ್ವ ಚತುರ್ಮುಖಬ್ರಹ್ಮನು ಜಾತವಿದ್ಯಾಂ ಅಂದರೆ ಪೌರುಷೇಯೀವಿದ್ಯೆಯನ್ನು ಹೇಳುತ್ತಿರುವನು ಓರ್ವ ಚತುರ್ಮುಖ ಬ್ರಹ್ಮನು ಯಜ್ಞಸ್ಯ ಅಂದರೆ ವಿಷ್ಣುವಿನ ಮಾತ್ರಾಂ ಅಂಶವನ್ನೇ ವಿಮಿಮೀತೇ ಧ್ಯಾನ

ಮಾಡುತ್ತಿರುವನು" (ಅತೀತಕಲ್ಪಗಳಲ್ಲಿಯ ಮುಕ್ತರಾದ ಚತುರ್ಮುಖಬ್ರಹ್ಮರ ವಿಷಯ ಇಲ್ಲಿ ಹೇಳಿದೆ)

"ಪರಂಜ್ಯೋತಿಃ ಅಂದರೆ ಪರಮಾತ್ಮನನ್ನು ಪಡೆದು ತನ್ನ ಸ್ವರೂಪಾವಿರ್ಭಾವವನ್ನು ಪಡೆಯುವನು ಇಂಥವನು ಅಲ್ಲಿ ಭಕ್ಷಿಸುತ್ತ, ಕ್ರೀಡಿಸುತ್ತ, ಸ್ತ್ರೀಯರು ಮತ್ತು ಯಾನ ಗಳಿಂದ ರಮಣಮಾಡುತ್ತ ಜ್ಞಾತಿಗಳು ಅಂದರೆ ತನ್ನೊಡನೇ ಮುಕ್ತರಾದವರು, ಅಜ್ಞಾತಿ ಗಳು ಅಂದರೆ ಕಲ್ಪಾಂತರದಲ್ಲಿ ಮುಕ್ತರಾದವರು ಇವರೊಡನೆ ಪರ್ಯಟನ ಮಾಡುವನು".

(ಮುಕ್ತಿಯಲ್ಲಿ ನಿರ್ವಿಶೇಷಚಿನ್ಮಾತ್ರರೂಪವಾದ) ಆತ್ಮವು ಮಾತ್ರ ಉಳಿಯುವ ದಾದರೆ (ಮುಕ್ತನಾದವನು) ಯಾವದರಿಂದ ಏನನ್ನು ನೋಡಬೇಕು? ಯಾವದರಿಂದ ಏನನ್ನು ಆಘ್ರಾಣಿಸಬೇಕು? (ಅಂದರೆ ದರ್ಶನ-ಅಘ್ರಾಣನಾದಿಭೋಗಗಳನ್ನು ಹೇಗೆ ಪಡೆಯಬೇಕು?) ಯಾವದರಿಂದ ಏನನ್ನು ತಿಳಿದುಕೊಳ್ಳಬೇಕು? ಯಾರಿಂದ ಈ ಎಲ್ಲ ವನ್ನೂ ತಿಳಿದುಕೊಳ್ಳುವನೋ ಅವನನ್ನು ಯಾವದರಿಂದ ತಿಳಿದುಕೊಳ್ಳಬೇಕು? ತಿಳಿದು ಕೊಳ್ಳುವವನಾದ ತನ್ನನ್ನೇ ತಾನು ಹೇಗೆ ತಿಳಿದುಕೊಳ್ಳಬೇಕು? (ಇದು ಮುಕ್ತಿಯಿಂದ ನಿರ್ವಿಶೇಷಚಿನ್ಮಾತ್ರವು ಮಾತ್ರ ಉಳಿಯುವದೆಂಬ ವಾದವನ್ನು ಆಕ್ಷೇಪಿಸುವ ಶ್ರುತಿಯು).

"ಹೇಗೆ ಶುದ್ಧವಾದ ನೀರನ್ನು ಶುದ್ಧವಾದ ನೀರಿನಲ್ಲಿ ಸುರಿದರೆ ಆಗುವದೋ ಹಾಗೆಯೇ ಆಗುವದು"

"ಆಗ ಜ್ಞಾನಿಯು ಅನಿಷ್ಟಪುಣ್ಯ ಮತ್ತು ಪಾಪಗಳನ್ನು ಕಳೆದುಕೊಂಡು ನಿರ್ಲಿಪ್ತ ನಾಗಿ ಪರಮಾತ್ಮನೊಡನೆ ನಿರ್ದುಃಖತ್ವಾದಿರೂಪ ಸಾದೃಶ್ಯವನ್ನು ಪಡೆಯುವನು"

"ಏಷಃ ಅಂದರೆ ಪರಮಾತ್ಮನು ಮುಕ್ತರಾದವರಿಗೆ ಸೇತುವಿನಂತೆ ಆಶ್ರಯನು"

ಮುಕ್ತರು "ಅಕ್ಷಣ್ವಂತಃ ಕರ್ಣವಂತಃ ಅಂದರೆ ಕಣ್ಣು-ಕಿವಿಗಳ ಕಾರ್ಯ ಫಲಗಳುಳ್ಳವರಾಗಿರುವರು, ಸಖಾಯಃ ಅಂದರೆ ಪರಸ್ಪರ ಪ್ರೀತಿಯುಳ್ಳವರಾಗಿರುವರು, ಮನೋಜವೇಷು ಅಸಮಾಃ ಅಂದರೆ ಪ್ರಜ್ಞಾದಿಗುಣಗಳಲ್ಲಿ ಪರಸ್ಪರ ತಾರತಮ್ಯವುಳ್ಳವ ರಾಗಿರುವರು, ಇವರಲ್ಲಿ ಕೆಲವರು ಆದಘ್ನಾಸಃ ಅಂದರೆ ವಿಪುಲವಾದ ಕ್ಷೀರಾಬ್ಧಿಯುಳ್ಳವರು (ಅಂದರೆ ಕ್ಷೀರಾಬ್ಧಿಯಲ್ಲಿ ಕ್ರೀಡಿಸುವವರು) ಆಗಿರುವರು, ಇನ್ನು ಕೆಲವರು ಉಪಕಕ್ಷಾಸಃ ಅಂದರೆ ವನಕ್ರೀಡಾನಿರತರಾಗಿರುವರು, ಸ್ನಾನಮಾಡಲು ಯೋಗ್ಯವಾದ ಮಡುಗಳಂತೆ ಗಂಭೀರವಾಗಿರುವರು, ಪರಮೇಶ್ವರನ ದರ್ಶನವನ್ನು ಪಡೆಯುತ್ತಿರುವರು"

"ಈ ಜ್ಞಾನವನ್ನು ಪಡೆದು ನನ್ನ ಸಾಧರ್ಮ್ಯವನ್ನು ಪಡೆದ (ಮುಕ್ತರು) ಸೃಷ್ಟಿಕಾಲ ದಲ್ಲಿ ಮತ್ತೆ ಹುಟ್ಟುವದಿಲ್ಲ ಮತ್ತು ಪ್ರಲಯಕಾಲದಲ್ಲಿ ವ್ಯಥೆಯುಳ್ಳವರಾಗುವದಿಲ್ಲ"

"ಮುಕ್ತರು ಜಗತ್ತಿನ ಸೃಷ್ಟಿ ನಿಯಮಾದಿ ವ್ಯಾಪಾರಗಳನ್ನು ಬಿಟ್ಟು ಸ್ವಯೋಗ್ಯ ವಾದ ಸರ್ವಕಾಮನೆಗಳನ್ನು ಪಡೆಯುವರು (ಸರ್ವಾನ್ ಕಾಮಾನ್ ಆಪ್ತ್ವಾ ಇತ್ಯಾದಿ ಯಾದುದು) ಜೀವಪ್ರಕರಣದಲ್ಲಿರುವದರಿಂದಲೂ ಜೀವನಿಗೆ ಸೃಷ್ಟಿಕರ್ತೃತ್ವಾದಿ ವ್ಯಾಪಾರಗಳ

ಸಾಮರ್ಥ್ಯವಿಲ್ಲದೇ ಇರುವದರಿಂದಲೂ (ಮುಕ್ತಜೀವನು ಪಡೆಯುವ ಕಾಮನೆಗಳಿಗೆ) ಸೃಷ್ಟ್ಯಾದಿ ಜಗದ್ವ್ಯಾಪಾರಗಳನ್ನು ಬಿಟ್ಟು ಎಂಬ ಈ ಸಂಕೋಚವನ್ನು ಮಾಡಲಾಗಿದೆ

**ವಿವರಣೆ**—ಈ ಮೇಲೆ ಕೊಟ್ಟ ಎಲ್ಲ ಶ್ರುತಿವಚನಗಳಿಂದಲೂ ಮುಕ್ತಿಯಲ್ಲಿಯೂ ಜೀವ-ಪರಮಾತ್ಮರ ಭೇದವಿರುವದು ಸ್ಪಷ್ಟವಾಗುತ್ತದೆ. 'ಯೋ ವೇದ ನಿಹಿತಮ್' ಇತ್ಯಾದಿಯಾದ ಶ್ರುತಿಯಲ್ಲಿ 'ಬ್ರಹ್ಮಣಾ ಸಹ' ಮತ್ತು 'ಉಪಸಂಕ್ರಮ್ಯ' ಎಂಬುದರಿಂದ ಮುಕ್ತಜೀವನಿಗೂ ಬ್ರಹ್ಮನಿಗೂ ಇರುವ ಭೇದವು ವ್ಯಕ್ತವಾಗುತ್ತದೆ ಸಹಭಾವವಾಗಲೀ ಉಪಸಂಕ್ರಮಣ ಅಂದರೆ ಸಮೀಪಪ್ರಾಪ್ತಿಯಾಗಲೀ ಭೇದವಿಲ್ಲದೆ ಆಗಲಾರದು.

'ಋಚಾಂ ತ್ವಃ ಪೋಷಮಾಸ್ತೇ' ಇತ್ಯಾದಿಯಾದ ಮಂತ್ರವು ಮೋಕ್ಷವಿಷಯಕವಾದುದು ಋತ್ವಿಗ್ ವಿಷಯಕವಾದುದಲ್ಲ ಇಲ್ಲಿ ಉಲ್ಲೇಖಿಸಿದ ನಾಲ್ಕು ಜನ ಚತುರ್ಮುಖಬ್ರಹ್ಮರು ಗತಕಲ್ಪಗಳಲ್ಲಿ ಮುಕ್ತರಾದವರು ಋತ್ವಿಕ್ ಆದ ಬ್ರಹ್ಮನನ್ನು ಈ ಮಂತ್ರದಲ್ಲಿ ತೆಗೆದುಕೊಳ್ಳಲು ಬರುವದಿಲ್ಲ. ಅವನು ಒಬ್ಬನೇ ಇರುವದು ಅಲ್ಲದೆ ಅವನು ಜಾತವಿದ್ಯಾ ಅಂದರೆ ಪೌರುಷೇಯೀವಿದ್ಯೆಯನ್ನು ಹೇಳಲು ಸಮರ್ಥನಲ್ಲ. 'ಯಜ್ಞಸ್ಯ ಮಾತ್ರಾಮ್' ವಿಷ್ಣುವಿನ ಅಂಶವನ್ನು ಧ್ಯಾನಮಾಡಲೂ ಸಮರ್ಥನಾಗಿಲ್ಲ. ಆದುದರಿಂದ ಈ ಮಂತ್ರವು ಮೋಕ್ಷವಿಷಯಕವಾದುದು ಇದರಿಂದ ಮುಕ್ತರಾದ ನಾಲ್ಕುಜನ ಚತುರ್ಮುಖಬ್ರಹ್ಮರ ಉಲ್ಲೇಖವಿರುವದರಿಂದ ಮುಕ್ತಿಯಲ್ಲಿ ಜೀವ-ಪರಮಾತ್ಮರ ಭೇದವಿರುವದು ಸ್ಪಷ್ಟವಾಗುತ್ತದೆ

'ಪರಂಜ್ಯೋತಿರುಪಸಂಪದ್ಯ' ಇತ್ಯಾದಿಯಾದ ಶ್ರುತಿಯಲ್ಲಿಯೂ 'ಉಪಸಂಪದ್ಯ' ಅಂದರೆ ಸಮೀಪಕ್ಕೆ ಹೋಗಿ ಎಂಬುದರಿಂದ ಭೇದವು ವ್ಯಕ್ತವಾಗುತ್ತದೆ

'ಯತ್ರ ತು ಅಸ್ಯ ಆತ್ಮೈವಾಭೂತ್' ಇತ್ಯಾದಿಯಾದ ಶ್ರುತಿಯಲ್ಲಿ ಮುಕ್ತಿಯಲ್ಲಿ ನಿರ್ವಿಶೇಷಚಿನ್ಮಾತ್ರವಾದ ಆತ್ಮೈಕ್ಯವನ್ನು ಅಂಗೀಕರಿಸಿದರೆ ಬರುವ ಅನುಪಪತ್ತಿಗಳನ್ನೆಲ್ಲ ಆಕ್ಷೇಪಮುಖದಿಂದ ಹೇಳಲಾಗಿದೆ

'ಯಥೋದಕಂ ಶುದ್ಧೇ ಶುದ್ಧಮ್' ಇತ್ಯಾದಿ ಶ್ರುತಿಯಲ್ಲಿ 'ತಾದೃಗೇವ ಭವತಿ' ಅದರಂಥದೇ ಆಗುವದು ಎಂದು ಸಾದೃಶ್ಯವನ್ನು ಹೇಳಿದೆಯೇ ಹೊರತು 'ತದೇವಭವತಿ' ಅದೇ ಆಗುವದು ಎಂದು ಐಕ್ಯವನ್ನು ಹೇಳಿಲ್ಲ 'ತದಾ ವಿದ್ವಾನ್' ಇತ್ಯಾದಿಯಾದ ಶ್ರುತಿಯಲ್ಲಿಯೂ 'ಸಾಮ್ಯಮ್' ಎಂದು ಮುಕ್ತಜೀವನಿಗೆ ಪರಮಾತ್ಮನೊಡನೆ ನಿರ್ದುಃಖತ್ವಾದಿ ಸಾದೃಶ್ಯವನ್ನು ಹೇಳಿದೆಯೇ ಹೊರತು ಐಕ್ಯವನ್ನು ಹೇಳಿಲ್ಲ. 'ಅಮೃತಸ್ಯ ಏಷಃ ಸೇತುಃ' ಎಂಬಲ್ಲಿಯೂ ಪರಮಾತ್ಮನು ಮುಕ್ತರಿಗೆ ಆಶ್ರಯನೆಂದು ಹೇಳಿ ಭೇದವನ್ನೇ ಸ್ಪಷ್ಟಪಡಿಸಿದೆ.

'ಅಕ್ಷಣ್ವಂತಃ ಕರ್ಣವಂತಃ ಸಖಾಯಃ' ಇತ್ಯಾದಿಯಾದ ಶ್ರುತಿಯು ಮುಕ್ತರನ್ನು ವರ್ಣಿಸುತ್ತದೆ. ಈ ವರ್ಣನೆಯಿಂದ ಮುಕ್ತರಿಗೂ ಪರಮಾತ್ಮನಿಗೂ ಇರುವ ಭೇದವೂ

ಮುಕ್ತರಲ್ಲಿ ಪರಸ್ಪರ ಇರುವ ಭೇದವೂ ಸ್ಪಷ್ಟವಾಗುತ್ತವೆ ಈ ಶ್ರುತಿಯ ವ್ಯಾಖ್ಯಾನರೂಪವಾದ ಆಗಮವು ಕೆಳಗಿನಂತಿದೆ.

ಶ್ರುತ್ವಾ ವಿಷ್ಣುಂ ಕರ್ಣಫಲಮಾಪ್ತತ್ವಾತ್ ಕರ್ಣಸಂಯುತಾಃ ।
ಅಕ್ಷಣ್ವಂತೋ ದರ್ಶನಾಚ್ಚ ವಿಷ್ಣೋರ್ಮುಕ್ತಾಸ್ತು ಯೇ ಗುಣಾಃ ॥
ತಾರತಮ್ಯಂ ಚ ತೇಷಾಂ ಚ ಶ್ರುತಾವುದಿತಮಂಜಸಾ ।
ಕ್ಷೀರಸಾಗರದಘ್ನಾಸ್ತು ಕೇಚಿತ್ ತಿಷ್ಠಂತಿ ಮುಕ್ತಿಗಾಃ ॥
ಉಪಸ್ಥಿತಾ ಬ್ರಹ್ಮವನಂ ಕೇಚಿದಶ್ವತ್ಥಮಂಡಲಮ್ ।
ಏಕೇ ಹೃದೇ ಕೇಚಿದಪಿ ದೇವಾ ಏತೇ ಸದಾ ಹರಿಮ್ ॥
ನಾಗಭೋಗಶಯಂ ಮುಕ್ತಾ ದದೃಶೇಽಧಿಕಮೋದಿನಃ ।
ಸಾಗರಾದಿಸ್ಥಿತಾ ವಿಷ್ಣುಂ ಪಶ್ಯಂತಿ ಕ್ವಚಿದೇವ ಹಿ ॥

'ಅಕ್ಷಣ್ವಂತಃ' ಇತ್ಯಾದಿಯಾದ ಮಂತ್ರದ ವ್ಯಾಖ್ಯಾನವಾದ ಈ ಆಗಮದಿಂದ ಈ ಮಂತ್ರವು ಮುಕ್ತವಿಷಯಕವಾದುದೂ ಇದರಲ್ಲಿ ಭೇದವನ್ನು ಪ್ರತಿಪಾದಿಸಿದ್ದೂ ಸ್ಪಷ್ಟವಾಗುತ್ತದೆ

'ಇದಂ ಜ್ಞಾನಮುಪಾಶ್ರಿತ್ಯ' ಎಂಬ ಗೀತೆಯ ವಚನದಲ್ಲಿಯೂ ಸಾಧರ್ಮ್ಯವನ್ನೇ ಹೇಳಿದೆ ಐಕ್ಯವನ್ನು ಹೇಳಿಲ್ಲ 'ಜಗದ್ವ್ಯಾಪಾರವರ್ಜಮ್' ಎಂಬ ಸೂತ್ರದಲ್ಲಿ ಜಗತ್ತಿನ ಸೃಷ್ಟಿನಿಯಮನಾದಿ ವ್ಯಾಪಾರಗಳನ್ನು ಬಿಟ್ಟು ಎಂದು ಮುಕ್ತಜೀವರ ವ್ಯಾಪಾರಕ್ಕೆ ಪರಿಮಿತಿಯನ್ನು ಹಾಕಿದ್ದರಿಂದ ಮುಕ್ತಜೀವ-ಪರಮಾತ್ಮರ ಭೇದವು ಸ್ಪಷ್ಟವಾಗುತ್ತದೆ. ಹೀಗೆ ಮುಕ್ತರಾದಮೇಲೆ ಜೀವರು ಪರಮಾತ್ಮನಿಂದ ಭಿನ್ನರಾದ್ದರಿಂದ ಭೇದವು ಸತ್ಯವೇ ಆಗಿದೆ. ವ್ಯಾವಹಾರಿಕ ಅಥವಾ ಅವಾಂತರ ಸತ್ಯತ್ವವುಳ್ಳದ್ದಾಗಿಲ್ಲ.

**'ಯತ್ರ ತು ಅಸ್ಯ ಸರ್ವಮಾತ್ಮೈವ ಅಭೂತ್' ಎಂಬ ಶ್ರುತಿಯಲ್ಲಿ ಆತ್ಮೈಕ್ಯವನ್ನು ಹೇಳಿಲ್ಲ.**

**65. 'ಅವಿನಾಶೀ ವಾ ಅರೇಽಯಮಾತ್ಮಾಽನುಚ್ಛಿತ್ತಿಧರ್ಮಾ' ಇತಿ ತದ್ಧರ್ಮಾಣಾಮಪಿ ಅನುಚ್ಛಿತ್ತೇಃ ಪ್ರಸ್ತುತತ್ವಾತ್ ।**

**'ಅತ್ರೈವ ಮಾ ಭಗವಾನ್ ಮೋಹಾಂತಮಾಪಿಪತ್ ನ ಪ್ರೇತ್ಯ ಸಂಜ್ಞಾಸ್ತಿ' ಇತಿ ಸಂಜ್ಞಾನಾಶಸ್ಯ ದೋಷತ್ವೇನೋಕ್ತತ್ವಾತ್ ।**

**'ಯತ್ರ ತು ಅಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್' ಇತಿ ಹಿ ಆಕ್ಷೇಪ ಏವ । ನ ಹಿ ಭೋಗಾಭಾವಃ, ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ವಿಜ್ಞಾತುಃ ಅವಿಜ್ಞಾನಂ ಚ ಅಪೇಕ್ಷಿತಮ್ ।**

ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ ।
ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ॥

ಇತಿ ಪರಮಶ್ರುತಿಃ ।

ಮಗ್ನಸ್ಯ ಹಿ ಪರೇsಜ್ಞಾನೇ ಕಿಂ ನ ದುಃಖತರಂ ಭವೇತ್ ।

ಇತಿ ಮೋಕ್ಷಧರ್ಮೇ ।

ಅನುವಾದ—('ಯತ್ರ ತು ಅಸ್ಯ ಸರ್ವಮಾತ್ಮೈವಾಭೂತ್' ಇತ್ಯಾದಿ ಶ್ರುತಿಯನ್ನು ಮುಕ್ತಾವಸ್ಥೆಯಲ್ಲಿ ಭೇದವನ್ನು ಪ್ರತಿಪಾದಿಸುವ ಪ್ರಮಾಣವಚನಗಳಲ್ಲಿ ಒಂದನ್ನಾಗಿ ಮೇಲೆ ಕೊಟ್ಟಿರುವರು. ಆದರೆ ಈ ಶ್ರುತಿಯಲ್ಲಿ ಸಂಸಾರದಶೆಯಲ್ಲಿ ಭೇದವನ್ನೂ ಮುಕ್ತಿದಶೆಯಲ್ಲಿ ಅಭೇದವನ್ನೂ ಹೇಳಿದೆ ಎಂದು ಅದ್ವೈತಿಗಳು ವಾದಿಸುವರು. ಈ ವಾದ ಸರಿಯಲ್ಲ ಈ ಶ್ರುತಿಯಲ್ಲಿ ಮುಕ್ತಿಯಲ್ಲಿ ನಿರ್ವಿಶೇಷ ಚೈತನ್ಯವು ಮಾತ್ರ ಉಳಿಯುವ ಆತ್ಮೈಕ್ಯವನ್ನು ಹೇಳಿದರೆ ಮುಕ್ತರಿಗೆ ಜ್ಞಾನವೂ ಭೋಗವೂ ಇಲ್ಲದಂಥ ಪ್ರಸಂಗ ಬರುವದು ಎಂದು ಪ್ರಸಂಗಾಪಾದನರೂಪವಾದ ಆಕ್ಷೇಪವನ್ನು ಮಾಡಿ ವಿಪರ್ಯಯ ಪರ್ಯವಸಾನದಿಂದ ಆತ್ಮೈಕ್ಯವನ್ನು ಖಂಡಿಸಿದ್ದಾರೆ ಎಂಬುದನ್ನು ಈ ಶ್ರುತಿಯ ಪೂರ್ವಾಪರ ಸಂದರ್ಭ ಮತ್ತು ಅರ್ಥವನ್ನು ವಿವರಿಸಿ ಇಲ್ಲಿ ತಿಳಿಸುತ್ತಾರೆ).

'ಅವಿನಾಶೀ ವಾ ಅರೇ ಅಯಮಾತ್ಮಾ ಅನುಚ್ಛಿತ್ತಿಧರ್ಮಾ' ಮುಕ್ತನಾದ ಈ ಜೀವಾತ್ಮನ ಸ್ವರೂಪನಾಶವಾಗುವದಿಲ್ಲ ಅವನ ಜ್ಞಾನಾದಿ ಧರ್ಮಗಳ ನಾಶವೂ ಆಗುವದಿಲ್ಲ' ಎಂದು (ಪೂರ್ವ ವಾಕ್ಯದಲ್ಲಿ ಯಾಜ್ಞವಲ್ಕ್ಯರಿಂದಲೇ) ಪ್ರಸ್ತುತವಾಗಿದೆ. (ಇದಕ್ಕೂ ಮೊದಲು 'ನ ಪ್ರೇತ್ಯ ಸಂಜ್ಞಾ ಅಸ್ತಿ' ಮುಕ್ತನಾದಮೇಲೆ ಜ್ಞಾನವಿಲ್ಲ ಎಂದು ಯಾಜ್ಞವಲ್ಕ್ಯರು ಹೇಳಿದ್ದಕ್ಕೆ) 'ಅತ್ರೈವ ಮಾ ಭಗವಾನ್ ಮೋಹಾಂತ–ಮಾಪಿಪತ್ ನ ಪ್ರೇತ್ಯ ಸಂಜ್ಞಾ ಅಸ್ತಿ' ಪೂಜ್ಯರೇ ಮುಕ್ತನಾದಮೇಲೆ ಜ್ಞಾನವಿಲ್ಲವೆಂದು ಹೇಳಿ (ಮುಕ್ತರು ಪರಮಾತ್ಮನ ಜ್ಞಾನವನ್ನು ಪಡೆಯುವ) ಈ ಮಹತ್ವದ ವಿಷಯದಲ್ಲಿಯೇ ನನಗೆ ಮೋಹವನ್ನುಂಟುಮಾಡಿದಿರಿ' ಎಂದು ಮೈತ್ರೇಯಿಯು (ಮುಕ್ತರಿಗೆ) ಜ್ಞಾನವಿಲ್ಲವೆಂದು ಹೇಳವದು ದೋಷ ಎಂದು ಹೇಳಿದ್ದಾಳೆ. (ಯಾಜ್ಞವಲ್ಕ್ಯರು ಮುಕ್ತರಿಗೆ ವೃತ್ತಿಜ್ಞಾನವಿಲ್ಲ ಎಂದು ಮಾತ್ರ ಹೇಳಿದ್ದರು. ಆದರೆ ಮೈತ್ರೇಯಿಯು ಮುಕ್ತರಿಗೆ ಸರ್ವಥಾ ಜ್ಞಾನವಿಲ್ಲ ಎಂದು ಹೇಳಿದ್ದಾರೆ ಎಂಬ ತಪ್ಪುಕಲ್ಪನೆಯಿಂದ ಈ ದೋಷೋದ್ಭಾವನೆಯನ್ನು ಮಾಡಿದಳು. ಅದಕ್ಕೆ ಯಾಜ್ಞವಲ್ಕ್ಯರು ಮುಕ್ತರ ಸ್ವರೂಪನಾಶವಾಗಲೀ ಜ್ಞಾನಾದಿ ಧರ್ಮಗಳ ನಾಶವಾಗಲೀ ಆಗುವದಿಲ್ಲ ಎಂದು ಹೇಳಿದರು ಈ ಪೂರ್ವ ಸಂದರ್ಭದಿಂದ ಮುಕ್ತರಿಗೆ ಜ್ಞಾನ-ಭೋಗಗಳಿಲ್ಲ ಎಂದು 'ಯತ್ರ ತು ಅಸ್ಯ ಸರ್ವಮಾತ್ಮೈವಾಭೂತ್' ಎಂಬಲ್ಲಿ ಪ್ರಸ್ತಾಪಿಸಿದ್ದು, ಹೀಗೆ ಇವು ಇಲ್ಲದ ಪ್ರಸಂಗ ಬರುವದು ಎಂಬ ಪ್ರಸಂಗಾಪಾದನ ರೂಪ ಆಕ್ಷೇಪವೇ ಆಗಿದೆ. ಇದನ್ನು ಇನ್ನು ಮುಂದೆ ವಿವರಿಸುವರು.)

'ಯತ್ರ ತು ಅಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್' ಮುಕ್ತಿ ದಶೆಯಲ್ಲಿ ನಿರ್ವಿಶೇಷ ಚಿನ್ಮಾತ್ರರೂಪವಾದ ಆತ್ಮೈಕ್ಯವು ಮಾತ್ರ ಉಳಿದರೆ ಆಗ (ಮುಕ್ತನು) ಯಾವುದರಿಂದ ಯಾರನ್ನು ನೋಡಬೇಕು? ಎಂಬುದು ಪ್ರಸಂಗಾಪಾದನ ರೂಪವಾದ ಆಕ್ಷೇಪವೇ ಆಗಿದೆ (ಮುಕ್ತನು ಯಾವ ಜ್ಞಾನವೂ ಭೋಗವೂ ಇಲ್ಲದಿರುವನು ಎಂದು ಹೇಳುವ ಪ್ರಸಂಗ ಬರುವದು ಎಂದು ಅಭಿಪ್ರಾಯವು). (ಮುಕ್ತರಿಗೆ ಭೋಗದ ಅಭಾವವನ್ನಾಗಲೀ, ತಿಳಿದುಕೊಳ್ಳುವವನನ್ನೇ ಯಾರಿಂದ ತಿಳಿದುಕೊಳ್ಳುವನು? ಎಂದು ತಿಳಿದುಕೊಳ್ಳುವವನಿಗೆ ಸ್ವಂತದ ಜ್ಞಾನವೂ ಇಲ್ಲ ಎಂದು ಹೇಳುವದಾಗಲೀ ಈ ಶ್ರುತಿಗೆ ಅಭಿಪ್ರೇತವಲ್ಲ )

'ಸುಖ-ದುಃಖಗಳ ಅನುಭವವುಳ್ಳವನೂ ಬಂಧ-ಮೋಕ್ಷಗಳಿಗೆ ಪಾತ್ರನಾದವನೂ 'ಅಹಮ್' ಎಂದು ತನ್ನ ಸ್ವಂತದ ಜ್ಞಾನವನ್ನು ಯಾವಾಗಲೂ ಪಡೆದವನೂ ಜೀವನು' ಎಂದು ಪರಮ ಶ್ರುತಿಯಲ್ಲಿ ಹೇಳಿದೆ (ಇದರಿಂದ ಮುಕ್ತಿಯಲ್ಲಿಯೂ ಜೀವನಿಗೆ ತನ್ನ ಜ್ಞಾನವಿರುವದೆಂದು ಸ್ಪಷ್ಟವಾಗುತ್ತದೆ)

ಅಜ್ಞಾನದಲ್ಲಿ ಮಗ್ನನಾದವನಿಗೆ ಅದಕ್ಕಿಂತ ಹೆಚ್ಚಿನ ದುಃಖವು ಯಾವದು? (ಮುಕ್ತನಿಗೆ ಜ್ಞಾನನಾಶವನ್ನು ಅಂಗೀಕರಿಸಿದರೆ ಅದು ಪರಮ ದುಃಖದಲ್ಲಿಯೇ ಪರ್ಯವಸಾನವಾಗುವದು) ಎಂದು ಮೋಕ್ಷಧರ್ಮದಲ್ಲಿ ಹೇಳಿದೆ

**ವಿವರಣೆ**—ಬೃಹದಾರಣ್ಯ ಉಪನಿಷತ್ತಿನ ಆರನೆಯ ಅಧ್ಯಾಯದಲ್ಲಿಯ ಐದನೆಯ ಬ್ರಾಹ್ಮಣವಾದ ಮೈತ್ರೇಯೀ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯರು ಮೈತ್ರೇಯಿಗೆ ಜೀವನೂ ಜ್ಞಾನಸ್ವರೂಪನು, ಭೂತಗಳ ಸಂಬಂಧದಿಂದ ಸಂಸಾರದಶಾದಲ್ಲಿ ಉತ್ಪತ್ತಿ ವಿನಾಶಗಳನ್ನು ಪಡೆಯುವನು; ಮುಕ್ತನಾದಮೇಲೆ ಅವನಿಗೆ ವೃತ್ತಿಜ್ಞಾನವಾಗಲೀ ಉತ್ಪತ್ತಿವಿನಾಶವಾಗಲೀ ಇಲ್ಲ ಎಂದು ಹೇಳುವರು. ಮುಕ್ತರಾದ ಮೇಲೆ ವೃತ್ತಿಜ್ಞಾನವಿಲ್ಲ ಎಂಬುದನ್ನು ಸರ್ವಥಾ ಜ್ಞಾನವೇ ಇಲ್ಲ, ಸ್ವರೂಪಜ್ಞಾನವೂ ಇಲ್ಲ, ಪರಮಾತ್ಮನ ಜ್ಞಾನವೂ ಇಲ್ಲ ಎಂದು ತಪ್ಪಾಗಿ ತಿಳಿದುಕೊಂಡು ಮೈತ್ರೇಯಿಯು ಇದು ಹೇಗೆ ಸಾಧ್ಯ? ಹೀಗೆ ಹೇಳಿ ನನ್ನನ್ನು ಗೊಂದಲಕ್ಕೆ ಏಕೆ ಈಡುಮಾಡುವಿರಿ? ಎನ್ನುವಳು ಆಗ ಯಾಜ್ಞವಲ್ಕ್ಯರು ಮುಕ್ತನಾದಮೇಲೆ ಜೀವನ ಸ್ವರೂಪಕ್ಕೆ ನಾಶವಿಲ್ಲ ಅವನ ಜ್ಞಾನಾದಿ ಧರ್ಮಗಳಿಗೆ ನಾಶವಿಲ್ಲ ಎಂದು ಹೇಳುವರು. ಸ್ವರೂಪನಾಶವಿಲ್ಲ ಎಂಬುದು ಬೌದ್ಧಮತದ ಅಭಿಪ್ರಾಯದ ನಿರಾಕರಣೆಯು. ಧರ್ಮಗಳಿಗೆ ನಾಶವಿಲ್ಲ ಎಂಬುದು ತಾರ್ಕಿಕರ ಮತದ ನಿರಾಕರಣೆಯು ಹೀಗೆ ಬೌದ್ಧ ಮತ್ತು ತಾರ್ಕಿಕ ಮತಗಳನ್ನು ನಿರಾಕರಿಸಿದ ಮೇಲೆ 'ನಿರ್ವಿಶೇಷ ಚಿನ್ಮಾತ್ರರೂಪವಾದ ಆತ್ಮೈಕ್ಯವೇ ಮುಕ್ತಿಯಲ್ಲಿ ಉಳಿಯುವದು' ಎಂಬ ಅದ್ವೈತಮತವನ್ನು ನಿರಾಕರಿಸಲು 'ಯತ್ರ ತು ಸರ್ವಮಾತ್ಮೈವಾಭೂತ್' ಇತ್ಯಾದಿಯಾಗಿ ಹೇಳಿರುವರು. ಮುಕ್ತಿಯಲ್ಲಿ ನಿರ್ವಿಶೇಷ ಚಿನ್ಮಾತ್ರವು ಮಾತ್ರ ಉಳಿಯುವದೆಂದು ಹೇಳಿದರೆ ಇಂಥ ಮುಕ್ತನಿಗೆ ಭೋಗವಾಗಲೀ, ಸ್ವಜ್ಞಾನವಾಗಲೀ, ಪರಮಾತ್ಮನ

ಜ್ಞಾನವಾಗಲೀ ಇಲ್ಲವೆಂದು ಹೇಳಬೇಕಾಗುವದು ಇದು ಸಮಂಜಸವಲ್ಲ ಆದ್ದರಿಂದ ಮುಕ್ತಿಯಲ್ಲಿ ಆತ್ಮೈಕ್ಯವಿಲ್ಲ. ಜೀವ-ಬ್ರಹ್ಮರ ಭೇದವೇ ಇರುವದು ಎಂಬುದನ್ನು ಆಕ್ಷೇಪ ಮುಖದಿಂದ ಈ ಶ್ರುತಿಯು ಸಮರ್ಥಿಸುವದು. ಆದ್ದರಿಂದಲೇ ಮುಕ್ತಿಯಲ್ಲಿ ಭೇದವನ್ನು ಸಮರ್ಥಿಸುವ ಶ್ರುತಿಗಳಲ್ಲಿ ಇದನ್ನೂ ಆಚಾರ್ಯರು ಉದಾಹರಿಸಿರುವರು

**'ಯದ್ವೈತಂ ನ ಪಶ್ಯತಿ' 'ಕರ್ಮಾಣಿ ವಿಜ್ಞಾನಮಯಶ್ಚ' ಎಂಬ ಶ್ರುತಿಗಳ ಅರ್ಥ.**

66. 'ನತು ತದ್ದ್ವಿತೀಯಮಸ್ತಿ' ಇತಿ ಚ ಯತ್ ತದ್ ಬ್ರಹ್ಮ ದ್ವೈತತ್ವೇನ ನ ಪಶ್ಯತಿ ತದೇವ ದ್ವಿತೀಯಂ ನೇತ್ಯಾಹ । 'ಯತ್ರ ತೋऽನ್ಯದ್ವಿಭಕ್ತತ್ವೇನೈವ ಪಶ್ಯೇತ್' ಇತಿ ವಾಕ್ಯಶೇಷಾತ್ । ನ ಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪೋ ವಿದ್ಯತೇ ಇತಿ ಹೇತೋಶ್ಚ.

'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇऽವ್ಯಯೇ ಸರ್ವ ಏಕೀಭವಂತಿ' ಇತ್ಯತ್ರಾಪಿ ಏಕೀಭಾವೋ ಮತ್ಯೈಕ್ಯಮ್, ಕ್ಷೀರಾಬ್ಧ್ಯಾದಿಸ್ಥಿತ ತತ್ತದ್ರೂಪಾ-ಪೇಕ್ಷಯಾ ಸ್ಥಾನೈಕ್ಯಂ ವಾ । 'ಕಾಮೇನ ಮೇ ಕಾಮ ಆಗಾದ್ ಹೃದಯಂ ಮೃತ್ಯೋಃ । ಯದಮೀಷಾಮದಃ ಪ್ರಿಯಂ ತದೈತೂಪಸಮಾಮಭಿ' 'ಬ್ರಹ್ಮ-ಮತ್ಯನುಕೂಲಾ ಮೇ ಮತಿರ್ಮುಕ್ತೌ ಭವಿಷ್ಯತಿ । ಅತಃ ಪ್ರಾಯೋऽನುಕೂಲತ್ವ-ಮಿದಾನೀಮಪಿ ಮೇ ಸ್ಥಿತಮ್' 'ಯೇನ ಆಕ್ರಮಂತಿ ಋಷಯೋ ಹಿ ಆಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್' 'ಏತಮಾನಂದಮಯ-ಮಾತ್ಮಾನಮುಪಸಂಕ್ರಾಮತಿ' ಇತ್ಯಾದಿಶ್ರುತಿಭ್ಯಃ ।

ಸ್ವರೂಪೈಕ್ಯಾಭಿಪ್ರಾಯೇ 'ಕರ್ಮಾಣಿ ವಿಜ್ಞಾನಮಯಶ್ಚೇ'ತಿ ನ ಯುಜ್ಯತೇ । ನ ಹಿ ತತ್ಪಕ್ಷೇऽಪಿ ಕರ್ಮಣಾ ಬ್ರಹ್ಮೈಕ್ಯಂ ಮುಕ್ತೌ ಅಸ್ತಿ । ನಿವೃತ್ತ್ಯಭಿಪ್ರಾಯೇ ಚ ಪಂಚದಶಕಲಾನಾಮಪಿ ಸಮತ್ವಾತ್ 'ಗತಾಃ ಕಲಾಃ ಪಂಚದಶಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು' ಇತ್ಯನ್ಯಾಸಾಂ ಕಲಾನಾಂ ಗಮನಮುಕ್ತ್ವಾ ಕರ್ಮಣಾಂ ವಿಜ್ಞಾನಾತ್ಮನಶ್ಚ ಏಕೀಭಾವಕಥನಂ ವ್ಯರ್ಥಂ ಸ್ಯಾತ್ । ವಿಶೇಷಾ-ಭಾವಾತ್ ।

ಅನುವಾದ—('ಯದ್ವೈತನ್ನ ಪಶ್ಯತಿ' ಇತ್ಯಾದಿಯಾದ ಶ್ರುತಿಯಲ್ಲಿ ಸುಷುಪ್ತಿ ಕಾಲದಲ್ಲಿ ಅವಿದ್ಯೆಯ ವಿಲಯವಾಗದಿದ್ದರೂ ಅದರ ಕಾರ್ಯಗಳಾದ ಅಹಂಕಾರಾದಿಗಳ ವಿಲಯಮಾತ್ರದಿಂದಲೇ ದ್ವೈತ ಅಂದರೆ ದ್ವಿತೀಯ ಭಾವವು ಇಲ್ಲವೆಂದು ಹೇಳಿದೆ. ಅಂದಮೇಲೆ ಮೋಕ್ಷದಲ್ಲಿ ಅವಿದ್ಯೆಯೇ ನಿವೃತ್ತವಾಗಿರುವದರಿಂದ ದ್ವೈತ ಅಥವಾ ಭೇದಕ್ಕೆ ಅವಕಾಶವೇ ಇಲ್ಲ ಎಂಬ ಅದ್ವೈತಿಗಳ ಆಕ್ಷೇಪವನ್ನು, ಈ ಶ್ರುತಿಗೆ ಅದ್ವೈತಿಗಳು ಮಾಡಿದ ಅರ್ಥವೇ ಸರಿಯಲ್ಲ ಎಂದು ತೋರಿಸಿ ಪರಿಹರಿಸಲು, ಈ ಶ್ರುತಿಯ ಸರಿಯಾದ

ಅರ್ಥವನ್ನು ವಿವರಿಸುವರು) ಯದ್ವೈತನ್ನ ಪಶ್ಯತಿ ಇತ್ಯಾದಿಯಾದ ಶ್ರುತಿಯಲ್ಲಿ 'ನ ತು ತದ್ದ್ವಿತೀಯಮಸ್ತಿ' ಎಂಬುದರಿಂದ ಪರಮಾತ್ಮನು ಯಾವದನ್ನು ಭಿನ್ನವಾಗಿ ನೋಡುವದಿಲ್ಲವೋ ಅದು ಭಿನ್ನವಾಗಿಲ್ಲ ಎಂದು ಹೇಳಿದೆ (ನಾಡಿಗಳಲ್ಲಿರುವ ತನ್ನ ರೂಪಗಳಲ್ಲಿ ಪರಸ್ಪರ ಭೇದವನ್ನು ಅವನು ನೋಡುವದಿಲ್ಲ. ಇದರಂತೆಯೇ ಅವನು ರೂಪಿ ಮತ್ತು ರೂಪಗಳಲ್ಲಿಯೂ ಭೇದವನ್ನು ನೋಡುವದಿಲ್ಲ ಆದ್ದರಿಂದ ಈ ಭೇದಗಳು ಇಲ್ಲ ಎಂದು ಅಭಿಪ್ರಾಯವು) 'ಯಾವದು ಅವನಿಂದ ಭಿನ್ನವಾದುದೋ ಅದನ್ನು ಭಿನ್ನವಾಗಿಯೇ ಕಾಣುವನು' ಎಂದು ವಾಕ್ಯಶೇಷವಿದೆ. (ಅವನು ಭಿನ್ನವಾಗಿ ಕಾಣುವ ಜೀವ ಜಡಾದಿಗಳು ಭಿನ್ನ ಎಂದು ಅಭಿಪ್ರಾಯವು) 'ದ್ರಷ್ಟೃವಾದ ಪರಮಾತ್ಮನ ಜ್ಞಾನಕ್ಕೆ ವೈಪರೀತ್ಯ ಅಂದರೆ ಅಯಥಾರ್ಥವೆಂಬುದಿಲ್ಲ' ಎಂಬಲ್ಲಿ (ದ್ರಷ್ಟೃ ಮತ್ತು ದೃಷ್ಟಿ ಅಂದರೆ ಜ್ಞಾತಾ ಮತ್ತು ಜ್ಞಾನ ಇವುಗಳ ಭೇದವು ಸ್ಪಷ್ಟವಾಗಿರುವದರಿಂದ ನಿರ್ವಿಶೇಷ ಚೈತನ್ಯ ಮಾತ್ರತ್ವಕ್ಕೆ ಇದು ಬಾಧಕ ಎಂಬ) ಹೇತುವಿದೆ. (ಈ ವಾಕ್ಯದಲ್ಲಿ ಪರಮಾತ್ಮನು ಕಂಡ ಭೇದವು ಮಿಥ್ಯಾ ಅಲ್ಲ ಎಂಬುದೂ ಸ್ಪಷ್ಟವಾಗಿದೆ)

'ಕರ್ಮಗಳೂ (ಕರ್ಮಾಭಿಮಾನಿದೇವತೆಯೂ) ವಿಜ್ಞಾನಮಯನಾದ (ಮುಕ್ತನಾದ) ಆತ್ಮನೂ ಅವ್ಯಯನಾದ ಪರಮಾತ್ಮನನ್ನು ಪಡೆದು ಅವನಲ್ಲಿ ಏಕೀಭಾವವನ್ನು ಪಡೆಯುವರು' ಎಂಬ ಶ್ರುತಿಯಲ್ಲಿ ಇವರೆಲ್ಲರ ಮತಿಯು ಅಂದರೆ ಬುದ್ಧಿಯ ಐಕ್ಯವನ್ನು (ಅಂದರೆ ಪರಮಾತ್ಮನ ಇಚ್ಛೆ, ಸಂಕಲ್ಪಾದಿಗಳಂತೆಯೇ ಇವರ ಇಚ್ಛೆ, ಸಂಕಲ್ಪಾದಿಗಳು ಆಗುವದನ್ನು) ಹೇಳಿದೆ (ಈ ಶ್ರುತಿಯ ಪೂರ್ವಾರ್ಧವು ಮುಂದೆ ಬರುತ್ತದೆ) ಅಥವಾ ಕ್ಷೀರಾಬ್ಧಿ ಇತ್ಯಾದಿ ಸ್ಥಾನಗಳಲ್ಲಿದ್ದ ಪರಮಾತ್ಮನ ಆಯಾ ರೂಪಗಳೊಡನೆ ಸ್ಥಾನೈಕ್ಯವು (ಅಂದರೆ ಆಯಾ ಸ್ಥಾನಗಳಲ್ಲಿ ಮುಕ್ತರೂ ಇರುವದು) ಹೇಳಲ್ಪಟ್ಟಿದೆ.

"ಮೃತ್ಯು ಅಂದರೆ ಸಂಹಾರಕರ್ತನಾದ ಪರಮಾತ್ಮನ ಇಚ್ಛೆಯನ್ನನುಸರಿಸಿ ನನ್ನ ಇಚ್ಛೆಯುಂಟಾಗಲಿ, ಹೃದಯಾತ್ ಅಂದರೆ ಅವನ ಸಂಕಲ್ಪವನ್ನನುಸರಿಸಿ ಹೃದಯಂ ನನ್ನ ಸಂಕಲ್ಪವು ಉಂಟಾಗಲಿ, (ಅಮೀಷಾಂ ಅಮುಷ್ಯ ಯದ್ ಅದಃ ಪ್ರಿಯಮ್) ಯಾವದು ಅವನಿಗೆ ಪ್ರಿಯವಾದುದೋ (ತದ್ ಮಾಂ ಅಭಿ ಆ ಏತು) ಅದೇ ನನಗೆ ಪ್ರಿಯವಾಗಲಿ" (ಎಂದು ಮುಮುಕ್ಷುವು ಪ್ರಾರ್ಥಿಸುವನು).

"ಮುಕ್ತಿಯಲ್ಲಿ ಬ್ರಹ್ಮನ ಮತಿಗೆ ಅನುಕೂಲವಾಗಿಯೇ ನನ್ನ ಮತಿಯಿರುವದು. ಆದ್ದರಿಂದ ಈಗಲೂ (ಜೀವನ್ಮುಕ್ತಾವಸ್ಥೆಯಲ್ಲಿಯೂ) ಪ್ರಾಯಿಕವಾಗಿ ನನ್ನ ಮತಿಯು ಅನುಕೂಲವಾಗಿದೆ."

"ಯಾವ ಲೋಕದಲ್ಲಿ ಸತ್ಯಸ್ಯ ಅಂದರೆ ಪರಮಾತ್ಮನ ಪರಮಂ ನಿಧಾನಂ ಅಂದರೆ ಪ್ರಕಟವಾದ ಸನ್ನಿಧಾನವು ಇರುವದೋ ಆ ಲೋಕಕ್ಕೆ ಆಪ್ತಕಾಮರಾದ ಋಷಿಗಳು ದೇವಯಾನದಿಂದ ಹೋಗುವರು" (ಇಲ್ಲಿ ಮುಕ್ತರಿಗೆ ಪರಮಾತ್ಮನೊಡನೆ ಸ್ಥಾನೈಕ್ಯವನ್ನು ಹೇಳಿದೆ.)

"ಆನಂದಮಯನಾದ ಪರಮಾತ್ಮನನ್ನು ಮುಕ್ತರು ಪಡೆಯುವರು" (ಇಲ್ಲಿಯೂ ಸ್ಥಾನೈಕ್ಯವನ್ನು ಹೇಳಿದೆ )

(ಕರ್ಮಾಣಿ ವಿಜ್ಞಾನಮಯಃ ಇತ್ಯಾದಿಯಾದ ಶ್ರುತಿಯಲ್ಲಿ ಜೀವ-ಪರಮಾತ್ಮರ) ಸ್ವರೂಪೈಕ್ಯವೇ ಅಭಿಪ್ರೇತವಾಗಿದ್ದರೆ 'ಕರ್ಮಾಣಿ ವಿಜ್ಞಾನಮಯಃ' ಎಂದು ಹೇಳಿದ್ದು ಹೊಂದುವದಿಲ್ಲ ಅವರ ಪಕ್ಷದಲ್ಲಿಯೂ (ಅದ್ವೈತಪಕ್ಷದಲ್ಲಿಯೂ) ಕರ್ಮಕ್ಕೂ ಬ್ರಹ್ಮನಿಗೂ ಮುಕ್ತಿಯಲ್ಲಿ ಐಕ್ಯವಿಲ್ಲ (ಕರ್ಮದ ಮಟ್ಟಿಗೆ) ಅವುಗಳ ನಿವೃತ್ತಿಯು ಅಭಿಪ್ರೇತವಾಗಿದೆ ಎಂದು ಹೇಳುವದಾದರೆ ಪಂಚದಶಕಲೆಗಳೊಡನೆ (ನಿವೃತ್ತಿಯ ವಿಷಯದಲ್ಲಿ) ಸಾಮ್ಯಬರುವದು. 'ಗತಾಃ ಕಲಾಃ ಪಂಚದಶ' ಇತ್ಯಾದಿಯಾಗಿ (ಪೂರ್ವಾರ್ಧದಲ್ಲಿ) ಇತರ ಪಂಚದಶಕಲೆಗಳ ನಿವೃತ್ತಿಯನ್ನು ಹೇಳಿ (ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಇತ್ಯಾದಿಯಾದ ಉತ್ತರಾರ್ಧದಲ್ಲಿ) ಕರ್ಮ ಮತ್ತು ವಿಜ್ಞಾನಾತ್ಮಗಳಿಗೆ ಏಕೀಭಾವವನ್ನು ಹೇಳುವದು ವ್ಯರ್ಥವಾಗುವದು (ಕರ್ಮಗಳೂ ಕಲೆಯಾದ್ದರಿಂದ 'ಷೋಡಶ ಕಲಾಃ' ಎಂದು ಪೂರ್ವಾರ್ಧದಲ್ಲಿಯೇ ಅದನ್ನೂ ಸೇರಿಸಿ ಹದಿನಾರು ಕಲೆಗಳ ನಿವೃತ್ತಿಯಾಗುವದು ಎಂದು ಹೇಳದೆ, ಏಕೀಭಾವ ಎಂಬುದಕ್ಕೆ ನಿವೃತ್ತಿಪರವಾಗಿ ಅರ್ಥಮಾಡಿ ಅದರ ನಿವೃತ್ತಿಯನ್ನು ಪ್ರತ್ಯೇಕವಾಗಿ ಉತ್ತರಾರ್ಧದಲ್ಲಿ ಹೇಳಿದ್ದು ವ್ಯರ್ಥವಾಗುವದು ಎಂದು ಅಭಿಪ್ರಾಯವು ಅಲ್ಲದೆ ನಿವೃತ್ತಿಯಾಗದೇ ಇರುವ ವಿಜ್ಞಾನಾತ್ಮನೊಡನೆ ನಿವೃತ್ತಿಯಾಗುವ ಕರ್ಮಗಳನ್ನು ಹೇಳಿದ್ದೂ ವ್ಯರ್ಥವೆನಿಸುವದು ಆದ್ದರಿಂದ ಈ ವ್ಯಾಖ್ಯಾನವೇ ಉಚಿತವಲ್ಲ ಎಂದು ಅಭಿಪ್ರಾಯವು.) (ಇನ್ನುಳಿದ ಪಂಚದಶಕಲೆಗಳನ್ನು 'ಕರ್ಮ' ಎಂಬ ಹದಿನಾರನೆಯ ಕಲೆಯನ್ನೂ ಪ್ರತ್ಯೇಕಿಸಿ ನಿವೃತ್ತಿಯನ್ನು ಹೇಳಲು ಅದ್ವೈತ ವ್ಯಾಖ್ಯಾನದ ಪ್ರಕಾರ) ಇವುಗಳಲ್ಲಿ ಯಾವ ವಿಶೇಷವೂ ಇಲ್ಲ

**ವಿವರಣೆ**—'ಯದ್ವೈ ತತ್ ನ ಪಶ್ಯತಿ ಪಶ್ಯನ್ ವೈ ತತ್ ನ ಪಶ್ಯತಿ । ನ ಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್ ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಪಶ್ಯೇತ್' ಎಂಬುದು ಇಲ್ಲಿ ಮೊದಲು ಚರ್ಚಿಸಿದ ಶ್ರುತಿವಾಕ್ಯದ ಪೂರ್ಣಪಾಠವು ಈ ಶ್ರುತಿಯಲ್ಲಿ ಅದ್ವೈತಿಗಳ ವ್ಯಾಖ್ಯಾನದ ಪ್ರಕಾರ ಸುಷುಪ್ತ್ಯವಸ್ಥೆಯಲ್ಲಿ ಜೀವನು ನೋಡುತ್ತಾನೆ ಮತ್ತು ನೋಡುವದಿಲ್ಲ ಎಂದು ಎರಡನ್ನೂ ಮೊದಲು ಹೇಳಿದೆ ಸುಷುಪ್ತಿ ಅವಸ್ಥೆಯಲ್ಲಿ ಜೀವನಿಗೆ ಅವಿದ್ಯೆಯು ಇನ್ನೂ ಇದ್ದರೂ ಅಹಂಕಾರಾದಿ ಅವಿದ್ಯಾಕಾರ್ಯಗಳ ವಿಲಯನವಾದ್ದರಿಂದ ನೋಡಲು ವಿಷಯಗಳಿಲ್ಲ. ಆದ್ದರಿಂದ ಅವನು ನೋಡುವದಿಲ್ಲ ಆದರೆ ಆಗ ಅವನಿಗೆ ಸ್ವರೂಪಜ್ಞಾನವಿರುತ್ತದೆ ಆದ್ದರಿಂದ ನೋಡುವನು. 'ನ ಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪೋ ವಿದ್ಯತೇ' ಎಂಬ ಮುಂದಿನ ವಾಕ್ಯದಲ್ಲಿ ಸ್ವರೂಪಜ್ಞಾನವಿರುವದನ್ನು ಹೇಳಿದೆ. 'ನ ತು ತದ್ ದ್ವಿತೀಯಮಸ್ತಿ' ಎಂಬ ಅದರ ಮುಂದಿನ ವಾಕ್ಯದಲ್ಲಿ ಬೇರೆ ವಿಷಯಗಳು ಇಲ್ಲದಿರುವದನ್ನು ಹೇಳಿದೆ. ಹೀಗೆ ಸ್ವರೂಪಜ್ಞಾನವಿರುವದನ್ನೂ ಬೇರೆ ವಿಷಯಗಳ ಜ್ಞಾನವಿಲ್ಲದೇ ಇರುವದನ್ನೂ

ಈ ಶ್ರುತಿಯಲ್ಲಿಯೇ ಹೇಳಿದ್ದರಿಂದ ಸುಷುಪ್ತ್ಯವಸ್ಥೆಯಲ್ಲಿ ಜೀವನು ನೋಡುವವನು ಮತ್ತು ನೋಡದೇ ಇರುವವನು ಎಂಬುದು ಕೂಡುತ್ತದೆ ಹೀಗೆ ಅವಿದ್ಯಾಕಾರ್ಯವು ಇಲ್ಲವಾದ್ದರಿಂದ ಸುಷುಪ್ತಿ ಅವಸ್ಥೆಯಲ್ಲಿಯೇ ದ್ವೈತಭಾವವು ಇಲ್ಲವೆಂದಮೇಲೆ ಅವಿದ್ಯೆಯು ಪೂರ್ಣವಾಗಿ ನಿವೃತ್ತವಾದ ಮೋಕ್ಷಾವಸ್ಥೆಯಲ್ಲಿ ದ್ವೈತಭಾವಕ್ಕೆ ಅವಕಾಶವೇ ಇಲ್ಲ ಎಂದು ಸಮರ್ಥಿಸಲು ಈ ಶ್ರುತಿಯನ್ನು ಅದ್ವೈತಿಗಳು ಉದಾಹರಿಸುತ್ತಾರೆ. ಆದರೆ ಈ ಶ್ರುತಿಯ ಅವರ ವ್ಯಾಖ್ಯಾನವೇ ಸರಿಯಿಲ್ಲ.

ಈ ಶ್ರುತಿಯ ಸಂದರ್ಭ ಮತ್ತು ಅರ್ಥಗಳೇ ಭಿನ್ನವಾಗಿವೆ. 'ಶುಕ್ಲಸ್ಯ ನೀಲಸ್ಯ ಪಿಂಗಲಸ್ಯ ಹರಿತಸ್ಯ ಲೋಹಿತಸ್ಯ ಪೂರ್ಣಾಃ' ಎಂದು ನಾಡಿಗಳು ಪರಸ್ಪರ ವಿಲಕ್ಷಣವಾದ ಭಗವದ್ರೂಪಗಳಿಂದ ವ್ಯಾಪ್ತವಾಗಿವೆ ಎಂಬುದು ಈ ಮೊದಲು ಪ್ರಕೃತವಾಗಿದೆ ಇದರಿಂದ ಭಗವಂತನ ಈ ರೂಪಗಳಲ್ಲಿ ಭೇದವಿರುವಂತೆ ತೋರುತ್ತದೆ ಈ ವಾಕ್ಯಕ್ಕೆ ಮೊದಲು 'ತಾ ವಾ ಏತಾಃ ಹಿತಾ ನಾಮ ನಾಡ್ಯಃ' ಇತ್ಯಾದಿಯಾಗಿ ನಾಡಿಗಳ ಉಲ್ಲೇಖವಿರುವದರಿಂದ ನಾಡಿಗಳಲ್ಲಿ ವ್ಯಾಪ್ತವಾಗಿರುವ ರೂಪಗಳು ಇಲ್ಲಿ ಪ್ರಕೃತವಾಗಿವೆ 'ಶುಕ್ಲಸ್ಯ ನೀಲಸ್ಯ' ಇತ್ಯಾದಿ ವಾಕ್ಯದ ನಂತರ ಮತ್ತು 'ಯದ್ವೈತನ್ನ ಪಶ್ಯತಿ' ಇತ್ಯಾದಿ ವಾಕ್ಯಕ್ಕಿಂತ ಮೊದಲು 'ಪ್ರಾಜ್ಞೇನ ಆತ್ಮನಾ' ಎಂದು ಪ್ರಕೃತನಾದ ಭಗವಂತನನ್ನು ಅಸ್ಯ ಎಂದು ಪರಾಮರ್ಶಿಸಿ 'ಅಸ್ಯೈತದಾಪ್ತಕಾಮಮಾತ್ಮಕಾಮಮಕಾಮಮ್' ಎಂದು ಷಷ್ಠೀ ವಿಭಕ್ತಿಯನ್ನು ಪ್ರಯೋಗಿಸಿ ರೂಪ ಮತ್ತು ರೂಪಿಗಳ ಭೇದವನ್ನು ಹೇಳಲಾಗಿದೆ. ಹೀಗೆ ನಾಡಿಗಳಲ್ಲಿ ವ್ಯಾಪ್ತನಾದ ಪರಮಾತ್ಮನ ರೂಪಗಳಲ್ಲಿಯೂ ಗುಣ-ಗಣಗಳಲ್ಲಿಯೂ ಭೇದವು ಪೂರ್ವವಾಕ್ಯಗಳಲ್ಲಿ ಪ್ರಸಕ್ತವಾಗಿದೆ. ಇದನ್ನು ನಿರಾಕರಿಸಲು 'ಯದ್ ದ್ವೈತಂ ನ ಪಶ್ಯತಿ ತದ್ ದ್ವಿತೀಯಂ ನಾಸ್ತಿ' ಎಂಬ ಶ್ರುತಿಯು ಪ್ರಸಕ್ತವಾಗಿದೆ. ಅದ್ವೈತಿಗಳು ಹೇಳುವಂತೆ ಸುಷುಪ್ತಿ ಅವಸ್ಥೆಯಲ್ಲಿ ಅಹಂಕಾರದ ವಿಲಯವಾದ್ದರಿಂದ ವಿಷಯಗಳೇ ಇಲ್ಲ ಎಂದು ಹೇಳಲು ಈ ಶ್ರುತಿಯು ಹೊರಟಿಲ್ಲ. ಈ ವಿಚಾರ ಇಲ್ಲಿಯ ಪೂರ್ವವಾಕ್ಯಗಳಲ್ಲಿ ಪ್ರಸಕ್ತವಾಗಿಲ್ಲ. ಪರಮಾತ್ಮನು ಆಯಾ ನಾಡಿಗಳಲ್ಲಿದ್ದ ತನ್ನ ರೂಪಗಳನ್ನು ಭಿನ್ನವಾಗಿ ಕಾಣುವದಿಲ್ಲ. ತನ್ನ ಗುಣಗಳನ್ನೂ ಭಿನ್ನವಾಗಿ ಕಾಣುವದಿಲ್ಲ 'ಅವನು ಯಾವುದನ್ನು ಭಿನ್ನವಾಗಿ ಕಾಣುವದಿಲ್ಲವೋ ಅವು ಭಿನ್ನವಲ್ಲ.' ಎಂಬುದು ಈ ಶ್ರುತಿವಾಕ್ಯದ ಅರ್ಥವು. ಒಮ್ಮೊಮ್ಮೆ ನಮಗೆ ಭಿನ್ನವಾಗಿ ಕಾಣದೇ ಇದ್ದ ವಸ್ತುಗಳೂ ಭಿನ್ನವಾಗಿರಬಹುದು. ಉದಾಹರಣೆಗೆ ಶುಕ್ತಿ-ರಜತಗಳು ನಮಗೆ ಭಿನ್ನವಾಗಿ ಕಾಣುವದಿಲ್ಲ. ಆದರೂ ಭಿನ್ನವಾಗಿರುವವು. ಆದರೆ ಪರಮಾತ್ಮನ ವಿಷಯ ಹಾಗಲ್ಲ, ಅವನು ಸರ್ವಜ್ಞನು. ಭಿನ್ನವಾಗಿ ಕಾಣದೇ ಇದ್ದದ್ದು ಭಿನ್ನವಾಗಿ ಇರಲಾರದು ಎಂಬುದನ್ನು 'ಪಶ್ಯನ್ ವೈ ನ ಪಶ್ಯತಿ' ಎಂಬಲ್ಲಿ ಹೇಳಿದೆ. 'ಪಶ್ಯನ್' ಅಂದರೆ ಸರ್ವಜ್ಞನಾದ ಅವನು 'ನ ಪಶ್ಯತಿ' ಅಂದರೆ ಶುಕ್ಲಾದಿ ನಾಡಿಗಳಲ್ಲಿದ್ದ ತನ್ನ ರೂಪಗಳಲ್ಲಿ ಭೇದವನ್ನು ಕಾಣುವದಿಲ್ಲ. ಆದ್ದರಿಂದ ಅವು ಭಿನ್ನವಾಗಿಲ್ಲ. ತನ್ನ ಈ ರೂಪಗಳು ಮತ್ತು ಗುಣಗಳು ಇವುಗಳನ್ನು ಬಿಟ್ಟು ಇತರ ಜೀವ-ಜಡಾದಿ ಪದಾರ್ಥಗಳನ್ನು ಅವನು ಭಿನ್ನವಾದವುಗಳಾಗಿ ನೋಡುತ್ತಾನೆ. ಆದ್ದರಿಂದ

ಅವು ಭಿನ್ನವಾದವುಗಳು ಇದನ್ನು 'ತತೋಽನ್ಯದ್ ವಿಭಕ್ತಂ ಯತ್ ಪಶ್ಯೇತ್' ಎಂದು ಹೇಳಿದೆ ನಾವು ಒಮ್ಮೊಮ್ಮೆ ಒಬ್ಬನೇ ಆದ ಚಂದ್ರನನ್ನು ಎರಡಾಗಿ ನೋಡುತ್ತೇವೆ (ಕಣ್ಣುಗುಡ್ಡೆಯ ಮೇಲೆ ಬೆಟ್ಟು ಒತ್ತಿಕೊಂಡರೆ ಎರಡು ಚಂದ್ರಗಳು ಭಾಸವಾಗುತ್ತವೆ) ಆದರೆ ಪರಮಾತ್ಮನು ಭಿನ್ನವಾಗಿ ಕಂಡದ್ದು ಭಿನ್ನವೇ ಆಗಿರುತ್ತದೆ ಯಾಕಂದರೆ, ದ್ರಷ್ಟುಃ ಅಂದರೆ ಸರ್ವದ್ರಷ್ಟವಾದ ಪರಮಾತ್ಮನ ದೃಷ್ಟೇಃ ಜ್ಞಾನಕ್ಕೆ ವಿಪರಿಲೋಪ ವೈಪರೀತ್ಯವು ಅಂದರೆ ಅಯಥಾರ್ಥತ್ವವು ಇಲ್ಲ ಎಂದು 'ನ ಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪೋಽಸ್ತಿ' ಎಂಬಲ್ಲಿ ಹೇಳಿದೆ ಹೀಗೆ 'ಯದ್ವೈತನ್ನ ಪಶ್ಯತಿ' ಇತ್ಯಾದಿಯಾದಿ ಶ್ರುತಿಯಲ್ಲಿ 'ನಾಡಿಗಳಲ್ಲಿರುವ ಪರಮಾತ್ಮನ ರೂಪಗಳಲ್ಲಿ ಪರಸ್ಪರ ಭೇದವಿಲ್ಲ ಅವನ ಗುಣಗಳಿಗೂ ಅವನಿಗೂ ಭೇದವಿಲ್ಲ. ಜೀವಜಡಗಳಿಗೂ ಪರಮಾತ್ಮನಿಗೂ ಭೇದವಿದೆ. ಪರಮಾತ್ಮನ ಜ್ಞಾನಕ್ಕೆ ಅಯಥಾರ್ಥತ್ವವಿಲ್ಲ' ಎಂಬ ವಿಷಯಗಳನ್ನು ಹೇಳಿದೆ. ಈ ಶ್ರುತಿವಾಕ್ಯದ ಹಿಂದಿನ ವಾಕ್ಯದಲ್ಲಿ ನಾಡಿಗಳಲ್ಲಿರುವ ಪರಮಾತ್ಮನ ರೂಪಗಳು ಪ್ರಕೃತವಾಗಿವೆ ಅವಿದ್ಯಾಕಾರ್ಯವಿಲಯನಕ್ಕಾಗಲೀ, ತತ್ಪ್ರಯುಕ್ತವಾಗಿ ವಿಷಯಜ್ಞಾನದ ಅಭಾವಕ್ಕಾಗಲೀ, ತತ್ಪ್ರಯುಕ್ತವಾಗಿ ದ್ವೈತಾಭಾವದ ಪ್ರತಿಪಾದನೆಗಾಗಲೀ ಈ ಶ್ರುತಿಯಲ್ಲಿ ಅವಕಾಶವೇ ಇಲ್ಲ. ಆದ್ದರಿಂದ ಇದು ಅದ್ವೈತಕ್ಕೆ ಸಾಧಕವಲ್ಲ

> ಗತಾಃ ಕಲಾಃ ಪಂಚದಶಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು ।
> ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥

ಎಂಬ ಶ್ರುತಿಯಲ್ಲಿ ಐಕ್ಯವನ್ನು ಹೇಳಿದೆ ಎಂದು ಅದ್ವೈತಿಗಳು ವಾದಿಸುತ್ತಾರೆ. ಈ ಶ್ರುತಿಗೆ ಅವರು ಮಾಡುವ ವ್ಯಾಖ್ಯಾನ ಹೀಗಿದೆ.—“ದೇಹಾರಂಭಕವಾದ ಪ್ರಾಣಾದಿ ಪಂಚದಶ ಕಲೆಗಳು ಮುಕ್ತಿಕಾಲದಲ್ಲಿ ತಮ್ಮ ತಮ್ಮ ಕಾರಣಗಳಲ್ಲಿ ಸೇರಿಕೊಳ್ಳುವವು. ಅವುಗಳಿಗೆ ಅಭಿಮಾನಿಗಳಾದ ದೇವತೆಗಳೂ ತಮ್ಮ ತಮ್ಮ ಮೂಲರೂಪಗಳಲ್ಲಿ ಸೇರಿಕೊಳ್ಳುವರು. (ಮುಕ್ತನಾಗಲಿರುವವನ ಕರ್ಮಗಳು ನಿವೃತ್ತವಾಗುವವು ವಿಜ್ಞಾನಮಯನಾದ ಆತ್ಮನು (ಮುಕ್ತನಾಗಲಿರುವ ಜೀವಾತ್ಮನು) ಪರಬ್ರಹ್ಮನಲ್ಲಿ ಐಕ್ಯವನ್ನು ಪಡೆಯುವನು.” ಈ ವ್ಯಾಖ್ಯಾನದಲ್ಲಿ ಈ ಕೆಳಗಿನ ದೋಷಗಳಿವೆ. (೧) 'ಏಕೀಭವಂತಿ' ಎಂಬ ಪದಕ್ಕೆ ಕರ್ಮಗಳಿಗೆ ಅನ್ವಯಿಸುವಾಗ 'ನಿವೃತ್ತವಾಗುತ್ತವೆ' ಎಂದು ಅರ್ಥಮಾಡುವದೂ ವಿಜ್ಞಾನಾತ್ಮ ಅಂದರೆ ಜೀವನಿಗೆ ಅನ್ವಯಿಸುವಾಗ 'ಐಕ್ಯ'ವನ್ನು ಪಡೆಯುತ್ತಾನೆ ಎಂದು ಅರ್ಥಮಾಡುವದೂ ಸರಿಯಲ್ಲ. ಕರ್ಮಗಳೂ ಐಕ್ಯವನ್ನು ಹೊಂದುತ್ತವೆ ಎಂದು ಹೇಳಲು ಬರುವದಿಲ್ಲ ಜಡವಾದ ಕರ್ಮಗಳು ಬ್ರಹ್ಮನೊಡನೆ ಅದ್ವೈತಿಗಳ ಮತದ ಪ್ರಕಾರವಾಗಿಯೂ ಐಕ್ಯವನ್ನು ಪಡೆಯುವದಿಲ್ಲ. (೨) ಕರ್ಮಗಳೂ ಕಲೆಯಾದ್ದರಿಂದ, ಇದನ್ನೂ ಸೇರಿಸಿ ಷೋಡಶಕಲೆಗಳೂ ನಿವೃತ್ತವಾಗುವವೆಂದು ಪೂರ್ವಾರ್ಧದಲ್ಲಿಯೇ ಹೇಳಬಹುದಾಗಿತ್ತು. ಅಲ್ಲಿ ಪಂಚದಶಕಲೆಗಳು ನಿವೃತ್ತವಾಗುವವು ಎಂದು ಹೇಳಿ, ಹದಿನಾರನೆಯ ಕಲೆಯಾದ ಕರ್ಮವು ನಿವೃತ್ತವಾಗುತ್ತದೆ ಎಂದು ಉತ್ತರಾರ್ಧದಲ್ಲಿ ಪ್ರತ್ಯೇಕಿಸಿ ಹೇಳಿದ್ದು

ವ್ಯರ್ಥವೆನಿಸುತ್ತದೆ ಅಲ್ಲದೆ ಪಂಚದಶಕಲೆಗಳ ನಿವೃತ್ತಿಯನ್ನು 'ಗತ' ಶಬ್ದದಿಂದಲೂ ಈ ಹದಿನಾರನೆಯ ಕಲೆಯಾದ ಕರ್ಮದ ನಿವೃತ್ತಿಯನ್ನು 'ಏಕೀಭವತಿ' ಶಬ್ದದಿಂದಲೂ ಹೀಗೆ ಕಲೆಗಳ ನಿವೃತ್ತಿಯನ್ನು ಎರಡು ಪ್ರತ್ಯೇಕ ಶಬ್ದಗಳಿಂದ ಹೇಳಿದ್ದು ವ್ಯರ್ಥ. ಐಕ್ಯವನ್ನು ಹೊಂದುವ ವಿಜ್ಞಾನಮಯಾತ್ಮಾ ಮತ್ತು ನಿವೃತ್ತವಾಗಲಿರುವ 'ಕರ್ಮ' ಇವೆರಡನ್ನೂ ಉತ್ತರಾರ್ಧದಲ್ಲಿ ಜೊತೆಯಾಗಿ ಹೇಳಿದ್ದೂ ವ್ಯರ್ಥ ಈ ದೋಷಗಳಿರುವದ ರಿಂದ ಅದ್ವೈತಪರವಾದ ಈ ವ್ಯಾಖ್ಯಾನವೇ ಸರಿಯಲ್ಲ.

ಈ ಶ್ರುತಿಯ ಸರಿಯಾದ ಅರ್ಥ ಹೀಗಿದೆ —"ಗತಾಃ ಅಂದರೆ ಮುಕ್ತರಾದ ಪ್ರಾಣಾದಿ ಪಂಚದಶ ಕಲಾಭಿಮಾನಿಗಳಾದ ದೇವತೆಗಳು, ಪ್ರತಿದೇವತಾಸು ಅಂದರೆ ಪ್ರತಿಬಿಂಬರಾದ ಜೀವರಲ್ಲಿ ಪ್ರತಿಷ್ಠಿತರಾದ ಇತರ ಎಲ್ಲ ದೇವತೆಗಳು, ಕರ್ಮಾಣಿ ಅಂದರೆ ಕರ್ಮಾಭಿಮಾನಿಯಾದ ದೇವತೆಯು, ವಿಜ್ಞಾನಮಯನಾದ ಆತ್ಮನು ಪರಮಾತ್ಮನನ್ನು ಹೊಂದಿ ಮತ್ಯೈಕ್ಯ ಅಥವಾ ಸ್ಥಾನೈಕ್ಯರೂಪವಾದ ಏಕೀಭಾವವುಳ್ಳವರಾಗುವರು" ಹೀಗೆ ಈ ಶ್ರುತಿಯಲ್ಲಿ ಮುಕ್ತರಾದವರು ಪರಮಾತ್ಮನೊಡನೆ ಮತ್ಯೈಕ್ಯ ಅಥವಾ ಸ್ಥಾನೈಕ್ಯವನ್ನು ಪಡೆಯುವದನ್ನು ಹೇಳಿದೆ ಮತ್ಯೈಕ್ಯದ ವಿಷಯದಲ್ಲಿ 'ಕಾಮೋಽಸ ಮೇ ಕಾಮವಾನ್' 'ಬ್ರಹ್ಮಮತ್ಯನುಕೂಲಾ ಮೇ' ಇತ್ಯಾದಿಯಾದ ಪ್ರಮಾಣವಚನಗಳಿವೆ ಸ್ಥಾನೈಕ್ಯದ ವಿಷಯದಲ್ಲಿ 'ಯೇನಾಕ್ರಮಂತಿ ಋಷಯಃ ಆಪ್ತಕಾಮಾಃ' 'ಏತಮಾನಂದಮಯ-ಮಾತ್ಮಾನಮ್' ಇತ್ಯಾದಿಯಾದ ಪ್ರಮಾಣವಚನಗಳಿವೆ

**'ಏಕೀಭವಂತಿ' ಎಂಬುದಕ್ಕೆ ಸ್ವರೂಪೈಕ್ಯವನ್ನು ಹೊಂದುವರು ಎಂದು ಅರ್ಥವಲ್ಲ.**

**67. ನ ಚ ಜ್ಞಾನನಿವೃತ್ತಸ್ಯ ರಜತಸ್ಯ ಶುಕ್ತ್ಯೈಕೀಭಾವವ್ಯವಹಾರೋಽಸ್ತಿ । 'ಪರೇಽವ್ಯಯೇ' ಇತ್ಯಧಿಕರಣತ್ವಕಥನಂ ಚ ಭೇದಜ್ಞಾಪಕಮ್ । ಅನ್ಯಥಾ ಪರ ಏವ ಭವಂತೀತಿ ನಿರ್ದೇಶಃ ಸ್ಯಾತ್ ।**

**ಜೀವಸ್ಯ ಪರಮೈಕ್ಯಂ ತು ಬುದ್ಧಿಸಾರೂಪ್ಯಮೇವ ತು ।**
**ಏಕಸ್ಥಾನನಿವಾಸೋ ವಾ ವ್ಯಕ್ತಿಸ್ಥಾನಮಪೇಕ್ಷ್ಯ ಸಃ ॥**
**ನ ಸ್ವರೂಪೈಕ್ಯತಾ ತಸ್ಯ ಮುಕ್ತಸ್ಯಾಪಿ ವಿರೂಪತಃ ।**
**ಸ್ವಾತಂತ್ರ್ಯಪೂರ್ಣತೇಽಲ್ಪತ್ವಪಾರತಂತ್ರ್ಯೇ ವಿರೂಪತೇ ।**

**ಇತಿ ಪರಮಶ್ರುತಿಃ ।**

ಅನುವಾದ—('ಏಕೀಭವಂತಿ' ಎಂಬುದಕ್ಕೆ ಅದ್ವೈತಿಗಳು 'ನಿವೃತ್ತವಾಗುವದು' ಎಂಬ ಅರ್ಥವನ್ನು ಹೇಳಿದ್ದನ್ನು ಹಿಂದೆ ನೋಡಿದ್ದೇವೆ. ಈ ಅರ್ಥವು ಸಮಂಜಸವಲ್ಲವೆಂದು ಇಲ್ಲಿ ತೋರಿಸುವರು. ಸ್ವರೂಪೈಕ್ಯವೂ ಹೊಂದುವದಿಲ್ಲವೆಂದು ಹೇಳುವರು. ಏಕೀಭಾವದ ಸರಿಯಾದ ಅರ್ಥವನ್ನು ವಿವರಿಸುವರು). ಜ್ಞಾನದಿಂದ ನಿವೃತ್ತವಾದ ರಜತವು ಶುಕ್ತಿ ಯೊಡನೆ ಏಕೀಭಾವವನ್ನು ಹೊಂದಿತು ಎಂಬ ವ್ಯವಹಾರವಿಲ್ಲ 'ಪರೇ ಅವ್ಯಯೇ' ಎಂದು

(ಸಪ್ತಮೀ ಪ್ರಯೋಗದಿಂದ) ಅಧಿಕರಣತ್ವವನ್ನು ಹೇಳಿದ್ದರಿಂದ ಭೇದವೇ ಸೂಚಿತವಾಗುತ್ತದೆ. (ಅಧಿಕರಣ ಮತ್ತು ಅಧಿಕರ್ತವ್ಯಗಳಲ್ಲಿ ಭೇದವೇ ಇರುವದು ಲೋಕದಲ್ಲಿ ಕಂಡುಬರುತ್ತದೆ.) ಇಲ್ಲವಾದರೆ (ಭೇದವು ಅಭಿಪ್ರೇತವಾಗಿರದೆ ಸ್ವರೂಪೈಕ್ಯವನ್ನು ಹೇಳುವದೇ ಅಭಿಪ್ರೇತವಾಗಿದ್ದರೆ) ' ಪರ ಏವ ಭವಂತಿ ' ಎಂದು ನಿರ್ದೇಶಿಸಲಾಗುತ್ತಿತ್ತು

ಜೀವ ಪರಮಾತ್ಮರ ಐಕ್ಯವೆಂದರೆ ಅವರ ಬುದ್ಧಿಯ ಸಾರೂಪ್ಯವೇ ಆಗಿದೆ (ಅಂದರೆ ಪರಮಾತ್ಮನ ಇಚ್ಛೆ, ಸಂಕಲ್ಪಾದಿಗಳನ್ನನುಸರಿಸಿಯೇ ಮುಕ್ತ ಜೀವನು ಇಚ್ಛೆ ಸಂಕಲ್ಪಾದಿಗಳನ್ನು ಮಾಡುವದು) ಅಥವಾ ಪರಮಾತ್ಮನ ಪ್ರಕಟ ಸನ್ನಿಧಾನವಿರುವ ಸ್ಥಾನದಲ್ಲಿದ್ದು ಸ್ಥಾನೈಕ್ಯವನ್ನು ಪಡೆಯುವದು ಸ್ವರೂಪೈಕ್ಯತೆಯನ್ನು ಪಡೆಯುವದಲ್ಲ ಯಾಕಂದರೆ ಪರಮಾತ್ಮನು ಸ್ವತಂತ್ರನೂ ಪೂರ್ಣನೂ ಆಗಿದ್ದು ಮುಕ್ತನು ಅಲ್ಪನೂ ಪರತಂತ್ರನೂ ಆಗಿರುವದರಿಂದ ವಿರೂಪನಾಗಿರುವನು ಎಂದು ಪರಮಶ್ರುತಿಯಲ್ಲಿ ಹೇಳಿದೆ

**ವಿವರಣೆ**—' ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇ ಅವ್ಯಯೇ ಸರ್ವ ಏಕೀಭವಂತಿ ' ಎಂಬಲ್ಲಿ ಕರ್ಮಗಳ ಏಕೀಭಾವ ಅಂದರೆ ಜ್ಞಾನದಿಂದ ಅವುಗಳ ನಿವೃತ್ತಿ ಎಂದು ಅದ್ವೈತಿಗಳು ಅರ್ಥಮಾಡುವರು ಇದು ಸರಿಯಲ್ಲ. ಜ್ಞಾನದಿಂದ ನಿವೃತ್ತವಾದುದಕ್ಕೆ ಏಕೀಭಾವ ಎಂಬ ವ್ಯವಹಾರ ಲೋಕದಲ್ಲಿ ಇಲ್ಲ ಶುಕ್ತಿರಜತ ಭ್ರಮವುಂಟಾದವನಿಗೆ ಶುಕ್ತಿಜ್ಞಾನದಿಂದ ರಜತದ ಭ್ರಮವು ನಿವೃತ್ತವಾದಾಗ ರಜತವು ಶುಕ್ತಿಯೊಡನೆ ಏಕೀಭಾವವನ್ನು ಹೊಂದಿತು ಎಂದು ಯಾರೂ ಹೇಳುವದಿಲ್ಲ

ಅಲ್ಲದೆ ಈ ಶ್ರುತಿಯಲ್ಲಿ ಜೀವ ಪರಮಾತ್ಮರ ಸ್ವರೂಪೈಕ್ಯವನ್ನು ಹೇಳಲು ಇನ್ನೊಂದು ಬಾಧಕವಿದೆ. ' ಪರೇ ಅವ್ಯಯೇ ಏಕೀಭವಂತಿ ' ಎಂದು ಅಧಿಕರಣಾರ್ಥದಲ್ಲಿ ಸಪ್ತಮಿಯನ್ನು ಪ್ರಯೋಗಿಸಲಾಗಿದೆ ಅಧಿಕರಣ ಮತ್ತು ಅಧಿಕರ್ತವ್ಯಗಳಲ್ಲಿ ಸ್ವರೂಪೈಕ್ಯವು ಇರುವದಿಲ್ಲ ಪ್ರತ್ಯುತ ಭೇದವೇ ಇರುತ್ತದೆ

ಶ್ರುತಿಯಲ್ಲಿ ಜೀವ-ಪರಮಾತ್ಮರ ಐಕ್ಯವನ್ನು ಹೇಳಿದಲ್ಲೆಲ್ಲ ಮತ್ಯೈಕ್ಯ, ಸ್ಥಾನೈಕ್ಯಗಳು ಅಭಿಪ್ರೇತವಾಗಿವೆ. ಮುಕ್ತಜೀವರಿಗೂ ಪರಮಾತ್ಮನಿಗೂ ಪೂರ್ಣತ್ವ-ಅಲ್ಪತ್ವ, ಸ್ವಾತಂತ್ರ್ಯ ಪಾರತಂತ್ರ್ಯ ಹೀಗೆ ವೈರೂಪ್ಯವಿದೆ ಎಂದು ಪರಮಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

**' ಬ್ರಹ್ಮೈವ ಭವತಿ ' ಎಂಬುದರ ಅರ್ಥ.**

**68. ' ಬ್ರಹ್ಮ ವೇದ ಬ್ರಹ್ಮೈವ ಭವತಿ ' ಇತ್ಯಾದಿ ಚ**
**' ಸಂಪೂಜ್ಯ ಬ್ರಾಹ್ಮಣಂ ಭಕ್ತ್ಯಾ ಶೂದ್ರೋಽಪಿ ಬ್ರಾಹ್ಮಣೋ ಭವೇತ್ ' ।**
**ಇತಿವತ್ ಬೃಂಹಿತೋ ಭವತೀತ್ಯರ್ಥಃ । ನಹಿ ಬ್ರಾಹ್ಮಣಪೂಜಕಃ ಸ ಏವ**
**ಬ್ರಾಹ್ಮಣೋ ಭವತಿ ।**

ಬ್ರಹ್ಮಾಣಿ ಜೀವಾಃ ಸರ್ವೇऽಪಿ ಪರಬ್ರಹ್ಮಣಿ ಮುಕ್ತಿಗಾಃ ।
ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ ॥
ತಸ್ಮಾತ್ ನ ಮುಕ್ತಾಃ ನ ಚ ಸಾ ನ ಕ್ವಚಿದ್ ವಿಷ್ಣುವೈಭವಮ್
ಪ್ರಾಪ್ನುವಂತಿ ಸ ಏಕೈಕಃ ಸ್ವತಂತ್ರಃ ಪೂರ್ಣಷಡ್ಗುಣಃ । ಇತಿ ಪರಮಶ್ರುತಿಃ
' ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ '
ಬ್ರಹ್ಮೇಶಾನಾದಿಭಿಃ ದೇವೈಃ ಯತ್ಪ್ರಾಪ್ತುಂ ನೈವ ಶಕ್ಯತೇ ।
ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇಃ ॥ ಇತಿ ಚ

ಯಥಾऽಪಿಯಂತಿ ತೇಜಾಂಸಿ ಮಹಾತೇಜಸಿ ಭಾಸ್ವರೇ ।
ಪೃಥಕ್ ಪೃಥಕ್ ಸ್ಥಿತಾನ್ಯೇಷ್ವ ಸ್ವರೂಪೈರಪಿ ಸರ್ವಶಃ ॥
ಪರೇ ಬ್ರಹ್ಮಣಿ ಜೀವಾಖ್ಯಬ್ರಹ್ಮಾಣ್ಯಪ್ಯಪಿಯಂತಿ ಹಿ ।
ಮುಕ್ತೌ ಪೃಥಕ್ ಸ್ಥಿತಾನ್ಯೇವ ತದನ್ಯೇಷಾಮದರ್ಶನಮ್ ॥
ಅಪ್ಯಯೋऽಯಂ ಸಮುದ್ದಿಷ್ಟೋ ನ ಸ್ವರೂಪೈಕತಾ ಕ್ವಚಿತ್ ।
ಇತಿ ನಾರಾಯಣಶ್ರುತಿಃ

ಅತಃ ಸರ್ವಾಗಮವಿರುದ್ಧಮೇವ ಜೀವೇಶ್ವರೈಕ್ಯಮ್ ।

ಅನುವಾದ—' ಬ್ರಹ್ಮನನ್ನು ತಿಳಿದು ಬ್ರಹ್ಮನೇ ಆಗುವನು ' ಎಂಬುದನ್ನು ' ಬ್ರಾಹ್ಮಣನನ್ನು ಭಕ್ತಿಯಿಂದ ಪೂಜಿಸಿ ಶೂದ್ರನೂ ಬ್ರಾಹ್ಮಣನಾಗುವನು ' ಎಂಬಲ್ಲಿಯಂತೆ ಬೃಂಹಿತನಾಗುವನು ಎಂಬರ್ಥದಲ್ಲಿ ತೆಗೆದುಕೊಳ್ಳಬೇಕು (ಶೂದ್ರನು ಯಾವ ಬ್ರಾಹ್ಮಣನನ್ನು ಪೂಜಿಸುವನೋ ಅದೇ ಬ್ರಾಹ್ಮಣನಾಗುವದಿಲ್ಲ ಆದರೆ ಬ್ರಾಹ್ಮಣತ್ವವನ್ನು ಪಡೆಯುವನು ಇದರಂತೆಯೇ ಬ್ರಹ್ಮನನ್ನು ತಿಳಿದ ಮುಕ್ತನು ಅದೇ ಬ್ರಹ್ಮನಾಗುವದಿಲ್ಲ ಆದರೆ ಬೃಂಹಿತತ್ವವನ್ನು ಪಡೆಯುವನು). ಬ್ರಾಹ್ಮಣ ಪೂಜಕನಾದವನು ಅದೇ ಬ್ರಾಹ್ಮಣನಾಗುವದಿಲ್ಲ ' ಮುಕ್ತರೂ ಅಮುಕ್ತರೂ ಆದ ಎಲ್ಲ ಜೀವರೂ ಬ್ರಹ್ಮರೇ. ಮುಕ್ತರಾದವರು ಪರಬ್ರಹ್ಮರು ಪ್ರಕೃತಿ ಅಂದರೆ ಮಹಾಲಕ್ಷ್ಮಿಯು ಪರಮಬ್ರಹ್ಮಳು. ಅಚ್ಯುತನು ಪರಮಮಹತ್ ಬ್ರಹ್ಮನು. ಆದ್ದರಿಂದ ಮುಕ್ತರಾಗಲೀ ಮಹಾಲಕ್ಷ್ಮಿಯಾಗಲೀ ವಿಷ್ಣುವಿನ ವೈಭವವನ್ನು ಎಂದಿಗೂ ಪಡೆಯುವದಿಲ್ಲ ಅವನೊಬ್ಬನೇ ಸ್ವತಂತ್ರನು ಪೂರ್ಣಷಡ್ಗುಣನು ' ಎಂದು ಪರಮಶ್ರುತಿಯಲ್ಲಿ ಹೇಳಿದೆ

' ವಿಷ್ಣುವೇ ನೀನು ಅಪರಿಮಿತನಾಗಿರುವಿ. ತನುವಿನಿಂದ ಪೂರ್ಣನಾಗಿರುವಿ. ಇಂಥ ನಿನ್ನ ಮಹಿಮೆಯನ್ನು ಯಾರೂ ಪಡೆಯಲಾರರು '

ಚತುರ್ಮುಖ ಬ್ರಹ್ಮ, ಶಿವ ಮೊದಲಾದ ದೇವತೆಗಳು ಯಾವದನ್ನು ಪಡೆಯುವದು ಶಕ್ಯವಿಲ್ಲವೋ ಅಂಥ ಕೈವಲ್ಯ ಅಂದರೆ ಸರ್ವೋತ್ಕೃಷ್ಟತ್ವವು ನಿನ್ನ ಸ್ವಭಾವವಾದ್ದರಿಂದ ನೀನು ' ಕೇವಲ ' ಎನಿಸಿರುವಿ

ಹಗಲಿನಲ್ಲಿ ಇನ್ನಿತರ ತೇಜಃ ಪದಾರ್ಥಗಳು ಸ್ವರೂಪತಃ ಬೇರೆ ಬೇರೆಯಾಗಿದ್ದರೂ ಮಹಾ ತೇಜಸ್ವಿಯಾದ ಸೂರ್ಯನ ಪ್ರಕಾಶದಲ್ಲಿ ಹೇಗ ಕಾಣದಂತಾಗುವವೋ ಹಾಗೆಯೇ ಮುಕ್ತಿಯಲ್ಲಿ ಮುಕ್ತರಾದ ಜೀವಾಖ್ಯಬ್ರಹ್ಮರು ಸ್ವರೂಪತಃ ಬೇರೆಬೇರೆಯಾಗಿದ್ದರೂ ಪರಬ್ರಹ್ಮನಲ್ಲಿ ಕಾಣದಂತೆ ಇರುವರು 'ಅಪ್ಯಯ' ಅಂದರೆ ಹೀಗೆ ಸ್ವರೂಪತಃ ಬೇರೆಯಾಗಿದ್ದರೂ ಕಾಣದೇ ಇರುವದೇ ಆಗಿದೆ ಸ್ವರೂಪೈಕ್ಯವು ಅಪ್ಯಯ ಶಬ್ದಾರ್ಥವಲ್ಲ. ಎಂದು ನಾರಾಯಣ ಶ್ರುತಿಯಲ್ಲಿ ಹೇಳಿದೆ

ಆದ್ದರಿಂದ ಜೀವ-ಬ್ರಹ್ಮರ ಐಕ್ಯವನ್ನು ಹೇಳುವದು ಎಲ್ಲ ಆಗಮಗಳಿಗೂ ವಿರುದ್ಧವಾಗಿದೆ

**ವಿವರಣೆ**—'ಬ್ರಹ್ಮವೇದ ಬ್ರಹ್ಮೈವ ಭವತಿ' ಎಂಬ ಶ್ರುತಿವಾಕ್ಯಕ್ಕೆ ಬ್ರಹ್ಮನನ್ನು ತಿಳಿದವನು ಬ್ರಹ್ಮನೇ ಆಗುವನು ಅಂದರೆ ಬ್ರಹ್ಮನೊಡನೆ ಸ್ವರೂಪೈಕ್ಯವನ್ನು ಪಡೆಯುವನು ಎಂದು ಅರ್ಥವಲ್ಲ. ಬ್ರಹ್ಮನನ್ನು ತಿಳಿದು ಬೃಂಹಿತತ್ವವನ್ನು ಅಂದರೆ ಸ್ವಯೋಗ್ಯತಾನುಸಾರ ಆನಂದಾದಿಗಳನ್ನು ಪಡೆಯುವನು ಎಂದು ಅರ್ಥವು ಹೀಗೆ ಹೇಳದಿದ್ದರೆ ಬ್ರಾಹ್ಮಣನನ್ನು ಭಕ್ತಿಯಿಂದ ಪೂಜಿಸಿ ಶೂದ್ರನು ಬ್ರಾಹ್ಮಣನಾಗುವನು ಎಂಬ ವಾಕ್ಯಕ್ಕೆ ತಾನು ಪೂಜಿಸಿದ ಬ್ರಾಹ್ಮಣನೊಡನೆ ಸ್ವರೂಪೈಕ್ಯವನ್ನು ಪಡೆಯುವನು ಎಂದು ಹೇಳುವ ಪ್ರಸಂಗ ಬರುವದು. ಅಲ್ಲದೆ ಮೊದಲನೆಯ ಬ್ರಹ್ಮಶಬ್ದಕ್ಕೆ 'ಪರಮ' ಎಂಬ ವಿಶೇಷಣವಿದೆ ಎರಡನೆಯದಕ್ಕೆ ಇಲ್ಲ ಪರಬ್ರಹ್ಮನನ್ನು ತಿಳಿದವನು ಬ್ರಹ್ಮನಾಗುವನು ಎಂದು ಹೇಳಿದರೆ ಅದೇ ಬ್ರಹ್ಮನಾಗುವನು ಎಂದು ಅರ್ಥವಾಗುವದಿಲ್ಲ ನಿರ್ದುಃಖತ್ವಾದಿ ಕೆಲವು ಅವನಂಥ ಗುಣಗಳನ್ನು ಪಡೆಯುವನು ಎಂದು ಮಾತ್ರ ಅರ್ಥವಾಗುವದು ಅಲ್ಲದೆ, ಬ್ರಹ್ಮಶಬ್ದಕ್ಕೆ ಜೀವ ಎಂಬ ಅರ್ಥವೂ ಇದೆ ಆದ್ದರಿಂದ 'ಬ್ರಹ್ಮ ವೇದ ಬ್ರಹ್ಮೈವ ಭವತಿ' ಎಂಬುದಕ್ಕೆ 'ಜೀವನು ಬ್ರಹ್ಮನನ್ನು ತಿಳಿದುಕೊಂಡರೂ ಜೀವನಾಗಿಯೇ ಉಳಿಯುವನು' ಎಂದೂ ಅರ್ಥವಾಗುವದು ಅಂದರೆ ಜೀವನು ಪರಮಾತ್ಮನನ್ನು ತಿಳಿದುಕೊಂಡು ಬ್ರಹ್ಮವಿದ್ಯಾದಿ ಸಾಧನ ಸಂಪತ್ತಿಗಳನ್ನು ಪಡೆದರೂ ಅವನ ಪಾರತಂತ್ರ್ಯಾದಿರೂಪ ಜೀವಭಾವವು ಉಳಿದೇ ಉಳಿಯುವದು. ಇದನ್ನು ಅವನು ತಿಳಿದುಕೊಳ್ಳುವದೂ ಅತ್ಯಗತ್ಯವು. ಬ್ರಹ್ಮಪದ ಪ್ರಯೋಗವು ಜೀವರಲ್ಲಿಯೂ ಲಕ್ಷ್ಮಿಯಲ್ಲಿಯೂ ಇದ್ದರೂ ಬ್ರಹ್ಮ, ಪರಬ್ರಹ್ಮ, ಪರಮ-ಬ್ರಹ್ಮ, ಪರಮಮಹದ್ಬ್ರಹ್ಮ (ಅಮುಕ್ತರು, ಮುಕ್ತರು, ಲಕ್ಷ್ಮಿ, ಪರಮಾತ್ಮಾ) ಎಂದು ತಾರತಮ್ಯೋಪೇತವಾಗಿರುವದು. ವಿಷ್ಣುವಿನ ವೈಭವವು ಬೇರೆ ಯಾರಿಗೂ ಬರುವದಿಲ್ಲ.

'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬ ಶ್ರುತಿಯಲ್ಲಿಯೂ 'ಅಪ್ಯೇತಿ' ಶಬ್ದವು ಜೀವಬ್ರಹ್ಮರ ಸ್ವರೂಪೈಕ್ಯವನ್ನು ಹೇಳುವದಿಲ್ಲ. 'ಅಪ್ಯೇತಿ' ಅಂದರೆ ಕಾಣುವದಿಲ್ಲ ಎಂದಿಷ್ಟುಮಾತ್ರ ಅರ್ಥವು ಇಲ್ಲವೇ ಇಲ್ಲ ಎಂದು ಅರ್ಥವಲ್ಲ. ಸೂರ್ಯನ ಎದುರಿಗೆ ಇತರ ತೇಜಃಪದಾರ್ಥಗಳು ಇದ್ದರೂ ಕಾಣದಂತೆ ಪರಮಾತ್ಮನ ಪ್ರಕಟ ಸನ್ನಿಧಾನದ ಸ್ಥಾನದಲ್ಲಿರುವದರಿಂದ ಮುಕ್ತರು ಇತರರಿಗೆ ಕಾಣುವದಿಲ್ಲ. ಬ್ರಹ್ಮೈವ ಸನ್ ಜೀವಭಾವ

ವನ್ನು ಬಿಡದೆಯೇ ಬ್ರಹ್ಮ ಅಪ್ಯೇತಿ ಪರಮಾತ್ಮನನ್ನು ಪ್ರವೇಶಿಸುವನು ಎಂದು ಈ ಶ್ರುತಿಯ ಅರ್ಥವು

ಹೀಗೆ ಆಪಾತತಃ ಐಕ್ಯಪರವೆಂದು ತೋರುವ ಎಲ್ಲ ಶ್ರುತಿಗಳೂ ಐಕ್ಯಪರವಾಗಿಲ್ಲ ಮಾತ್ರವಲ್ಲ, ಐಕ್ಯಕ್ಕೆ ವಿರುದ್ಧವಾಗಿವೆ ಆದ್ದರಿಂದ ಜೀವೇಶ್ವರೈಕ್ಯವು ಎಲ್ಲ ಆಗಮಗಳಿಗೂ ವಿರುದ್ಧವಾಗಿದೆ

**ಏಕಜೀವವಾದ ನಿರಾಸ.**

**69. ತಥೈವ ಸರ್ವಯುಕ್ತಿವಿರುದ್ಧಂ ಚ । ನ ತಾವದೇಕ ಜೀವವಾದೋ ಯುಜ್ಯತೇ । ಏಕಾಜ್ಞಾನಪರಿಕಲ್ಪಿತತ್ವೇ ಚ ಸರ್ವಸ್ಯ ಸರ್ವಮಿದಂ ಪರಿಕಲ್ಪಿತಮಿತಿ ಜಾನತಃ ಪುನಃ ಶಿಷ್ಯಾದಿಬೋಧನಂ ನ ಯುಜ್ಯತೇ । ನ ಹಿ ಸ್ವಪ್ನೋಽಯಮಿತಿ ನಿಶ್ಚಿತ್ಯ ಸ್ವಾಪ್ನಪುತ್ರದಾಯಾರ್ಥಂ ಯತತೇ । ಸ್ವಪ್ನೇ ತು ಸ್ವಾಪ್ನತ್ವಾಜ್ಞಾನಾದೇವ ಯತತೇ । ನ ಚ ಬಹೂನಾಂ ದೃಶ್ಯಮಾನತ್ವಾತ್ ಅಸ್ಯ ಅಜ್ಞಾನಪರಿಕಲ್ಪಿತಮಿದ-ಮಿತಿ ನಿಶ್ಚಯೋ ಯುಜ್ಯತೇ । ಸ್ವಪ್ನೇ ತು ಪ್ರಬೋಧಾನಂತರಮೇಕಸ್ಯ ಅವಶಿಷ್ಟ-ತ್ವಾತ್ ನಿಶ್ಚಯಃ । ನ ಚಾತ್ರ ತಥಾಸ್ತಿ । ತಸ್ಯ ತಸ್ಯ ತಥಾ ಪ್ರತಿಪತ್ತ್ಯಮಿತ್ಯಂಗೀ-ಕಾರೇ ವಸ್ತುನಿ ವಿಕಲ್ಪಾಸಂಭವಾತ್ ಅಕಲ್ಪಿತಮಿತ್ಯೇವ ಸ್ಯಾತ್ । ನ ಚ ತಥಾ ಪ್ರತಿಪತ್ತ್ಯಮಿತ್ಯತ್ರ ಪ್ರಮಾಣಮಸ್ತಿ ।**

**ಅನುವಾದ**—(ಜೀವ-ಬ್ರಹ್ಮೈಕ್ಯವು ಪ್ರತ್ಯಕ್ಷ ಮತ್ತು ಆಗಮಗಳಿಗೆ ವಿರುದ್ಧ ವಾಗಿದೆ ಎಂದು ಈವರೆಗೆ ವಿವರಿಸಿದರು ಅದು ಯುಕ್ತಿಗೂ ವಿರುದ್ಧವಾಗಿದೆ ಎಂದು ಇನ್ನುಮುಂದೆ ತೋರಿಸುವರು.)

ತಥೈವ ಅಂದರೆ ಪ್ರತ್ಯಕ್ಷ ಮತ್ತು ಆಗಮಗಳಿಗೆ ವಿರುದ್ಧವಾದಂತೆ, ಸರ್ವಯುಕ್ತಿ ಗಳಿಗೂ (ಜೀವ-ಬ್ರಹ್ಮೈಕ್ಯವು) ವಿರುದ್ಧವಾಗಿದೆ ಏಕಜೀವವಾದವು ಯುಕ್ತವಲ್ಲ ಒಬ್ಬ ಜೀವನ ಅಜ್ಞಾನದಿಂದಲೇ ಎಲ್ಲವೂ ಕಲ್ಪಿತವಾಗಿದ್ದರೆ (ಈ ಒಬ್ಬನು ಐಕ್ಯಜ್ಞಾನವನ್ನು ಪಡೆದ ಗುರುವಾದರೆ) ಇದೆಲ್ಲವೂ (ತನ್ನ ಅಜ್ಞಾನದಿಂದಲೇ) ಕಲ್ಪಿತ ಎಂದು ತಿಳಿದವನಾದ್ದ ರಿಂದ (ಬೇರೆ) ಶಿಷ್ಯಾದಿಗಳಿಗೆ ಬೋಧನೆ ಮಾಡುವದು ಯುಕ್ತವಾಗುವದಿಲ್ಲ ಇದು ಕನಸು ಎಂದು ತಿಳಿದವನು ಕನಸಿನಲ್ಲಿಯೇ ಮಕ್ಕಳಿಗೆ ಆಸ್ತಿಯನ್ನು ಹಂಚಲು ಪ್ರವೃತ್ತ ನಾಗುವದಿಲ್ಲ ಸ್ವಪ್ನದಲ್ಲಿದ್ದಾಗ ಇದೆಲ್ಲ ಸ್ವಪ್ನವೆಂಬ ಜ್ಞಾನವಿಲ್ಲದ್ದರಿಂದ ಇಂಥ ಪ್ರವೃತ್ತಿ ಯಾಗಬಹುದು. (ಆದರೆ ಸ್ವಪ್ನವು ಮುಗಿದಮೇಲೆ ಆಗುವದಿಲ್ಲ) (ಆದ್ದರಿಂದ ತನ್ನ ಅಜ್ಞಾನದಿಂದಲೇ ಸರ್ವವೂ ಕಲ್ಪಿತ ಎಂಬ ಅರಿವಾದ ಗುರುವು ಶಿಷ್ಯರಿಗೆ ಬೋಧನೆ ಮಾಡುವದು ಯುಕ್ತವಾಗುವದಿಲ್ಲ. ಈ ಅಜ್ಞಾನದ ಸಂಬಂಧ ಮತ್ತು ಪರಿಹಾರದಲ್ಲಿ ಶಿಷ್ಯರ ಪಾತ್ರವೇನೂ ಇಲ್ಲ) ಅಲ್ಲದೆ, ಅನೇಕ ಗುರುಗಳೂ ಶಿಷ್ಯರೂ ಇರುವದರಿಂದ ಇವರಲ್ಲಿ ಇಂಥವನ ಅಜ್ಞಾನದಿಂದ ಇದೆಲ್ಲ ಕಲ್ಪಿತವೆಂಬುದೂ ನಿಶ್ಚಯಮಾಡಲು ಬರುವ

ದಿಲ್ಲ. ಸ್ವಪ್ನದ ವಿಷಯದಲ್ಲಿ ಹೀಗಲ್ಲ. ಎಚ್ಚರವಾದಮೇಲೆ ಒಬ್ಬನೇ ಉಳಿಯುವದರಿಂದ (ಇಂಥವನದೇ ಸ್ವಪ್ನವೆಂದು) ನಿಶ್ಚಯಿಸಲು ಬರುತ್ತದೆ ಆದರೆ ಅಜ್ಞಾನದ ವಿಷಯದಲ್ಲಿ ಇಂಥವನದೇ ಎಂದು ಹೇಳಲು ಗಮಕವಿಲ್ಲ (ಏಕಜೀವವಾದದಲ್ಲಿ ಅಜ್ಞಾನಕ್ಕೆ ಆಶ್ರಯನಾದ ಈ ಜೀವನು ಯಾರು? ಅಜ್ಞಾನವು ಯಾರದು ಎಂದು ನಿರ್ಧರಿಸಲು ಬರುವದಿಲ್ಲ ಎಂದು ಈವರೆಗೆ ಹೇಳಿದರು ಈ ನಿಶ್ಚಯದ ಅಗತ್ಯವೇ ಇಲ್ಲ ಎಂದು ಏಕಜೀವವಾದಿಯು ಹೇಳಲು ಬರುವದಿಲ್ಲ ಯಾಕಂದರೆ ಹೀಗೆ ಹೇಳಿದರೆ ಮೋಕ್ಷಸಾಧಕವಾದ ಜ್ಞಾನವನ್ನು ಯಾರು ಪಡೆದುಕೊಳ್ಳಬೇಕು ಎಂಬುದು ಅನಿಶ್ಚಿತವಾಗಿ ಉಳಿಯುವದು ಇದಕ್ಕೆ ಉತ್ತರವಾಗಿ ಏಕಜೀವವಾದಿಯು) ಪ್ರತಿಯೊಬ್ಬ ಜೀವರೂ ತನ್ನ ತನ್ನ ಅಜ್ಞಾನದಿಂದ ಇದೆಲ್ಲ ಕಲ್ಪಿತವೆಂದು ತಿಳಿದುಕೊಳ್ಳಬೇಕು ಎಂದು ಅಂಗೀಕರಿಸಿದರೆ (ಇಂಥವರದೇ ಅಜ್ಞಾನವು ಸರ್ವಕಲ್ಪಕ ಎಂಬ ನಿಶ್ಚಯದ ಅಗತ್ಯವಿಲ್ಲ. ಎಲ್ಲರೂ ತಮ್ಮ ತಮ್ಮ ಅಜ್ಞಾನದಿಂದ ಸರ್ವವೂ ಕಲ್ಪಿತ ಎಂದು ಭಾವಿಸಲಿ ಎಂದು ಅಂಗೀಕರಿಸುವದೂ ಸರಿಯಲ್ಲ. ಯಾಕಂದರೆ ಈ ಜೀವನ ಅಜ್ಞಾನವೂ ಸರ್ವಕಲ್ಪಕ, ಆ ಜೀವನ ಅಜ್ಞಾನವೂ ಸರ್ವಕಲ್ಪಕ ಎರಡೂ ನಿಜ ಎಂದು ಸರ್ವಕಲ್ಪಕತ್ವವೆಂಬ ಒಂದೇ ವಿಷಯದಲ್ಲಿ) ವಿಕಲ್ಪವನ್ನು ಹೇಳಲು ಬರುವದಿಲ್ಲ (ಇದನ್ನು ತಪ್ಪಿಸಲು ಏಕಜೀವವಾದಿಯು 'ಒಬ್ಬನು ತನ್ನ ಅಜ್ಞಾನವು ಸರ್ವಕಲ್ಪಕ ಎಂದು ಭಾವಿಸಿದ್ದು ನಿಜ, ಇನ್ನುಳಿದವರದು ಭ್ರಾಂತಿ' ಎಂದು ಹೇಳುವದಾದರೆ ಅವರಲ್ಲಿ ಯಾರದು ನಿಜ ಎಂಬುದನ್ನು ನಿರ್ಧರಿಸಲು ಬರುವದಿಲ್ಲವಾದ್ದರಿಂದ ಯಾರದೂ) ಅಜ್ಞಾನಕಲ್ಪಿತವೇ ಅಲ್ಲ ಎಂದೇ ಆಗುವದು ಅಲ್ಲದೆ ಹೀಗೆ ತಿಳಿದುಕೊಳ್ಳಬೇಕು (ಪ್ರತಿಯೊಬ್ಬರೂ ಸರ್ವವೂ ತಮ್ಮ ಅಜ್ಞಾನದಿಂದ ಕಲ್ಪಿತ ಎಂದು ತಿಳಿದುಕೊಳ್ಳಬೇಕು) ಎಂಬುದಕ್ಕೆ ಪ್ರಮಾಣವೇನೂ ಇಲ್ಲ

**ವಿವರಣೆ**—ಈವರೆಗೆ ಜೀವಬ್ರಹ್ಮರ ಐಕ್ಯದ ವಿಷಯದಲ್ಲಿ ಪ್ರತ್ಯಕ್ಷ ಮತ್ತು ಆಗಮಗಳ ವಿರೋಧವನ್ನು ತೋರಿಸಿದರು. ಈಗ ಯುಕ್ತಿವಿರೋಧವನ್ನು ತೋರಿಸುವರು. ಮೊದಲು ಅದ್ವೈತಿಗಳಲ್ಲಿ ಏಕಜೀವವಾದಿಗಳಾದವರ ಏಕಜೀವವಾದವನ್ನು ನಿರಾಕರಿಸುವರು. "ಬ್ರಹ್ಮನಿಗೆ ಉಪಾಧ್ಯವಚ್ಛಿನ್ನನಾಗಿ ಪ್ರತಿಬಿಂಬನಾದ ಜೀವನು ಒಬ್ಬನೇ ಇರುವನು. ಇನ್ನಿತರ ಜೀವರು ಜಡದಂತೆ ಸ್ವರೂಪತಃ ಕಲ್ಪಿತರಾಗಿರುವರು ಆ ಒಬ್ಬ ಜೀವನಿಗೆ ತತ್ವಜ್ಞಾನವುಂಟಾದರೆ ಅವನಿಂದ ಕಲ್ಪಿತವಾದ ಈ ಬಾಹ್ಯಾಭ್ಯಂತರರೂಪವಾದ ಪ್ರಪಂಚವು ನಿವೃತ್ತವಾಗುವದು. ಈ ಪ್ರಪಂಚವು ಪ್ರತೀತಿಮಾತ್ರರೂಪವಾದ್ದರಿಂದ ಮತ್ತು ಆ ಒಬ್ಬ ಜೀವನನ್ನು ಬಿಟ್ಟು ಬೇರೆ ಯಾರೂ ಪ್ರತೀತಿಯನ್ನು ಪಡೆಯುವವರು ಇಲ್ಲದೇ ಇರುವದರಿಂದ ಇದರ ನಿವೃತ್ತಿಯಾಗುವದು. ಈ ಕಲ್ಪಕಜೀವನಿಗೆ ತತ್ವಜ್ಞಾನವಾದಾಗ ಈಶ್ವರನೂ ನಿವೃತ್ತನಾಗುವನು. ಆದ್ದರಿಂದ ಅವನೂ ಪ್ರತೀತಿಯನ್ನು ಪಡೆಯುವವನಾಗಿ ಇರುವದಿಲ್ಲ" ಎಂಬುದು ಏಕಜೀವವಾದಿಗಳ ಅಭಿಪ್ರಾಯ. ಇನ್ನು ಈ ಏಕಜೀವದ್ವಾರಾ ಇತರ ಜೀವ, ಜಡ, ಈಶ್ವರರಿಗೆ ಕಲ್ಪಿತವಾದ ಅಜ್ಞಾನವು ಎಲ್ಲಿರುವುದು ಎಂಬ ವಿಷಯದಲ್ಲಿ ಅದ್ವೈತಿಗಳಲ್ಲಿ

ಮೂರು ಅಭಿಪ್ರಾಯಗಳಿವೆ. ೧. ಜೀವ, ಜಡ, ಈಶ್ವರರ ಕಲ್ಪನೆಗೆ ಕಾರಣವಾದ ಅಜ್ಞಾನವು ಉಪಾಧ್ಯವಚ್ಛಿನ್ನವಾದ ಈ ಏಕಜೀವನಲ್ಲಿಯೇ ಇರುವದು ಎಂಬುದು ಒಂದು ಅಭಿಪ್ರಾಯ. ೨ ಸತ್ಯಜ್ಞಾನಾನಂತಾನಂದಸ್ವರೂಪ ಬ್ರಹ್ಮಾಶ್ರಿತವಾಗಿರುವದು ಎಂಬುದು ಎರಡನೆಯ ಅಭಿಪ್ರಾಯ ೩. ಜೀವತ್ವ ಅಥವಾ ಬ್ರಹ್ಮತ್ವಗಳ ವಿವಕ್ಷೆಯಿಲ್ಲದ ಸ್ವರೂಪ ಮಾತ್ರದಲ್ಲಿ ಆಶ್ರಿತವಾಗಿದ್ದು ಜೀವಪಕ್ಷಪಾತಿಯಾಗಿರುವದು ಎಂಬುದು ಮೂರನೆಯ ಅಭಿಪ್ರಾಯ ಈ ಮೂರನೆಯ ಅಭಿಪ್ರಾಯದವರು ಕನ್ನಡಿಯು ಬಿಂಬ ಅಥವಾ ಪ್ರತಿಬಿಂಬದ ವಿವಕ್ಷೆಯಿಲ್ಲದೆ ಮುಖಮಾತ್ರದ ಸಂಬಂಧವುಳ್ಳದ್ದಾಗಿ ಪ್ರತಿಬಿಂಬ ಪಕ್ಷಪಾತಿ ಯಾಗಿರುವದರ ದೃಷ್ಟಾಂತವನ್ನು ಕೊಡುವರು

ಮೇಲಿನ ಮೂರರಲ್ಲಿ ಅಜ್ಞಾನವು ಜೀವನನ್ನು ಆಶ್ರಯಿಸಿ ಇರುವದು ಎಂಬ ಪಕ್ಷದ ಖಂಡನೆಯನ್ನು ಮೊದಲು ಮಾಡಿರುವರು ಇತರ ಜೀವ, ಜಡ ಮತ್ತು ಈಶ್ವರರಿಗೆ ಕಲ್ಪಕನಾದ ಈ ಅಜ್ಞಾನಾಶ್ರಯ ಜೀವನು ಯಾರು ಎಂಬುದು ನಿಶ್ಚಿತವಾಗಿದೆಯೋ ಇಲ್ಲವೋ ? ನಿಶ್ಚಿತವಾಗಿದ್ದರೆ ಅವನು ಪ್ರಕೃತದಲ್ಲಿ ಐಕ್ಯಬುದ್ಧಿಯುಳ್ಳವನಾಗಿರುವನೋ ಭೇದಬುದ್ಧಿಯುಳ್ಳವನಾಗಿರುವನೋ ? ಐಕ್ಯಬುದ್ಧಿಯುಳ್ಳವನಾಗಿದ್ದರೆ ಗುರುವೋ ಶಿಷ್ಯನೋ ? ಗುರುವಾಗಿದ್ದರೆ ತನ್ನ ಅಜ್ಞಾನದಿಂದಲೇ ಸರ್ವವೂ ಕಲ್ಪಿತ ಎಂಬುದು ತಿಳಿದದ್ದರಿಂದ ಶಿಷ್ಯರಿಗೆ ಬೋಧನೆಮಾಡುವ ಅಗತ್ಯವೇನು ? ಬೋಧನೆ ಮಾಡುವದಾದರೂ ಏನು ? (ನನ್ನ ಅಜ್ಞಾನದಿಂದ ನೀವೆಲ್ಲ ಕಲ್ಪಿತರು ಎನ್ನುವದೇ ?) ಸ್ವಪ್ನದಿಂದ ಎಚ್ಚತ್ತವ ನಂತಿದ್ದ ತಾನು ಸ್ವಪ್ನದಲ್ಲಿಯ ಪುತ್ರರಂತಿದ್ದ ಅವರಿಗೆ ಯಾವ ಆಸ್ತಿ ಹಂಚುವನು ? ಆದ್ದರಿಂದ ತನ್ನ ಅಜ್ಞಾನದ ಅರಿವಾಗಿ ಐಕ್ಯವನ್ನು ಕಂಡಾಗ ಎಲ್ಲವೂ ಕುಪ್ಪಳಿಸಿ ಬೀಳುವದ ರಿಂದ ಈ ಏಕಜೀವ ಗುರುವು ಶಿಷ್ಯಾದಿಗಳಿಗೆ ಬೋಧನೆಯನ್ನು ಮಾಡಲಾರನು.

ಅಲ್ಲದೆ ಅನೇಕ ಗುರುಗಳೂ ಅನೇಕ ಶಿಷ್ಯರೂ ಇರುವದರಿಂದ ಯಾರ ಜೀವ ಈ ಏಕಜೀವ ಎಂದು ಹೇಗೆ ನಿರ್ಧರಿಸುವದು ? ಪ್ರತಿಯೊಬ್ಬರೂ ತಾವೇ ಈ ಏಕಜೀವವೆಂದು ಭಾವಿಸಲಿ ಎಂದೂ ಹೇಳಲು ಬರುವದಿಲ್ಲ. ಹಾಗೆ ಭಾವಿಸಿದರೆ ಇವರೆಲ್ಲರ ಅಂಥ ಭಾವನೆ ಸರಿಯೆಂದು ಹೇಳಲು ಬರುವದಿಲ್ಲ. ಇವರಲ್ಲಿ ಯಾರೋ ಒಬ್ಬರು ಏಕಜೀವರಾಗಿದ್ದು ಉಳಿದವರು ಅವನಿಂದ ಕಲ್ಪಿತರಾಗಿದ್ದಾರೆ ಅಂದಮೇಲೆ ಎಲ್ಲರೂ ಮೋಕ್ಷಸಾಧನವಾದ ವಿದ್ಯಾಸಂಪಾದನೆಯನ್ನು ಮಾಡಲು 'ಎಲ್ಲವೂ ನನ್ನ ಅಜ್ಞಾನದಿಂದ ಕಲ್ಪಿತ, ನಾನು ಬ್ರಹ್ಮಾಭಿನ್ನನು' ಎಂದು ಅನುಸಂಧಾನವನ್ನು ಮಾಡುವದು ವಾಸ್ತವಿಕವಾಗಲಾರದು. ದೇವದತ್ತನ ಅನುಸಂಧಾನದಲ್ಲಿ ಯಜ್ಞದತ್ತನು ಕಲ್ಪಿತನಾಗುವನು ಯಜ್ಞದತ್ತನ ಅನುಸಂಧಾನದಲ್ಲಿ ದೇವದತ್ತನು ಕಲ್ಪಿತನಾಗುವನು. ಇವೆರಡೂ ನಿಜವಾಗಲಾರವು. ತತ್ವದ ವಿಷಯದಲ್ಲಿ ಇಂಥ ವಿಕಲ್ಪ ಅಂದರೆ ಉಭಯ ಪಕ್ಷಗಳೂ ನಿಜವಾಗಿರುವದು ಕೂಡುವದಿಲ್ಲ. ಇನ್ನು ಎಲ್ಲರೂ ಹೀಗೆ ಅನುಸಂಧಾನಮಾಡಿದರೂ ಒಬ್ಬನದೇ ನಿಜ, ಇತರರದು ಭ್ರಾಂತಿ ಎಂದರೂ ಆ ಒಬ್ಬನು ಯಾರು ಎಂಬ ಪ್ರಶ್ನೆ ಉಳಿಯುವದು. ಆದ್ದರಿಂದ ಈ ಗೊಂದಲಕ್ಕೆ ಬೀಳುವುದಕ್ಕಿಂತ ಯಾರೂ ಕಲ್ಪಿತರೇ ಅಲ್ಲ ಎಂದು ಅಂಗೀಕರಿಸಿ

ಈ ಅಜ್ಞಾನ ಮತ್ತು ಏಕಜೀವ ವಾದವನ್ನು ಕೈ ಬಿಡುವದೇ ಒಳಿತು. ಪ್ರತಿಯೊಬ್ಬ ಜೀವನೂ ಸರ್ವವೂ ತನ್ನ ಅಜ್ಞಾನದಿಂದ ಕಲ್ಪಿತ ಎಂದು ಭಾವಿಸಬೇಕೆನ್ನಲು ಪ್ರಮಾಣ ವಾದರೂ ಎಲ್ಲಿದೆ ?

**ಅಜ್ಞಾನಾಶ್ರಯನಾದ ಏಕಜೀವನು ಶಿಷ್ಯನು ಎಂದು ಹೇಳಿದರೆ ಬರುವ ದೋಷಗಳು.**

**70. ಶಿಷ್ಯಾಜ್ಞಾನಪರಿಕಲ್ಪಿತಮಿತ್ಯಂಗೀಕಾರೇ ತಸ್ಯೈವ ಆಚಾರ್ಯಭಾವೇ ಸ್ವಯಮೇವ ಕಲ್ಪಿತೋ ಭವತೀತಿ ಸಮ್ಯಗ್ ಗ್ರಂಥಾಧಿಗಮಸ್ಯೈವ ಅನರ್ಥ-ಹೇತುತ್ವಂ ಸ್ಯಾತ್ । ನ ಚ ಕಸ್ಯಚಿತ್ ಮುಕ್ತಿಃ । ಗ್ರಂಥಾಧಿಗಮೇ ತಸ್ಯೈವ ಶಿಷ್ಯಾಜ್ಞಾನಪರಿಕಲ್ಪಿತತ್ವಪ್ರಾಪ್ತೇಃ ।**

**ಸ ಚ ಏಕಜೀವೋ ಯದಿ ಭೇದವಾದೀ ಭವತಿ ತಸ್ಯ ತತ್ರೈವ ದಾರ್ಢ್ಯಾತ್ ನ ಕದಾಚಿತ್ ಭೇದನಿವೃತ್ತಿರಿತಿ ನ ಕಸ್ಯಾಪಿ ಮುಕ್ತಿಃ ಸ್ಯಾತ್ । ತೇನ ಯಥಾ ಕಲ್ಪಿತಂ ತಥೈವ ಭವತೀತಿ ತೇನ ಏಕಜೀವವಾದಿನಾಂ ನಿತ್ಯನಿರಯಕಲ್ಪನೇ ಸ ಏವ ಸ್ಯಾತ್ । ನ ಚ ಏಕಜೀವಾಜ್ಞಾನಪರಿಕಲ್ಪಿತಂ ಸಮಸ್ತಂ ಇತ್ಯತ್ರ ಕಿಂಚಿತ್ ಮಾನಮ್ ।**

**ಅನುವಾದ**— (ಸಮಸ್ತ ಪ್ರಪಂಚವೂ ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತ ಎಂದು ಹೇಳುವ ಏಕಜೀವವಾದಿಗಳ ಮತದಲ್ಲಿ ಈ ಏಕಜೀವನು ಯಾರು ಎಂಬುದು ನಿಶ್ಚಿತವೋ ಅಲ್ಲವೋ ? ನಿಶ್ಚಿತನಾಗಿದ್ದರೆ ಅವನು ಗುರುವೋ ಶಿಷ್ಯನೋ ಎಂಬ ಕಲ್ಪಗಳನ್ನು ಮಾಡಿ 'ಗುರುವು' ಎಂದು ಹೇಳಿದರೆ ಬರುವ ದೋಷಗಳನ್ನು ಈವರೆಗೆ ಹೇಳಿದರು. ಇನ್ನು ಮುಂದೆ 'ಅವನು ಶಿಷ್ಯನು' ಎಂದು ಹೇಳಿದರೆ ಬರುವ ದೋಷಗಳನ್ನು ಹೇಳುವರು ) ಶಿಷ್ಯನಾದ ಜೀವನ ಅಜ್ಞಾನದಿಂದ (ಇನ್ನಿತರ ಜೀವರೂ ಜಗತ್ತೂ) ಕಲ್ಪಿತವೆಂದು ಹೇಳಿದರೆ ಅವನು ಗುರುವಾದಾಗ (ಅಂದರೆ ಮಹಾವಾಕ್ಯಾರ್ಥಜ್ಞಾನವನ್ನು ಪಡೆದಾಗ) ತಾನೂ (ತನ್ನ ಶಿಷ್ಯನ ಅಜ್ಞಾನದಿಂದ) ಕಲ್ಪಿತನೆಂಬುದರ ಅರಿವಾಗಿ ಗ್ರಂಥಗಳ ಸಮ್ಯಗ್ ಜ್ಞಾನವೇ ಅವನಿಗೆ ಅನರ್ಥಕ್ಕೆ ಕಾರಣವಾಗುವದು (ತಾನು ಇನ್ನೊಬ್ಬರ ಅಂದರೆ ತನ್ನ ಶಿಷ್ಯನ ಅಜ್ಞಾನದಿಂದ ಕಲ್ಪಿತ ಅವನ ಅಜ್ಞಾನ ಅವನಿಗೆ ಆತ್ಮೈಕ್ಯಜ್ಞಾನವಾಗುವವರೆಗೆ ಹೋಗುವದಿಲ್ಲ ಅದನ್ನು ಅವನಿಗೆ ದೊರಕಿಸುವದು ನನ್ನ ಕೈಯ್ಯಲ್ಲಿಲ್ಲ. ಆದ್ದರಿಂದ ನಾನು ಹೀಗೆ ಸಂಸಾರದಲ್ಲಿ ಒದ್ದಾಡಬೇಕು ಎಂಬ ಅನರ್ಥಕ್ಕೇ ಕಾರಣವಾಗುವದು) ಅಲ್ಲದೆ, ಯಾರಿಗೂ ಮೋಕ್ಷವಾಗಲಾರದು. ಯಾಕೆಂದರೆ ಗ್ರಂಥವನ್ನು ತಿಳಿದುಕೊಂಡಾಗ (ಮಹಾ ವಾಕ್ಯಾರ್ಥಜ್ಞಾನ ಮಾಡಿಕೊಂಡಾಗ) ತಾನೂ ತನ್ನ ಶಿಷ್ಯನ ಅಜ್ಞಾನದಿಂದ ಕಲ್ಪಿತ ಎಂದು ಅವನಿಗೆ ತೋರುವದು. ಒಬ್ಬ ಶಿಷ್ಯನು ಮಹಾ ವಾಕ್ಯಾರ್ಥಜ್ಞಾನವನ್ನು ಪಡೆದು ಗುರುವಾದ ಕೂಡಲೇ ತನ್ನ ಶಿಷ್ಯನ ಅಜ್ಞಾನದಿಂದ ತಾನು ಕಲ್ಪಿತ ಎಂದು ಅವನಿಗೆ ತೋರುವದು, ಆ ಶಿಷ್ಯನಿಗೆ ಮಹಾ ವಾಕ್ಯಾರ್ಥಜ್ಞಾನವಾದಾಗ ಅವನಿಗೂ ಹೀಗೆಯೇ

ತೋರುವದು, ಅವನ ಶಿಷ್ಯನಿಗೂ ಇದೇ ಗತಿ ಹೀಗೆ ಎಲ್ಲರೂ ತಮ್ಮ ತಮ್ಮ ಶಿಷ್ಯನ ಅಜ್ಞಾನ ಪರಿಹಾರವಾಗುವದನ್ನು ಕಾಯುತ್ತ ಕೂಡುವದರಿಂದ ಯಾರಿಗೂ ಮೋಕ್ಷವೇ ಇಲ್ಲದಂತಾಗುವದು).

**ಅಜ್ಞಾನಾಶ್ರಯನಾದ ಏಕಜೀವನು ಭೇದವಾದಿಯಾಗಿದ್ದರೆ ಬರುವ ದೋಷಗಳು.**

(ಏಕಜೀವವಾದದಲ್ಲಿ ಅಜ್ಞಾನಕ್ಕೆ ಒಳಗಾದ ಆ ಜೀವನು ಐಕ್ಯಜ್ಞಾನವನ್ನು ಪಡೆಯಲು ಪ್ರಯತ್ನಿಸುವಾಗ ಗುರುವಾದರೂ ಸಾಧ್ಯವಾಗುವದಿಲ್ಲ, ಶಿಷ್ಯನಾದರೂ ಸಾಧ್ಯವಾಗುವದಿಲ್ಲ, ಎಂದು ಮೇಲೆ ವಿವರಿಸಿದರು ಇನ್ನು ಮುಂದೆ ಈ ಏಕಜೀವನು ಭೇದವಾದಿಯಾದರೆ ಉಂಟಾಗುವ ದೋಷಗಳನ್ನು ಹೇಳುವರು). ಈ ಏಕಜೀವನು ಭೇದವಾದಿಯಾಗಿದ್ದರೆ ಅವನಿಗೆ ಭೇದದ ವಿಷಯದಲ್ಲಿಯೇ ದೃಢವಾದ ಸಂಸ್ಕಾರವಿರುವದರಿಂದ ಅವನಿಗೆ ಭೇದನಿವೃತ್ತಿಯೇ ಆಗಲಾರದು ಮತ್ತು (ಅದ್ವೈತಾಭಿಮತವಾದ) ಮುಕ್ತಿಯೂ ಆಗಲಾರದು ಅಲ್ಲದೆ (ಸರ್ವ ಕಲ್ಪಕನಾದ) ಅವನು ಹೇಗೆ ಕಲ್ಪಿಸುವನೋ ಹಾಗೆಯೇ (ಎಲ್ಲರಿಗೂ) ಆಗುವದರಿಂದ ಅವನು ಏಕಜೀವವಾದಿಗಳಿಗೆ ನಿತ್ಯನರಕವನ್ನು ಕಲ್ಪಿಸಿದರೆ ಅದೇ ಆಗುವದು

**ವಿವರಣೆ** ಏಕಜೀವವಾದದಲ್ಲಿ ಯಾವದೋ ಒಬ್ಬ ಜೀವನು ಅಜ್ಞಾನವುಳ್ಳವನಾಗಿದ್ದು ಅವನ ಅಜ್ಞಾನದಿಂದ ಇತರ ಜೀವರೂ ಜಗತ್ತು ಕಲ್ಪಿತವೆಂದು ಹೇಳುವರು. ಆದರೆ ಈ ಒಬ್ಬ ಜೀವನು ಯಾರು ಎಂದು ನಿರ್ಧರಿಸಲು ಬರುವದಿಲ್ಲ ಅವನು ಗುರುವೋ ಶಿಷ್ಯನೋ ಎಂಬುದು ನಿಶ್ಚಯಿಸಲು ಬರುವದಿಲ್ಲ ಇದರಲ್ಲಿ ಯಾರನ್ನು ಗ್ರಹಿಸಿದರೂ ಒಂದಿಲ್ಲೊಂದು ದೋಷವು ಬರುತ್ತದೆ ಆದ್ದರಿಂದ ಈ ಏಕಜೀವವಾದವೇ ಸುಸಂಗತವಲ್ಲ. ಇಂಥ ವಾದಕ್ಕೆ ಯಾವ ಪ್ರಮಾಣವೂ ಇಲ್ಲ

**'ಪ್ರಪಂಚೋ ಯದಿ ವಿದ್ಯೇತ' ಎಂಬ ಶ್ರುತಿಯ ಅರ್ಥವಿವರಣೆ.**

71. ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।
ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥

**ಇತ್ಯಸ್ಯ ಚ ಅಯಮರ್ಥಃ – ಪ್ರಪಂಚೋ ಯದಿ ವಿದ್ಯೇತ ಭವೇತ ಉತ್ಪದ್ಯೇತ ತರ್ಹಿ ನಿವರ್ತೇತ, ನ ಚ ನಿವರ್ತತೇ, ತಸ್ಮಾತ್ ಅನಾದಿರೇವಾಯಮ್ । ಪ್ರಕೃಷ್ಟಃ ಪಂಚವಿಧಃ ಭೇದಃ ಪ್ರಪಂಚಃ । ನ ಚ ಅವಿದ್ಯಮಾನೋಽಯಂ ಮಾಯಾಮಾತ್ರತ್ವಾತ್ । ಮಾಯೇತಿ ಭಗವತ್ಪ್ರಜ್ಞಾ ಸೈವ ಮಾನತ್ರಾಣಕರ್ತ್ರೀ ಯಸ್ಯ ತನ್ಮಾಯಾಮಾತ್ರಮ್ । ಪರಮೇಶ್ವರೇಣ ಜ್ಞಾತತ್ವಾತ್ ರಕ್ಷಿತತ್ವಾಚ್ಚ ನ ದ್ವೈತಂ ಭ್ರಾಂತಿಕಲ್ಪಿತಮಿತ್ಯರ್ಥಃ । ನ ಹಿ ಈಶ್ವರಸ್ಯ ಭ್ರಾಂತಿಃ । ತರ್ಹಿ ಅದ್ವೈತಃ ಸರ್ವಭಾವಾನಾಮಿತಿ ವ್ಯಪದೇಶಃ ಕಥಮಿತ್ಯತಃ ಆಹ 'ಅದ್ವೈತಂ ಪರಮಾರ್ಥತಃ' ಇತಿ ।**

**ಪರಮಾರ್ಥಾಪೇಕ್ಷಯಾ ಹಿ ಅದ್ವೈತಂ ಸರ್ವಸ್ಮಾದುತ್ತಮೋsರ್ಥಃ ಸ ಏಕ ಏವೇತ್ಯರ್ಥಃ । ಅನ್ಯಥಾ ಹಿ 'ಅದ್ವೈತಃ ಸರ್ವಭಾವಾನಾಮಿ'ತಿ ವ್ಯರ್ಥಂ ಸ್ಯಾತ್ । ಸರ್ವ ಭಾವಾನಾಂ ಮಧ್ಯೇ ತಸ್ಯ ಏಕಸ್ಯೈವ ಅದ್ವೈತತ್ವಮಿತ್ಯುಕ್ತೇ ಸಮಾಧಿಕ-ರಾಹಿತ್ಯಮೇವ ಉಕ್ತಂ ಸ್ಯಾತ್ । ಅನ್ಯೇಷಾಂ ಸರ್ವಭಾವಾನಾಂ ಚ ಸಮಾಧಿಕ-ಭಾವಃ ॥**

**ಅನುವಾದ**—( 'ಅನಾದಿಮಾಯಯಾ ಸುಪ್ತಃ' ಇತ್ಯಾದಿ ಶ್ರುತಿಯು ಏಕಜೀವ ವಾದಕ್ಕೆ ಪ್ರಮಾಣ ಎಂಬ ಅದ್ವೈತಿಗಳ ವಾದವನ್ನು ನಿರಾಕರಿಸಲು ಆ ಶ್ರುತಿಯ ಮತ್ತು ಅದರ ಪೂರ್ವೋತ್ತರ ಶ್ರುತಿಗಳ ಸರಿಯಾದ ಅರ್ಥವನ್ನು ವಿವರಿಸುವರು )

ಪ್ರಪಂಚ ಅಂದರೆ ಪಂಚಭೇದಗಳು ಉತ್ಪನ್ನವಾಗಿದ್ದರೆ ನಷ್ಟವೂ ಆಗುತ್ತಿದ್ದವು ಎಂಬುದರಲ್ಲಿ ಸಂದೇಹವಿಲ್ಲ ಈ ಪಂಚಭೇದಗಳು ಪರಮೇಶ್ವರನ ಪ್ರಜ್ಞೆಯಿಂದ ಜ್ಞಾತವೂ ರಕ್ಷಿತವೂ ಆಗಿವೆ ('ಮಾಯಾ' ಅಂದರೆ ಪರಮೇಶ್ವರನ ಪ್ರಜ್ಞೆಯು, ಅದರಿಂದ 'ಮಾತ್ರ' ಅಂದರೆ ಜ್ಞಾತ ಮತ್ತು ರಕ್ಷಿತವಾದದ್ದು, ದ್ವೈತ ಅಂದರೆ ಪಂಚಭೇದಗಳು ) ಎಲ್ಲಕ್ಕಿಂತಲೂ ಉತ್ತಮನಾದವನು ಪರಮಾತ್ಮನೊಬ್ಬನೇ ಆಗಿದ್ದಾನೆ ( 'ಅದ್ವೈತಂ ಪರಮಾರ್ಥತಃ' ಸರ್ವೋತ್ತಮನಾದವನು ಒಬ್ಬನೇ ಆಗಿದ್ದಾನೆ) ಎಂಬ ಶ್ರುತಿಯ ಅರ್ಥವು ಹೀಗಿದೆ— 'ಪ್ರಪಂಚ' ಅಂದರೆ ಪಂಚಭೇದಗಳು 'ಯದಿ ವಿದ್ಯೇತ' ಉತ್ಪನ್ನವಾಗಿದ್ದರೆ, 'ನಿವರ್ತೇತ' ನಾಶವಾಗುತ್ತಿದ್ದವು. ಆದರೆ ಅವು ನಾಶವಾಗುವದಿಲ್ಲ (ಆದ್ದರಿಂದ ಉತ್ಪನ್ನವೂ ಆಗು ವದಿಲ್ಲ). ಆದ್ದರಿಂದ ಅನಾದಿಯಾಗಿವೆ 'ಪ್ರಪಂಚ' ಅಂದರೆ ಪ್ರಕೃಷ್ಟವಾದ ಪಂಚವಿಧ ವಾದ ಭೇದಗಳು (ಪ್ರಕೃಷ್ಟ ಅಂದರೆ ಮೋಕ್ಷಸಾಧನವಾದ ಜ್ಞಾನವಿಷಯಗಳು ) ಈ ಭೇದ ಗಳೇ ಇಲ್ಲವೆಂದು ಹೇಳಲು ಬರುವದಿಲ್ಲ ಯಾಕಂದರೆ ಇವು 'ಮಾಯಾಮಾತ್ರ'ವಾಗಿವೆ. ಮಾಯಾ ಅಂದರೆ ಭಗವಂತನ ಪ್ರಜ್ಞೆಯು. ಅದು ಯಾವದಕ್ಕೆ ಮಾನ (ಅಂದರೆ ಜ್ಞಾನ) ಮತ್ತು ತ್ರಾಣಕಾರಕವಾಗಿರುವದೋ ಅದು ಮಾಯಾಮಾತ್ರವು ಪರಮೇಶ್ವರನಿಂದ ಜ್ಞಾತವೂ ರಕ್ಷಿತವೂ ಆದ್ದರಿಂದ ದ್ವೈತವು ಅಂದರೆ ಭೇದಗಳು ಭ್ರಾಂತಿಕಲ್ಪಿತವಲ್ಲ ಎಂದು ಅರ್ಥವು. ಈಶ್ವರನಿಗೆ ಭ್ರಾಂತಿಯಿಲ್ಲ. ಹಾಗಾದರೆ 'ಅದ್ವೈತಃ ಸರ್ವಭಾವಾನಾಂ ದೇವಃ ತುರ್ಯೋ ವಿಭುಃ ಸ್ಮೃತಃ' ಎಂಬುದನ್ನು ಹೇಗೆ ಹೊಂದಿಸುವಿರಿ ಎಂಬುದಕ್ಕೆ 'ಅದ್ವೈತಂ ಪರಮಾರ್ಥತಃ' ಎಂದು ಹೇಳಿದೆ. ಪರಮಾರ್ಥತಃ ಅಂದರೆ ಸರ್ವೋತ್ತಮ ಎಂಬ ದೃಷ್ಟಿಯಿಂದ 'ಅದ್ವೈತವಸ್' ಒಂದೇ ಆಗಿದೆ. 'ಎಲ್ಲದಕ್ಕಿಂತಲೂ ಉತ್ತಮನಾದವನು ಪರಮಾತ್ಮನೊಬ್ಬನೇ ಆಗಿದ್ದಾನೆ.' ಎಂದು ಅರ್ಥವು ಹೀಗೆ ಅರ್ಥಮಾಡದಿದ್ದರೆ 'ಅದ್ವೈತಃ ಸರ್ವಭಾವಾನಾಮ್' ಎಂಬುದು ವ್ಯರ್ಥವಾಗುವದು. (ಸರ್ವಭಾವಾನಾಮ್ ಎಂದು ಹೇಳದೆ ಕೇವಲ 'ಅದ್ವೈತಃ' ಎಂದು ಹೇಳಿದರೆ ಸಾಕಾಗುತ್ತಿತ್ತು.) ಅಲ್ಲದೆ, ಸರ್ವವಸ್ತು ಗಳಲ್ಲಿ ಅವನೊಬ್ಬನೇ ಅದ್ವೈತನು ಅಂದರೆ ಅದ್ವಿತೀಯನು ಎಂದು ಹೇಳಿದ್ದರಿಂದ ಅವನಿಗೆ

ಸಮನಾದುದೂ ಅವನಿಗಿಂತ ಅಧಿಕವಾದುದೂ ಯಾವದೂ ಇಲ್ಲವೆಂದು ಹೇಳಿದಂತಾಗುವದು (ಇದು ಇಷ್ಟವೇ ಆಗಿದೆ) ಇನ್ನಿತರ ವಸ್ತುಗಳು ಪರಸ್ಪರ ಸಮ ಅಥವಾ ಅಧಿಕವಾಗಿರುವವು (ಅವನಿಗೆ ಸಮ ಅಥವಾ ಅಧಿಕವಾದುದು ಮಾತ್ರ ಯಾವದೂ ಇಲ್ಲ)

ವಿವರಣೆ—'ಪ್ರಪಂಚೋ ಯದಿ ವಿದ್ಯೇತ' ಎಂಬ ಶ್ಲೋಕಕ್ಕಿಂತ ಮೊದಲು—

ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।
ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥

ಎಂಬ ಶ್ಲೋಕವಿದೆ ಈ ಶ್ಲೋಕದಲ್ಲಿ ಒಬ್ಬನೇ ಜೀವನು ಪ್ರಪಂಚವನ್ನೆಲ್ಲ ಕಲ್ಪಿಸುವ ಅಜ್ಞಾನಕ್ಕೆ ಆಶ್ರಯನಾಗಿದ್ದಾನೆ ಆದ್ದರಿಂದ ಇದು ಏಕಜೀವವಾದಕ್ಕೆ ಪ್ರಮಾಣ ಎಂದು ಅದ್ವೈತಿಗಳು ಹೇಳುವರು ಆದರೆ ಈ ಶ್ಲೋಕದ ಅರ್ಥ ಅವರು ಹೇಳುವಂತೆ ಇಲ್ಲ ಇದರ ಸರಿಯಾದ ಅರ್ಥ ಹೀಗಿದೆ—'ಅನಾದಿಮಾಯಯಾ ಅಂದರೆ ಅನಾದಿಯಾದ ಪರಮಾತ್ಮನ ಇಚ್ಛೆಯಿಂದಲೂ ಪ್ರಕೃತ್ಯಾದಿಗಳಿಂದಲೂ ಸುಪ್ತನಾದ ಅಂದರೆ ಸಂಸಾರ ಬಂಧನಕ್ಕೆ ಒಳಗಾದ ಜೀವನು (ಪರಮಾತ್ಮನ ಪ್ರಸಾದದಿಂದ) ಜ್ಞಾನವನ್ನು ಪಡೆದಾಗ ಅಜ ಅಂದರೆ ಜನ್ಮಾದಿ ದೋಷರಹಿತನಾದ, ಅನಿದ್ರ ಅಂದರೆ ಅಜ್ಞಾನರಹಿತನಾದ, ಅಸ್ವಪ್ನ ಅಂದರೆ ಸ್ವಪ್ನಾದಿ ಅವಸ್ಥಾರಹಿತನಾದ ಅದ್ವೈತ ಅಂದರೆ ಮಿಥ್ಯಾಜ್ಞಾನ ನಿವರ್ತಕನಾದ ಪರಮಾತ್ಮನ ಅಪರೋಕ್ಷಜ್ಞಾನವನ್ನು ಪಡೆಯುವನು' ಇಲ್ಲಿ ಜೀವ-ಈಶ್ವರ, ಜೀವ-ಜಡ, ಜಡ-ಈಶ್ವರರ ಭೇದವು ಸ್ಪಷ್ಟವಾಗಿ ಕಂಡುಬರುತ್ತದೆ ಈ ಹಿಂದೆ 'ಪ್ರಭವಃ ಸರ್ವಭಾವಾನಾಮ್' ಎಂದು ಜೀವ-ಜೀವ, ಜಡ-ಜಡಗಳ ಭೇದವನ್ನೂ ಹೇಳಿದೆ ಈ ಎಲ್ಲ ಭೇದಗಳು ಅನಾದಿ ಎಂಬುದೂ ಅಲ್ಲಿಯ ವಿಶೇಷಣಗಳ ಸಾಮರ್ಥ್ಯದಿಂದ ತಿಳಿದುಬರುವದು ಈ ಪಂಚ ಭೇದಗಳ ಅನಾದಿತ್ವ ಮತ್ತು ಸತ್ಯತ್ವವನ್ನು ಉಪಪಾದಿಸಲು 'ಪ್ರಪಂಚೋ ಯದಿ ವಿದ್ಯೇತ' ಇತ್ಯಾದಿಯಾದ ಎರಡು ಶ್ಲೋಕಗಳು ಹೊರಟಿವೆ. ಆದ್ದರಿಂದ ಇಲ್ಲಿ ಏಕಜೀವವಾದದ ಅಥವಾ ಅದ್ವೈತದ ಪ್ರತಿಪಾದನೆಯ ಪ್ರಸಕ್ತಿಯೇ ಇಲ್ಲ. 'ಪ್ರಪಂಚೋ ಯದಿ ವಿದ್ಯೇತ' ಎಂಬ ಶ್ಲೋಕದ ಅರ್ಥವು ಅನುವಾದದಲ್ಲಿಯೇ ಬಂದಿದೆ

**ಪಂಚಭೇದಗಳ ಅನಾದಿತ್ವ, ಸತ್ಯತ್ವಗಳನ್ನು 'ಪ್ರಪಂಚೋ ಯದಿ ವಿದ್ಯೇತ' ಎಂಬ ಶ್ರುತಿಯು ಹೇಳುವದು.**

**72. 'ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್' ಇತಿವಾಕ್ಯಶೇಷಾಚ್ಚ ನ ಕಲ್ಪಿತತ್ವಮಸ್ಯೇತಿ ಜ್ಞಾಯತೇ । ನಿವರ್ತತೇ ಇತ್ಯಂಗೀಕಾರೇ 'ನಿವರ್ತೇತ' 'ವಿದ್ಯೇತ' ಇತಿ ಚ ಪ್ರಸಂಗರೂಪೇಣ ಕಥನಂ ಯದಿ ಶಬ್ದಾಶ್ಚ ನ ಯುಜ್ಯಂತೇ । 'ವಿದ್ಯೇತ' ಇತ್ಯಸ್ಯ ಚ ಉತ್ಪತ್ತ್ಯರ್ಥಾನಂಗೀಕಾರೇ ಯದ್ಯದಸ್ತಿ ತತ್ತನ್ನಿವರ್ತತೇ ಇತಿ ವ್ಯಾಪ್ತ್ಯಭಾವಾನ್ನಿವರ್ತೇತ ಇತಿ ನ ಯುಜ್ಯತೇ । ಅತಃ ಪ್ರಪಂಚಸ್ಯ ಅನಾದಿಸತ್ಯತ್ವ ಪರಮಿದಂ ವಾಕ್ಯಮ್ । ಅತಃ 'ಉಪದೇಶಾದಯಂ**

ವಾದೋ ಅಜ್ಞಾತೇ ದ್ವೈತಂ ನ ವಿದ್ಯತೇ ' ಇತ್ಯಾಹ । ಅಜ್ಞಾತ ಏವ ದ್ವೈತಂ ನ ವಿದ್ಯತೇ । ಅಜ್ಞಾನಿನಾಂ ಪಕ್ಷ ಏವ ದ್ವೈತಂ ನ ವಿದ್ಯತೇ ಇತ್ಯರ್ಥಃ ।

ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ ।
ಜೀವಭೇದೋ ಮಿಥಶ್ಚೈವ ಜಡಜೀವ ಭಿದಾ ತಥಾ ॥
ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ ।
ಸೋಽಯಂ ಸತ್ಯೋ ಹಿ ಅನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ ॥
ನ ಚ ನಾಶಂ ಪ್ರಯಾತ್ಯೇಷ ನ ಚಾಸೌ ಭ್ರಾಂತಿಕಲ್ಪಿತಃ ।
ಕಲ್ಪಿತಶ್ಚೇನ್ನಿವರ್ತೇತ ನ ಚಾಸೌ ವಿನಿವರ್ತತೇ ॥
ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತವ್ ।
ಮತಂ ಹಿ ಜ್ಞಾನಿನಾಮೇತನ್ಮಿತಂ ತ್ರಾತಂ ಚ ವಿಷ್ಣುನಾ ॥
ತಸ್ಮಾತ್ ಸತ್ಯಮಿತಿ ಪ್ರೋಕ್ತಂ ಪರಮೋ ಹರಿರೇವ ತು । ಇತಿ ಪರಮಶ್ರುತಿಃ

**ಅನುವಾದ**—( ' ಪ್ರಪಂಚೋ ಯದಿ ವಿದ್ಯೇತ ' ಎಂಬ ಶ್ಲೋಕದಲ್ಲಿ ಜಗತ್ತು ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತ ಎಂದು ಹೇಳಿಲ್ಲ ಆದರೆ ಪಂಚಭೇದಗಳು ಸತ್ಯ, ನಿತ್ಯ ಎಂದು ಹೇಳಿದೆ ಎಂದು ವಿವರಿಸಿದರು ಈಗ ಅದರ ಮುಂದಿನ ಶ್ಲೋಕವಾದ ' ವಿಕಲ್ಪೋ ವಿನಿವರ್ತೇತ ' ಎಂಬ ಶ್ಲೋಕವು ಭೇದಪರವಾದ ಈ ವ್ಯಾಖ್ಯಾನವನ್ನು ಸಮರ್ಥಿಸುತ್ತದೆ ಎಂದು ಹೇಳುವರು )

ವಿಕಲ್ಪ ಅಂದರೆ ಭೇದವು (ಅಜ್ಞಾನಾದಿ) ಯಾವದರಿಂದಲಾದರೂ ಕಲ್ಪಿತವಾಗಿದ್ದರೆ ನಿವೃತ್ತವಾಗುತ್ತಿತ್ತು (ಬಾಧಿತವಾಗುತ್ತಿತ್ತು) ಎಂಬ ಮುಂದಿನ ಶ್ಲೋಕದಲ್ಲಿಯ ವಾಕ್ಯದಿಂದ ಅದು ಕಲ್ಪಿತವಲ್ಲವೆಂದು ತಿಳಿದುಬರುತ್ತದೆ. ' ನಿವರ್ತತೇ ' ಅಂದರೆ ನಿವೃತ್ತವಾಗುತ್ತದೆ ಎಂದು ಸ್ವರೂಪಕಥನವು ಅಭಿಪ್ರೇತವಾಗಿದೆ ಎಂದು ಹೇಳುವದಾದರೆ ' ನಿವರ್ತೇತ ' ' ವಿದ್ಯೇತ ' ಎಂದು ' ಲಿಙ್ ' ಪ್ರಯೋಗಮಾಡಿ ಪ್ರಸಂಗಾಪಾದನ ಮಾಡಿ ಹೇಳಿದ್ದೂ ' ಯದಿ ' ಶಬ್ದಗಳನ್ನು ಪ್ರಯೋಗಮಾಡಿದ್ದೂ ಯುಕ್ತವಾಗುವದಿಲ್ಲ ' ವಿದ್ಯೇತ ' ಎಂಬುದಕ್ಕೆ (ನಾವು ಹೇಳಿದಂತೆ) ಉತ್ಪನ್ನವಾಗಿದ್ದರೆ ಎಂಬ ಅರ್ಥವನ್ನು ಅಂಗೀಕರಿಸದಿದ್ದರೆ ' ಇದ್ದರೆ ' ಎಂದು ಸತ್ತಾರ್ಥಕವೆಂದು ತೆಗೆದುಕೊಂಡರೆ ' ಯಾವದು ಇದೆಯೋ ಅದು ನಿವೃತ್ತವಾಗುವದು ' ಎಂಬ ವ್ಯಾಪ್ತಿಯಿಲ್ಲದ್ದರಿಂದ (ನಿತ್ಯವಾದವು ಇರುವವು ಆದರೆ ನಿವೃತ್ತವಾಗುವದಿಲ್ಲ ) ' ನಿವರ್ತೇತ ' ನಿವೃತ್ತವಾಗುತ್ತಿತ್ತು ಎಂದು (ಪ್ರಸಂಗರೂಪದಿಂದ) ಹೇಳಿದ್ದು ಯುಕ್ತವಾಗುವದಿಲ್ಲ (ಪ್ರಸಂಗಾಪಾದನ ಮಾಡಬೇಕಾದರೆ ವ್ಯಾಪ್ತಿಯಿರಬೇಕಾಗುತ್ತದೆ.) ಆದ್ದರಿಂದ ಪ್ರಪಂಚದ ಅಂದರೆ ಪಂಚಭೇದಗಳ ಅನಾದಿತ್ವ ಮತ್ತು ಸತ್ಯತ್ವಗಳನ್ನೇ ಈ ವಾಕ್ಯವು (ಪ್ರಪಂಚೋ ಯದಿ ವಿದ್ಯೇತ ಇತ್ಯಾದಿಯಾದ ವಾಕ್ಯವು) ಪ್ರತಿಪಾದಿಸುವದು. ಆದ್ದರಿಂದಲೇ ' ಉಪದೇಶಾದಯಂ ವಾದೋ ಅಜ್ಞಾತೇ ದ್ವೈತಂ ನ ವಿದ್ಯತೇ ' ಎಂದು ಹೇಳಿದೆ ' ಅಜ್ಞಾತ ಏವ ದ್ವೈತಂ ನ ವಿದ್ಯತೇ ' ಅಜ್ಞಾನಿಗಳ ಪಕ್ಷದಲ್ಲಿಯೇ ದ್ವೈತವು ಇಲ್ಲ ಎಂದು ಅರ್ಥವು

'ಜೀವ-ಈಶ್ವರರಲ್ಲಿ ಭೇದ, ಜಡ-ಈಶ್ವರರಲ್ಲಿ ಭೇದ, ಜೀವ-ಜೀವರಲ್ಲಿ ಭೇದ, ಜಡ-ಜೀವರಲ್ಲಿ ಭೇದ, ಜಡ ಜಡಗಳಲ್ಲಿ ಭೇದ' ಹೀಗೆ ಭೇದವು ಪಂಚವಿಧವಾದುದು ಈ ಭೇದವು ಸತ್ಯ ಮತ್ತು ಅನಾದಿ ಭೇದವು ಸಾದಿಯಾಗಿದ್ದರೆ ನಾಶವಾಗುತ್ತಿತ್ತು, ಆದರೆ ಇದು ನಾಶವಾಗುವದಿಲ್ಲ ಈ ಭೇದವು ಭ್ರಾಂತಿಕಲ್ಪಿತವೂ ಅಲ್ಲ ಭ್ರಾಂತಿಕಲ್ಪಿತವಾಗಿದ್ದರೆ ಬಾಧಿತವಾಗುತ್ತಿತ್ತು, ಆದರೆ ಇದು ಬಾಧಿತವಾಗುವದಿಲ್ಲ ದ್ವೈತ ಅಂದರೆ ಭೇದವು ಇಲ್ಲವೆಂದು ಹೇಳುವದು ಅಜ್ಞಾನಿಗಳ ಮತವು ಭೇದವು ಪರಮಾತ್ಮನಿಂದ ಜ್ಞಾತ ಮತ್ತು ರಕ್ಷಿತ (ಮಾಯಾಮಾತ್ರ) ಎಂಬುದು ಜ್ಞಾನಿಗಳ ಮತವು. ಆದುದರಿಂದ ಇದು ಸತ್ಯವಾಗಿದ ಪರಮಾತ್ಮನು ಸರ್ವೋತ್ತಮನು (ಸರ್ವೋತ್ತಮತ್ವದ ದೃಷ್ಟಿಯಿಂದ ಅದ್ವಿತೀಯನು) ಎಂಬು ಪರಮಶ್ರುತಿಯಲ್ಲಿ ಹೇಳಿದೆ

ವಿವರಣೆ—'ವಿಕಲ್ಪೋ ಯದಿ ವಿದ್ಯೇತ' ಇತ್ಯಾದಿಯಾದ ಮುಂದಿನ ಶ್ಲೋಕದಲ್ಲಿ ಭೇದವು ಕಲ್ಪಿತವಲ್ಲ ಎಂದು ಪ್ರತಿಪಾದಿಸಿದ್ದರಿಂದ 'ಪ್ರಪಂಚೋ ಯದಿ ವಿದ್ಯೇತ' ಇತ್ಯಾದಿಯಾದ ಪೂರ್ವಶ್ಲೋಕದಲ್ಲಿ ಭೇದದ ಅನಾದಿತ್ವ ಮತ್ತು ಸತ್ಯತ್ವವನ್ನು ಪ್ರತಿಪಾದಿಸಿದ್ದು ಸ್ಪಷ್ಟವಾಗುತ್ತದೆ ಗುರೂಪದೇಶಾದಿಗಳಿಂದ ಭೇದದ ಸತ್ಯತ್ವವನ್ನೂ ಪರಮಾತ್ಮನ ಸರ್ವೋತ್ತಮತ್ವವನ್ನೂ ತಿಳಿಯದ ಅಜ್ಞಾನಿಗಳು ದ್ವೈತ ಅಂದರೆ ಭೇದವು ಇಲ್ಲವೆಂದು ಹೇಳುವರು ಈ ಶ್ಲೋಕಗಳು ಮಾಂಡೂಕ್ಯೋಪನಿಷತ್ತಿನ ಶ್ಲೋಕಗಳು ಆ ಉಪನಿಷತ್ತಿನ ಭಾಷ್ಯ-ಟೀಕಾ-ಟಿಪ್ಪಣಿಗಳಲ್ಲಿ ಇವುಗಳ ಅರ್ಥ ಇನ್ನೂ ವಿಶದವಾಗಿ ಚರ್ಚಿಸಲ್ಪಟ್ಟಿದೆ

ಇಲ್ಲಿ ಉದಾಹರಿಸಿದ ಪರಮಶ್ರುತಿಯಲ್ಲಿಯೂ ಪಂಚಭೇದಗಳು, ಭೇದದ ಅನಾದಿತ್ವ ಸತ್ಯತ್ವಗಳು ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿವೆ.

**ನೈರಾತ್ಮ್ಯವಾದಿಗಳಿಂದ ವಂಚಿತರಾಗಬಾರದು.**

**73. ಮೈತ್ರೇಯೀಶಾಖಾಯಾಂ ಚ 'ಅಥ ಜ್ಞಾನೋಪಸರ್ಗಾಃ' ಇತ್ಯುಕ್ತ್ವಾ 'ಅಥ ಯೇಚ ಅನ್ಯೇ ಮಿಥ್ಯಾ ತರ್ಕೈಃ ದೃಷ್ಟಾಂತೈಃ ಕುಹಕೇಂದ್ರಜಾಲೈಃ ವೈದಿಕೇಷು ಪರಿಸ್ಥಾತುಮಿಚ್ಛಂತಿ ತೈಃ ಸಹ ನ ಸಂವಸೇತ್ ಪ್ರಾಕಾಶ್ಯಾ ಹಿ ಏತೇ ತಸ್ಕರಾಃ ಅಸ್ವರ್ಗ್ಯಾ' ಇತ್ಯಾಹ**

**ನೈರಾತ್ಮ್ಯವಾದಕುಹಕೈಃ ಮಿಥ್ಯಾದೃಷ್ಟಾಂತಹೇತುಭಿಃ ।**
**ಭ್ರಾಮ್ಯನ್ ಲೋಕೋ ನ ಜಾನಾತಿ ವೇದವಿದ್ಯಾಂತರಂ ತು ಯತ್ ॥ ಇತಿ**
**ಆತ್ಮಸಂಬಂಧಿ ಕಿಮಪಿ ನಾಸ್ತೀತಿ ವಾದಃ ನೈರಾತ್ಮ್ಯವಾದಃ ।**

**ಅನುವಾದ**—ಮೈತ್ರೇಯೀ ಶಾಖೆಯಲ್ಲಿ 'ಇನ್ನು ಸಮ್ಯಗ್ ಜ್ಞಾನಕ್ಕೆ ವಿಘ್ನಗಳು' (ಯಾವವು ಎಂಬುದನ್ನು ಹೇಳುವೆವು) ಎಂದು ಹೇಳಿ, 'ಇನ್ನು (ಕಾಪಾಲಿಕಾದಿಗಳಲ್ಲದೆ

ಬೇರೆ) ಕೆಲವರು ವಂಚನಾತ್ಮಕವಾದ ದೃಷ್ಟಾಂತಗಳಿಂದಲೂ ಜಗನ್ಮಿಥ್ಯಾತ್ವ ಸಾಧಕಹೇತು ಗಳಿಂದಲೂ (ತಮ್ಮ ವಾದವನ್ನು ಮಂಡಿಸುತ್ತ) ವೈದಿಕರ ಗುಂಪಿನಲ್ಲಿಯೇ ಇರಲು ಇಚ್ಛಿಸು ವರು. ಅವರೊಡನೆ ಇರಬಾರದು 'ಅವರು ಬೆಳಕಿನಲ್ಲಿಯೇ ಓಡಾಡುವ ಕಳ್ಳರು ದುಃಖದಾಯಕರು 'ನೈರಾತ್ಮ್ಯವಾದವನ್ನು ಪ್ರತಿಪಾದಿಸುವ ಮತ್ತು ಮಿಥ್ಯಾತ್ವ ಸಾಧಕವಾದ ಹೇತುಗಳಿಂದಲೂ ವಂಚನಾತ್ಮಕವಾದ ದೃಷ್ಟಾಂತಗಳಿಂದಲೂ ಭ್ರಮೆಗೆ ಒಳಗಾದವರು ವೇದವಿದ್ಯೆಯ ಅಭಿಪ್ರಾಯವನ್ನು ತಿಳಿಯಲಾರರು' ಎಂದು ಹೇಳಿದೆ. ಆತ್ಮಸಂಬಂಧಿಯಾದುದು ಯಾವುದೂ ಇಲ್ಲ ಎಂದು ಹೇಳುವದು ನೈರಾತ್ಮ್ಯವಾದವು

**ವಿವರಣೆ**—ಹಿಂದೆ 'ಅಜ್ಞಾತೇ ದ್ವೈತಂ ನ ವಿದ್ಯತೇ' ಎಂಬ ಶ್ರುತಿಯನ್ನು ಉದಾಹರಿಸಿ ಅಜ್ಞಾನಿಗಳಿಗೆ ಭೇದಪಂಚಕರೂಪವಾದ ದ್ವೈತದ ಅರಿವಾಗುವದಿಲ್ಲ ಎಂದು ಹೇಳಿದರು. ಈಗ ಈ ಅಜ್ಞಾನಿಗಳು ಮಿಥ್ಯಾತರ್ಕದಿಂದ ತಮ್ಮ ಮೊಂಡುವಾದವನ್ನೇ ಮಂಡಿಸುವರು ಅವರ ಸಹವಾಸ ಮಾಡಬಾರದು ಎಂಬುದಕ್ಕೆ ಮೈತ್ರೇಯೀಶಾಖೆಯ ವಚನವನ್ನು ಉಲ್ಲೇಖಿಸುವರು ಇಲ್ಲಿ ನಿಂದಿಸಿದ ನೈರಾತ್ಮ್ಯವಾದಿಗಳು ಬೌದ್ಧರಲ್ಲ ಇವರು ಮಾಯಾವಾದಿಗಳು ಯಾಕೆಂದರೆ ಇವರನ್ನು ಕುರಿತು 'ವೈದಿಕೇಷು ಪರಿಸ್ಥಾತು- ಮಿಚ್ಛಂತಿ' ಎಂದು ಹೇಳಿದೆ ಜ್ಞಾನೋಪಸರ್ಗ ಅಂದರೆ ಸಮ್ಯಗ್ ಜ್ಞಾನಕ್ಕೆ ಬರುವ ವಿಘ್ನಗಳು ಮಿಥ್ಯಾತರ್ಕ ಅಂದರೆ ಮಿಥ್ಯಾತ್ವಸಾಧಕ ದೃಶ್ಯತ್ವಾದಿ ಹೇತುಗಳು ಕುಹಕೇಂದ್ರ ಜಾಲೈಃ ಎಂಬುದು ದೃಷ್ಟಾಂತೈಃ ಎಂಬುದಕ್ಕೆ ವಿಶೇಷಣ, ವಂಚನಾತ್ಮಕವಾದ ದೃಷ್ಟಾಂತಗಳು ಎಂದು ಅರ್ಥ.

**ಸದೃಶವಾದ ಎರಡು ಸತ್ಯವಸ್ತುಗಳಿಲ್ಲದೆ ಭ್ರಮವು ಬರಲಾರದು.**

**74. ಭ್ರಾಂತಿಕಲ್ಪಿತತ್ವೇ ಚ ಜಗತಃ ಸತ್ಯಂ ಜಗದ್ದ್ವಯಮಪೇಕ್ಷಿತಮ್ । ನ ಹಿ ಸತ್ಯಶುಕ್ತೇಃ, ಸತ್ಯರಜತಸ್ಯ, ತಯೋಃ ಸಾದೃಶ್ಯಸ್ಯ ಚ ಅಭಾವೇ ಭ್ರಾಂತಿರ್ಭವತಿ ।**

**ಸ್ವಪ್ನೇಽಪಿ ವಾಸನಾರೂಪಂ ಸತ್ಯಮೇವ ಜಗತ್ ಮನಸಿ ಸ್ಥಿತಂ ಬಹಿಷ್ಠತ್ವೇನ ದೃಶ್ಯತೇ । ದೇಹಾತ್ಮನೋರಪಿ ಏಕದೇಶಸ್ಥತ್ವಾದಿ ಸಾದೃಶ್ಯಮಸ್ತ್ಯೇವ । 'ಶಂಖಃ ಪೀತಃ' 'ನಭೋ ನೀಲಮ್' ಇತ್ಯಾದಿಷ್ವಪಿ ಪೀತಾದಯೋ ಅನ್ಯತ್ರ ವಿದ್ಯಂತ ಏವ । ತತ್ಸಾದೃಶ್ಯಂ ಚ ದ್ರವತ್ವಾದಿಕಂ ಕಿಂಚಿತ್ ಶಂಖಾದೀನಾಂ ಚ ಅಸ್ತ್ಯೇವ । ಅತೋ ನ ಕುತ್ರಾಪಿ ಸದೃಶಸತ್ಯವಸ್ತುದ್ವಯಂ ವಿನಾ ಭ್ರಮಃ ।**

**ಅನುವಾದ**—ಜಗತ್ತು ಭ್ರಾಂತಿಕಲ್ಪಿತ ಎಂದು ಹೇಳಿದರೆ ಸತ್ಯವಾದ ಬೇರೆ ಎರಡು ಜಗತ್ತುಗಳು ಇವೆ ಎಂದು ಹೇಳಬೇಕಾಗುವದು ಸತ್ಯವಾದ ಶುಕ್ತಿ ಸತ್ಯವಾದ ರಜತ ಮತ್ತು ಅವುಗಳ ಸಾದೃಶ್ಯ ಇವು ಮೂರೂ ಇಲ್ಲದೆ ಶುಕ್ತಿ ರಜತದ ಭ್ರಮವುಂಟಾಗ ಲಾರದು. (ಇದರಂತೆಯೇ ಜಗತ್ತು ಆರೋಪಿತ ಎಂದು ಹೇಳಬೇಕಾದರೆ ಅಧಿಷ್ಠಾನವಾಗಿ

ಒಂದು ಜಗತ್ತು, ಪ್ರಧಾನ ಅಂದರೆ ಸದೃಶವಾದ ವಸ್ತುವಾಗಿ ಇನ್ನೊಂದು ಜಗತ್ತು ಹೀಗೆ ಎರಡು ಸತ್ಯವಾದ ಜಗತ್ತುಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ ಎಂದು ಅಭಿಪ್ರಾಯವು )

ಸ್ವಪ್ನದಲ್ಲಿಯೂ ಕೂಡ ವಾಸನಾರೂಪವಾದ ಸತ್ಯವಾದ ಗಜತುರಗಾದಿಗಳು ಮನಸ್ಸಿನಲ್ಲಿ ಉಂಟಾದವು ಹೊರಗಿದ್ದವುಗಳಂತೆ ತೋರುತ್ತವೆ (ಆದ್ದರಿಂದ ಸ್ವಾಪ್ನಪದಾರ್ಥಗಳು ಭ್ರಾಂತಿ ಕಲ್ಪಿತವಲ್ಲ)

ದೇಹ ಮತ್ತು ಆತ್ಮಗಳಿಗೆ ಐಕ್ಯ ವ್ಯವಹಾರವು ಏಕದೇಶಸ್ಥಿತಸ್ವರೂಪ ಸಾದೃಶ್ಯದಿಂದ ಆಗುವದು (ಭ್ರಮರೂಪದಿಂದ ಆಗುವದಿಲ್ಲ).

'ಶಂಖವು ಹಳದಿಯಾಗಿದೆ' 'ಆಕಾಶವು ನೀಲಿಯಾಗಿದೆ' ಎಂಬ ಭ್ರಮಗಳಲ್ಲಿಯೂ ಹಳದಿ ಮತ್ತು ನೀಲಿಗಳು ಬೇರೆ ಕಡೆಗೆ ಸತ್ಯವಾಗಿವೆ ಈ ಭ್ರಮಗಳಲ್ಲಿ ಶಂಖಾದಿಗಳಿಗೆ ದ್ರವ್ಯತ್ವಾದಿ ಕಿಂಚಿತ್-ಸಾದೃಶ್ಯವು ಇದೆ ಆದ್ದರಿಂದ ಸದೃಶವಾದ ಎರಡು ಸತ್ಯವಸ್ತುಗಳಿಲ್ಲದೆ (ಅಧಿಷ್ಠಾನಪ್ರಧಾನಗಳಾಗಿ ಎರಡು ಸತ್ಯವಸ್ತುಗಳಿಲ್ಲದೆ) ಭ್ರಮವು ಉಂಟಾಗಲಾರದು.

**ವಿವರಣೆ**—ಏಕಜೀವಾಜ್ಞಾನದ ನಿರಾಕರಣೆಯ ಈ ಪ್ರಸ್ತಾಪದಲ್ಲಿ ಈವರೆಗೆ ಕಲ್ಪಿತನಾದ ಜೀವನ ವಿಷಯದಲ್ಲಿ ದೋಷಗಳನ್ನು ಹೇಳಿದರು ಈಗ ಜಗತ್ತು ಕಲ್ಪಿತ ಎಂಬುದರ ವಿಷಯದಲ್ಲಿ ದೋಷಗಳನ್ನು ಹೇಳುವರು ಜಗತ್ತು ಭ್ರಾಂತಿ ಕಲ್ಪಿತ ಎಂದು ಹೇಳುವದಾದರೆ ಅದನ್ನು ಸಮರ್ಥಿಸಲು ಸತ್ಯವಾದ ಬೇರೆ ಎರಡು ಜಗತ್ತುಗಳನ್ನು ಒಪ್ಪಬೇಕಾಗುತ್ತದೆ. ಯಾಕಂದರೆ ಭ್ರಾಂತಿ ಬರಬೇಕಾದರೆ ಅಧಿಷ್ಠಾನ ಮತ್ತು ಪ್ರಧಾನಗಳಾಗಿ ಎರಡು ಸತ್ಯವಸ್ತುಗಳಿರಬೇಕಾಗುತ್ತದೆ ಮತ್ತು ಅವುಗಳಿಗೆ ಸಾದೃಶ್ಯವಿರಬೇಕಾಗುತ್ತದೆ. ಉದಾಹರಣೆಗೆ ಶುಕ್ತಿರಜತ ಭ್ರಮಬರಬೇಕಾದರೆ ಅಧಿಷ್ಠಾನವಾದ ಶುಕ್ತಿ ಸತ್ಯವಾಗಿರಬೇಕಾಗುತ್ತದೆ ಪ್ರಧಾನ ಅಂದರೆ ಈ ಹಿಂದೆ ಎಲ್ಲಿಯಾದರೊಮ್ಮೆ ನೋಡಿದ ರಜತ ಸತ್ಯವಾಗಿರಬೇಕಾಗುತ್ತದೆ. ಈ ಎರಡಕ್ಕೂ ಸಾದೃಶ್ಯವಿರಬೇಕಾಗುತ್ತದೆ ಅಂದರೇ ಶುಕ್ತಿರಜತಭ್ರಮ ಬರುವುದು. ಇಲ್ಲವಾದರೆ ಇಲ್ಲ ಇದರಂತೆಯೇ ಜಗತ್ತಿನ ಭ್ರಮ ಬರಬೇಕಾದರೆ ಅದಕ್ಕೆ ಅಧಿಷ್ಠಾನವಾಗಿ ಶುಕ್ತಿಯ ಸ್ಥಾನದಲ್ಲಿ ಒಂದು ಜಗತ್ತು ಮತ್ತು ಪ್ರಧಾನವಾಗಿ ರಜತದ ಸ್ಥಾನದಲ್ಲಿ ಒಂದು ಜಗತ್ತು ಹೀಗೆ ಎರಡು ಸತ್ಯವಾದ ಜಗತ್ತುಗಳು ಬೇಕಾಗುತ್ತವೆ ಇವೆರಡನ್ನು ಅಂಗೀಕರಿಸುವದಕ್ಕಿಂತ ಇರುವ ಒಂದು ಜಗತ್ತನ್ನೇ ಭ್ರಾಂತಿಕಲ್ಪಿತವೆಂದು ಹೇಳದೆ ಸತ್ಯವೆಂದು ಅಂಗೀಕರಿಸುವದು ಸುಲಭವಾದ ಮಾರ್ಗವು ಆದ್ದರಿಂದ ಜಗತ್ತು ಭ್ರಾಂತಿಕಲ್ಪಿತವೆಂಬ ವಾದವು ಸರಿಯಲ್ಲ.

ಇನ್ನು ಸ್ವಪ್ನದಲ್ಲಿ ಪದಾರ್ಥಗಳು ಭ್ರಾಂತಿಯಿಂದ ತೋರುವವು. ಅಲ್ಲಿ ಅವಕ್ಕೆ ಅಧಿಷ್ಠಾನವು ಯಾವುದೂ ಇಲ್ಲ. ಆದ್ದರಿಂದ ಶುಕ್ತಿರಜತ ಭ್ರಮದಲ್ಲಿ ಅಧಿಷ್ಠಾನವಿದ್ದರೂ ಎಲ್ಲ ಭ್ರಮಗಳಲ್ಲಿಯೂ ಅಧಿಷ್ಠಾನವಿರಬೇಕೆಂಬ ನಿಯಮವಿಲ್ಲ ಎಂದು ವಾದಿಸುವದು ಸರಿಯಲ್ಲ. ಯಾಕಂದರೆ ಸ್ವಪ್ನಪದಾರ್ಥಗಳು ಸತ್ಯವೇ ಆಗಿವೆ ಅವು ಭ್ರಾಂತಿಕಲ್ಪಿತವಲ್ಲ. ಅವುಗಳಿಗೆ ವಾಸನೆಯೇ ಉಪಾದಾನಕರಣ, ಈಶ್ವರ ಅದೃಷ್ಟಾದಿಗಳು ನಿಮಿತ್ತಕಾರಣ

ಆದ್ದರಿಂದ ಸ್ವಪ್ನ ಪದಾರ್ಥಗಳು ಸತ್ಯ ಆದರೆ ಅವು ಬಾಹ್ಯವಸ್ತುಗಳಂತೆ ತೋರುವದು ಭ್ರಮ. ಈ ಬಾಹ್ಯತ್ವದ ಆರೋಪಕ್ಕೆ ಅಧಿಷ್ಠಾನಾದಿಗಳು ಇದ್ದೇ ಇವೆ

ಇನ್ನು ದೇಹಾತ್ಮೈಕ್ಯ ಭ್ರಮದಲ್ಲಿ ಪರಸ್ಪರ ಸಾದೃಶ್ಯವಿಲ್ಲ ಎನ್ನುವದೂ ಸರಿಯಲ್ಲ ನಿಜವಾಗಿ ನೋಡಿದರೆ ದೇಹಾತ್ಮಗಳ ಪರಸ್ಪರ ಆರೋಪರೂಪವಾದ ಭ್ರಮವಿಲ್ಲ ಅವೆರಡೂ ಒಂದೇ ಸ್ಥಳದಲ್ಲಿ ಇರುವದರಿಂದ ತಂತು ಪಟಗಳು ಭಿನ್ನವಾಗಿದ್ದರೂ ಒಂದೇ ಸ್ಥಳದಲ್ಲಿ ಇರುವವೆಂಬ ಕಿಂಚಿತ್ ಸಾದೃಶ್ಯದಿಂದ ಭೇದ ತಿಳಿದರೂ ಐಕ್ಯ ವ್ಯವಹಾರವಿರುವಂತೆ ದೇಹಾತ್ಮವಿಷಯದಲ್ಲಿಯೂ ಭೇದ ಗೊತ್ತಿದ್ದರೂ ಐಕ್ಯ ವ್ಯವಹಾರವಿರುವದು. ಆದ್ದರಿಂದ ಇದೂ ಭ್ರಮದ ದೃಷ್ಟಾಂತವಲ್ಲ.

'ಶಂಖವು ಹಳದಿಯಾಗಿದೆ', 'ಆಕಾಶವು ನೀಲಿಯಾಗಿದೆ' ಎಂಬ ಭ್ರಮೆಗಳಲ್ಲಿ ಹಳದಿ, ನೀಲಿ ಬಣ್ಣಗಳು ಬೇರೆ ವಸ್ತುಗಳಲ್ಲಿವೆ ಕಣ್ಣಿನಲ್ಲಿ ಪಿತ್ತದಿಂದ ಉಂಟಾದ ಹಳದಿ ಬಣ್ಣದಿಂದಾಗಿ ಶಂಖವು ಹಳದಿಯಾಗಿ ತೋರುತ್ತದೆ ಕಣ್ಣುಗುಡ್ಡೆಯಲ್ಲಿರುವ ಕಾರ್ಷ್ಣ್ಯ ದಿಂದಾಗಿ ಆಕಾಶವು ನೀಲಿಯಾಗಿ ತೋರುತ್ತದೆ ಹೀಗೆ ಇವಕ್ಕೆಲ್ಲ ಕಾರಣಗಳಿದ್ದು ಇವೆಲ್ಲ ಸೋಪಾಧಿಕಭ್ರಮಗಳಾಗಿವೆ ಸೋಪಾಧಿಕಭ್ರಮದಲ್ಲಿ ಪ್ರಧಾನಕ್ಕೂ ಅಧಿಷ್ಠಾನಕ್ಕೂ ಕಿಂಚಿತ್ ಸಾದೃಶ್ಯವಿದ್ದರೆ ಸಾಕು ನೀರಿನಲ್ಲಿ ಬಡಿಗೆಯನ್ನು ಇಟ್ಟಾಗ ಅದು ಮಣಿದಂತೆ ಕಾಣುವದು ಸೋಪಾಧಿಕಭ್ರಮವು ಇಲ್ಲಿ ಕೊಟ್ಟ ಭ್ರಮದ ನಿದರ್ಶನಗಳಲ್ಲಿ ಸ್ವಪ್ನವು ಭ್ರಮ ಮತ್ತು ಅಭ್ರಮ ಇವೆರಡರ ಸಂಕರದ ನಿದರ್ಶನವಾಗಿದೆ ಅಂದರೆ ಸ್ವಾಪ್ನಪದಾರ್ಥ ಗಳು ಭ್ರಮವಲ್ಲ, ಆದರೆ ಅವು ಬಾಹ್ಯಪದಾರ್ಥಗಳೆಂಬಂತೆ ತೋರುವದು ಭ್ರಮವು ದೇಹಾತ್ಮೈಕ್ಯ ವ್ಯವಹಾರವು ಏಕದೇಶಸ್ಥಿತಿಮೂಲಕವಾಗಿದ್ದು ಭ್ರಮವೇ ಅಲ್ಲ. ಭೇದ ಜ್ಞಾನವಿದ್ದೂ ಈ ವ್ಯವಹಾರವನ್ನು ಮಾಡುವರು ಪೀತಶಂಖಾದಿಭ್ರಮಗಳು ಸೋಪಾಧಿಕ ಭ್ರಮಗಳು ಶುಕ್ತಿರಜತಾದಿಭ್ರಮಗಳು ನಿರುಪಾಧಿಕಭ್ರಮಗಳು ಭ್ರಮವು ಎಂಥದೇ ಇದ್ದರೂ ಅಧಿಷ್ಠಾನ, ಪ್ರಧಾನ ಮತ್ತು ಸಾದೃಶ್ಯ ಈ ಮೂರೂ ಬೇಕೇ ಬೇಕು. ಆದ್ದರಿಂದ ಜಗತ್ತು ಭ್ರಾಂತಿಕಲ್ಪಿತವೆಂದು ಹೇಳಬೇಕಾದರೆ ಎರಡು ಬೇರೆ ಸತ್ಯ ಜಗತ್ತುಗಳನ್ನು ಒಪ್ಪಲೇಬೇಕಾಗುವದು ಇದು ಪಿಣ್ಯಾಕವನ್ನು ಕೇಳಲು ಬಂದ ಪಿಶಾಚಿಗೆ ಖಾರೀತೈಲವನ್ನು ಕೊಟ್ಟಂತೆ. ಆದ್ದರಿಂದ ಅಯುಕ್ತವಾಗಿದೆ

**ಆತ್ಮನೇ ಜಗತ್ತಿನ ಆರೋಪಕ್ಕೆ ಅಧಿಷ್ಠಾನನಾಗಲಾರನು.**

**75. ನ ಚ ಆತ್ಮನಿ ಅನಾತ್ಮಭ್ರಮಃ ಕ್ವಾಪಿ ದೃಷ್ಟಃ । ನ ಹಿ ಕಶ್ಚಿದ್ 'ಅಹಂ ಅಹಂ ನ ಭವಾಮಿ' ಇತಿ ಭ್ರಾಂತೋ ದೃಶ್ಯತೇ । ಆತ್ಮನಿ ಅನಾತ್ಮಭ್ರಮ ಏವಾಯಂ ಪ್ರಪಂಚ ಇತಿ ತ್ವೈರುಚ್ಯತೇ । ತಂ ವಿನೈವ ಅನಾತ್ಮನಿ ಆತ್ಮ-ಭ್ರಮಕಲ್ಪನೇ ಅನಾತ್ಮನಃ ಸತ್ಯತ್ವಂ ಸ್ಯಾತ್ । ತದಾ ಚ ಅದ್ವಿತೀಯತ್ವಕಲ್ಪನೇ ಅನಾತ್ಮೈವ ಅಸ್ತಿ ನ ಆತ್ಮೇತಿ ಭವತಿ.**

ಆತ್ಮಾಜ್ಞಾನಾತ್ಮಕತ್ವೇ ಚ ಜಗತಃ ಆತ್ಮನೋ ಭಿನ್ನತ್ವೇನ ನ ದೃಶ್ಯೇತ । ನ ಹಿ ಶುಕ್ತೇಃ ಭೇದೇನ ರಜತಂ ದೃಶ್ಯತೇ ಭ್ರಾಂತೌ । ನ ಚ ಏಕಮೇವ ಯುಗಪದ್ ಬಹುಧಾ ದೃಶ್ಯತೇ ಭ್ರಾಂತೌ । ನ ಚ ಆತ್ಮನಿ ಭೇದಭ್ರಮಃ ಕ್ವಾಪಿ ದೃಷ್ಟಃ ।

ನ ಚ ಕುತ್ರಾಪಿ ಮಿಥ್ಯೋಪಾಧಿಕೃತೋ ಭೇದೋ ದೃಷ್ಟಃ । ನ ಚ ಜ್ಞಾನಾಜ್ಞಾನಯೋರಪಿ ಮಿಥ್ಯಾಕಲ್ಪಿತತ್ವಂ ದೃಷ್ಟಮ್ । ತದ್ವಿಷಯಸ್ಯೈವ ಅನ್ಯಥಾತ್ವಂ ಭ್ರಾಂತೌ । ಏವಮಾದ್ಯನಂತಯುಕ್ತಿವಿರುದ್ಧೋಽಯಂ ಪಕ್ಷಃ । ಗ್ರಂಥಬಹುತ್ವಂ ಸ್ಯಾದಿತ್ಯೇವೋಪರಮ್ಯತೇ ॥

ಅನುವಾದ—(ಜಗತ್ತು ಭ್ರಾಂತಿಕಲ್ಪಿತವೆಂದು ಹೇಳಬೇಕಾದರೆ ಅಧಿಷ್ಠಾನ ಮತ್ತು ಪ್ರಧಾನಗಳಾಗಿ ಇನ್ನೆರಡು ಸತ್ಯಜಗತ್ತುಗಳನ್ನು ಒಪ್ಪಬೇಕಾಗುತ್ತದೆ ಯಾಕಂದರೆ ಅಧಿಷ್ಠಾನ ಮತ್ತು ಪ್ರಧಾನಗಳಿಲ್ಲದೆ ಭ್ರಮೆ ಬರುವದಿಲ್ಲ ಎಂದು ಹಿಂದೆ ಹೇಳಿದರು ಇದಕ್ಕೆ ಅದ್ವೈತಿಯು ಆತ್ಮನೇ ಅಧಿಷ್ಠಾನ, ಪೂರ್ವ-ಪೂರ್ವಕಲ್ಪದ ಆರೋಪಿತ ಜಗತ್ತೇ ಉತ್ತರೋತ್ತರ ಕಲ್ಪದ ಜಗತ್ತಿನ ಆರೋಪಕ್ಕೆ ಪ್ರಧಾನ ಎಂಬ ಉತ್ತರವನ್ನು ಹೇಳಲು ಬರುವದಿಲ್ಲ ಎಂದು ಈಗ ವಿವರಿಸುವರು) ಆತ್ಮದಲ್ಲಿಯೇ ಅನಾತ್ಮದ ಅಂದರೆ ಜಗತ್ತಿನ ಆರೋಪರೂಪಭ್ರಮ ಬರುವದು ಎಂಬುದು ಸರಿಯಲ್ಲ ಯಾಕಂದರೆ ಇದು (ಹೀಗೆ ಪರಸ್ಪರ ವಿರುದ್ಧವಾದವುಗಳ ಆರೋಪವು) ಎಲ್ಲಿಯೂ ಕಂಡುಬಂದಿಲ್ಲ ನಾನು ನಾನಲ್ಲ ಎಂದು ಯಾರೂ ಭ್ರಾಂತರಾದದ್ದು ಕಂಡುಬಂದಿಲ್ಲ (ನಾನು ಎಂದು ಪ್ರತ್ಯಗಾತ್ಮನು ಅಧಿಷ್ಠಾನವಾಗಿ ನಾನಲ್ಲ ಎಂದು ಅದಕ್ಕೆ ವಿರುದ್ಧವಾದ ಪ್ರಪಂಚವು ಆರೋಪಿತವಾಗಿರುವಂಥ ಭ್ರಮವು ಬರುವದು ಕಂಡುಬರುವದಿಲ್ಲ) ಆದರೆ ಅದ್ವೈತಿಗಳು ಈ ಜಗತ್ತು ಆತ್ಮನಲ್ಲಿ ಅನಾತ್ಮಭ್ರಮರೂಪವಾದುದು ಎಂದು ಹೇಳುವರು (ಇದು ಸರಿಯಲ್ಲ) ಹೀಗೆ ಆತ್ಮನಲ್ಲಿ ಅನಾತ್ಮದ ಭ್ರಮವಿಲ್ಲದ್ದರಿಂದ ಅನಾತ್ಮದಲ್ಲಿ ಆತ್ಮಭ್ರಮವನ್ನು ಕಲ್ಪಿಸಿದರೆ ಆ ಅನಾತ್ಮವೇ (ಅಧಿಷ್ಠಾನವಾದದ್ದರಿಂದ) ಸತ್ಯವಾಗಬೇಕಾಗುವದು (ಇದರಿಂದ ಅದ್ವೈತಿಗಳ ಜಗನ್ಮಿಥ್ಯಾತ್ವ ಸಿದ್ಧಾಂತಕ್ಕೆ ಚ್ಯುತಿ ಬರುವದು) ಸತ್ಯವಾದ ಈ ಅನಾತ್ಮವೇ ಅದ್ವಿತೀಯವೆಂದು ಕಲ್ಪಿಸಿದರೆ ಅನಾತ್ಮವೇ ಇದೆ, ಆತ್ಮವೇ ಇಲ್ಲ ಎಂಬ ಪ್ರಸಂಗ ಬರುವದು (ಜಡವೇ ಸತ್ಯ, ಅದ್ವಿತೀಯ ಎಂದು ಹೇಳುವದು ಅಪಸಿದ್ಧಾಂತವಾಗುವದು)

ಜಗತ್ತು ಆತ್ಮನನ್ನು ಆವರಿಸಿದ ಅಜ್ಞಾನ ಮೂಲಕವಾಗಿದ್ದರೆ (ಅಂದರೆ ಆತ್ಮವು ಅಧಿಷ್ಠಾನವಾಗಿ ಜಗತ್ತು ಆರೋಪಿತವಾಗಿದ್ದರೆ) ಆತ್ಮಕ್ಕಿಂತ ಭಿನ್ನವಾಗಿ ತೋರುತ್ತಿದ್ದಿಲ್ಲ. ಶುಕ್ತಿರಜತಭ್ರಾಂತಿಯಲ್ಲಿ ಆರೋಪಿತವಾದ ರಜತವು ಅಧಿಷ್ಠಾನವಾದ ಶುಕ್ತಿಗಿಂತ ಭಿನ್ನವಾಗಿ ತೋರುವದಿಲ್ಲ ಅಲ್ಲದೆ, ಭ್ರಾಂತಿಯಲ್ಲಿ ಒಂದೇ ಅಧಿಷ್ಠಾನವು ಏಕಕಾಲದಲ್ಲಿ ಅನೇಕ ಆರೋಪಿತವಸ್ತುಗಳಾಗಿ ತೋರುವದಿಲ್ಲ. (ಶುಕ್ತಿಯು ರಜತಮಾತ್ರವಾಗಿ ತೋರುವದು. ನಾನಾವಸ್ತುಗಳಾಗಿ ತೋರುವದಿಲ್ಲ. ಆದರೆ ಜಗತ್ತು ನಾನಾವಸ್ತುರೂಪವಾಗಿರುವದು. ಆದ್ದರಿಂದ ಒಂದೇ ಆತ್ಮದ ಮೇಲೆ ಆರೋಪಿತವಾಗಿರಲಾರದು ) (ಇನ್ನು ಜಗತ್ತಿನಲ್ಲಿಯ

ನಾನಾವಸ್ತುರೂಪವಾದ ಈ ಭೇದವೂ ಭ್ರಮ ಎಂದು ಹೇಳಲು ಬರುವದಿಲ್ಲ. ಯಾಕಂದರೆ) ಆತ್ಮನಲ್ಲಿ (ನಾನು ಭೇದ ಅಥವಾ ನಾನು ಭಿನ್ನ ಎಂಬ) ಭೇದಭ್ರಮ ಬರುವದು ಎಲ್ಲಿಯೂ ಕಂಡುಬಂದಿಲ್ಲ (ಉಪಾಧಿಮೂಲಕವಾಗಿ ಆತ್ಮಸ್ವರೂಪದಲ್ಲಿ ಭೇದಗಳಿರುವದರಿಂದ ಅದು ನಾನಾವಸ್ತುಗಳುಳ್ಳ ಜಗತ್ತಿನ ಆರೋಪಕ್ಕೆ ಅಧಿಷ್ಠಾನವಾಗುತ್ತದೆ ಎಂದು ಹೇಳುವದೂ ಸರಿಯಲ್ಲ ಯಾಕಂದರೆ) ಮಿಥ್ಯಾಭೂತವಾದ ಉಪಾಧಿಗಳಿಂದ ಭೇದವುಂಟಾಗುವದು ಎಲ್ಲಿಯೂ ಕಂಡುಬರುವದಿಲ್ಲ

ಅಲ್ಲದೆ ಅಧಿಷ್ಠಾನವಾದ ಆತ್ಮನನ್ನು ಆವರಿಸಿದ ಅಜ್ಞಾನ ಮತ್ತು ಆರೋಪಿತವಾದ ಜಗತ್ತಿನ ಜ್ಞಾನ ಈ ಜ್ಞಾನ ಮತ್ತು ಅಜ್ಞಾನಗಳು ಮಿಥ್ಯಾಭೂತವಲ್ಲ ಭ್ರಮದಲ್ಲಿ ಆರೋಪಿತವಾದ ವಿಷಯವು ಮಿಥ್ಯಾಭೂತವಾಗಿರುವದೇ ಹೊರತು ಅದರ ಜ್ಞಾನ ಮಿಥ್ಯಾಭೂತವಾಗಿರುವದಿಲ್ಲ

ಹೀಗೆ ಜಗತ್ತು ಏಕಜೀವಾಜ್ಞಾನಕಲ್ಪಿತವೆಂಬ ಈ ವಾದವು ಅನಂತಯುಕ್ತಿಗಳಿಗೆ ವಿರುದ್ಧವಾಗಿದೆ. ಗ್ರಂಥವು ಬಹು ವಿಸ್ತಾರವಾಗುವದೆಂದು ಅವುಗಳನ್ನೆಲ್ಲ ಇಲ್ಲಿ ಹೇಳುವದಿಲ್ಲ

**ವಿವರಣೆ**—ಒಂದು ವಸ್ತುವಿನ ಭ್ರಾಂತಿಯುಂಟಾಗಲು ಅದಕ್ಕೊಂದು ಅಧಿಷ್ಠಾನವೂ ಪ್ರಧಾನವೂ ಬೇಕು ಉದಾಹರಣೆಗೆ ಶುಕ್ತಿರಜತಭ್ರಮ ಬರಬೇಕಾದರೆ ಅಧಿಷ್ಠಾನವಾಗಿ ಶುಕ್ತಿಯೂ ಪ್ರಧಾನವಾಗಿ ಆಪಣಸ್ಥರಜತವೂ ಬೇಕು ಇವಿಲ್ಲದೆ ಶುಕ್ತಿರಜತಭ್ರಮವು ಬರಲಾರದು ಪ್ರಕೃತ ಜಗತ್ತಿನ ಭ್ರಮ ಬರಬೇಕಾದರೆ ಅಂಥ ಅಧಿಷ್ಠಾನ ಪ್ರಧಾನಗಳು ಇಲ್ಲ ಎಂದು ತೋರಿಸಿದ್ದಕ್ಕೆ ಅದ್ವೈತಿಗಳು ಆತ್ಮವೇ ಅಧಿಷ್ಠಾನ ಪೂರ್ವಪೂರ್ವಕಲ್ಪದ ಆರೋಪಿತ ಜಗತ್ತು ಉತ್ತರೋತ್ತರಕಲ್ಪದಲ್ಲಯ ಜಗತ್ತಿನ ಭ್ರಮಕ್ಕೆ ಪ್ರಧಾನ ಎಂದು ಹೇಳುವರು. ಇದು ಸರಿಯಲ್ಲ ಭ್ರಮವಿಷಯದ ವಸ್ತುವಿಗೆ ಸದೃಶವಾದ ವಸ್ತುವೇ ಅಧಿಷ್ಠಾನವಾಗಬಲ್ಲದು, ಅದಕ್ಕೆ ವಿರುದ್ಧವಾದ ಸ್ವಭಾವದ ವಸ್ತು ಅಧಿಷ್ಠಾನವಾಗಲಾರದು. ಶುಕ್ತಿಯು ಶುಕ್ಲಭಾಸ್ವರರೂಪಗಳಿಂದ ರಜತಕ್ಕೆ ಸದೃಶವಾದುದರಿಂದಲೇ ಅಧಿಷ್ಠಾನವಾಗಿದೆ. ಒಂದು ಕಪ್ಪು ಪದಾರ್ಥದ ಚೂರು ರಜತಭ್ರಮಕ್ಕೆ ಅಧಿಷ್ಠಾನವಾಗಲಾರದು. ಪ್ರಕೃತದಲ್ಲಿ ಆತ್ಮ ಮತ್ತು ಅನಾತ್ಮ ಅಂದರೆ ಜಗತ್ತು ಪರಸ್ಪರ ವಿರುದ್ಧವಾದ ಸ್ವಭಾವದವು. ಆದ್ದರಿಂದ ಅನಾತ್ಮದ ಭ್ರಮಕ್ಕೆ ಆತ್ಮವು ಅಧಿಷ್ಠಾನವಾಗಲಾರದು. ಆತ್ಮ, ಅನಾತ್ಮಗಳ ಪರಸ್ಪರ ಆರೋಪವನ್ನು ಹೇಳುವ ಅದ್ವೈತಿಗಳು ಆತ್ಮಭ್ರಮಕ್ಕೆ ಅನಾತ್ಮವು ಅಧಿಷ್ಠಾನವೆಂದೂ ಹೇಳುವರು. ಭ್ರಮದಲ್ಲಿ ಅಧಿಷ್ಠಾನವು ಸತ್ಯವಾಗಿರುವದು. ಶುಕ್ತಿರಜತಭ್ರಮದಲ್ಲಿ ಶುಕ್ತಿಯು ಸತ್ಯವಾಗಿದೆ ಆದ್ದರಿಂದ ಅನಾತ್ಮವೂ ಅಧಿಷ್ಠಾನವೆಂದು ಹೇಳಿದರೆ ಅದು ಸತ್ಯವೆಂದಾಗದು. ಇದು ಅವರ ಸಿದ್ಧಾಂತಕ್ಕೆ ವಿರುದ್ಧವಾಗಿರುವದು.

ಅಲ್ಲದೆ, ಜಗತ್ತು ಆತ್ಮನನ್ನು ಆವರಿಸಿದ ಅಜ್ಞಾನೋಪಾದಾನಕವಾದುದು ಎಂದು ಅವರು ಹೇಳುವರು ಈ ಪಕ್ಷದಲ್ಲಿ ಜಗತ್ತು ಆತ್ಮದಿಂದ ಭಿನ್ನವಾಗಿ ಅನುಭವ ಬರಬಾರದು. ಶುಕ್ತಿರಜತಭ್ರಮದಲ್ಲಿ ರಜತವು ಶುಕ್ತಿಗಿಂತ ಭಿನ್ನವಾದ ಅನುಭವ ಬರುವದಿಲ್ಲ. ಆದರೆ

ಜಗತ್ತು ಆತ್ಮನಿಗಿಂತ ಭಿನ್ನವಾದ ಅನುಭವವಿರುವದು ಆದ್ದರಿಂದ ಜಗತ್ತು ಭ್ರಮಾತ್ಮಕವಾಗಿ ಆತ್ಮನ ಮೇಲೆ ಆರೋಪಿತವಾದದ್ದಲ್ಲ ಇನ್ನು ಒಂದು ಅಧಿಷ್ಠಾನವನ್ನವಲಂಬಿಸಿ ಬಂದ ಭ್ರಮವು ಒಂದು ಕಾಲದಲ್ಲಿ ಒಂದೇ ವಸ್ತು ವಿಷಯಕವಾಗಿರುವದು ಏಕಕಾಲದಲ್ಲಿ ನಾನಾವಸ್ತುವಿಷಯಕವಾಗಿರುವದಿಲ್ಲ ಒಂದು ಹಗ್ಗದ ತುಂಡು ಹಾವು, ಮಾಲೆ, ಎತ್ತು ಕಟ್ಟುವ ಹಗ್ಗ ಹೀಗೆ ಭಿನ್ನಭಿನ್ನಕಾಲದಲ್ಲಿ ಅಥವಾ ಭಿನ್ನಭಿನ್ನ ವ್ಯಕ್ತಿಗಳಿಗೆ ಭಿನ್ನಭಿನ್ನವಾಗಿ ಭ್ರಮೆಯನ್ನುಂಟುಮಾಡಬಹುದು ಆದರೆ ಏಕಕಾಲದಲ್ಲಿ ಒಬ್ಬನೇ ವ್ಯಕ್ತಿಗೆ ನಾನಾವಸ್ತುರೂಪಭ್ರಮೆಯನ್ನುಂಟುಮಾಡಲಾರದು ಆದ್ದರಿಂದ ಒಂದು ಆತ್ಮದ ಅಧಿಷ್ಠಾನವನ್ನವಲಂಬಿಸಿ ನಾನಾವಸ್ತುಗಳುಳ್ಳ ಜಗತ್ತಿನ ಭ್ರಮೆಯುಂಟಾಯಿತೆಂದು ಹೇಳುವದು ಸರಿಯಲ್ಲ

ಪೂರ್ವ-ಪೂರ್ವಕಲ್ಪಗಳ ಜಗತ್ತು ಈ ಕಲ್ಪದ ಜಗತ್ತಿನ ಆರೋಪಕ್ಕೆ ಪ್ರಧಾನವಾಗುವದು ಎಂದು ಹೇಳುವದೂ ಸರಿಯಲ್ಲ ಯಾಕೆಂದರೆ ಪೂರ್ವಕಲ್ಪದ ಜಗತ್ತಿನ ಸಂಸ್ಕಾರವು ಈ ಕಲ್ಪದವರ ಮನಸ್ಸಿನಲ್ಲಿ ಉಳಿದಿರುವದಿಲ್ಲ

ಹೀಗೆ ಅನಂತ ದೋಷದುಷ್ಟವಾಗಿರುವದರಿಂದ ಏಕಜೀವಾಜ್ಞಾನವಾದವು ಯುಕ್ತವಲ್ಲ

ಭೇದವು ಮಿಥ್ಯಾ ಎಂದು ಹೇಳುವ ಬಹುಜೀವವಾದಿಗಳ ಪಕ್ಷದಲ್ಲಿಯೂ
ಈ ಎಲ್ಲ ದೋಷಗಳೂ ಬರುವವು.

76. ನ ಚ ಸತ್ಯತ್ವಾಂಗೀಕಾರೇ ಕಶ್ಚಿದ್ ದೋಷಃ । ಬಹುಜೀವವಾದಿಪಕ್ಷೇऽಪಿ ಭೇದಸ್ಯ ಮಿಥ್ಯಾತ್ವಾಂಗೀಕಾರೇ ಏತೇ ದೋಷಾಃ ಭವಂತ್ಯೇವ । ಮಿಥ್ಯೋಪಾಧಿಕೃತಂ ಹಿ ತೇಷಾಮಪಿ ಬಹುತ್ವಮ್ । ನ ಚ ಮಿಥ್ಯೋಪಾಧಿಕೃತೋ ಭೇದಃ ಕ್ವಾಪಿ ದೃಷ್ಟಃ । ಆತ್ಮನಿ ಅನಾತ್ಮಕಲ್ಪನಾರೂಪತ್ವಾತ್ ಮಿಥ್ಯೋಪಾಧಿರೇವ ನ ಯುಜ್ಯತೇ ।

ಮಾಯಾಮಯೀ ಸೃಷ್ಟಿರಪಿ ತತ್ಸದೃಶಸ್ಯ ಅನ್ಯಸ್ಯ ವಿದ್ಯಮಾನತ್ವ ಏವ ದೃಷ್ಟಾ । ದ್ರವ್ಯತ್ವಾದಿಸಾದೃಶ್ಯಯುತಂ ಕಿಂಚಿದಧಿಷ್ಠಾನಮಾಶ್ರಿತ್ಯೈವ ಚ ।

ಅಧಿಷ್ಠಾನಂ ಚ ಸದೃಶಂ ತಥ್ಯವಸ್ತುದ್ವಯಂ ವಿನಾ ।
ನ ಭ್ರಾಂತಿರ್ಭವತಿ ಕ್ವಾಪಿ ಸ್ವಪ್ನಮಾಯಾದಿಕೇಷ್ವಪಿ ॥
ಮಾನಸ್ಯಾಂ ವಾಸನಾಯಾಂ ತು ಬಹಿರ್ವಸ್ತುತ್ವಕಲ್ಪನಮ್ ।
ಸ್ವಾಪ್ನೋ ಭ್ರಮಶ್ಚ ಮಾಯಾಯಾಂ ಕರ್ತೃದೇಹಾದಿವಸ್ತುಷು ॥
ಚತುರಂಗಬಲತ್ವಾದಿಕಲ್ಪನಂ ಭ್ರಮ ಇಷ್ಯತೇ ।
ನ ಭ್ರಾಂತಿಕಲ್ಪಿತಂ ವಿಶ್ವಮತೋ ವಿಷ್ಣುಬಲಾಶ್ರಯಮ್ ॥

ಇತಿ ಬ್ರಹ್ಮವೈವರ್ತೇ ।

**ನ ಚ ಮಾಯಾವಿನಾ ಮಾಯಾ ದೃಶ್ಯತೇ ವಿಶ್ವಮೀಶ್ವರಃ ।**
**ಸದಾ ಪಶ್ಯತಿ ತೇನೇದಂ ನ ಮಾಯೇತ್ಯವಧಾರ್ಯತಾಮ್ ॥** ಇತಿ ಚ ।
**ಅಪರೋಕ್ಷದೃಶೋ ಮಿಥ್ಯಾದರ್ಶನಂ ನ ಕ್ವಚಿದ್ ಭವೇತ್ ।**
**ಸರ್ವಾಪರೋಕ್ಷವದ್ವಿಷ್ಣುಃ ವಿಶ್ವದೃಕ್ ತನ್ನ ತನ್ಮೃಷಾ ॥** ಇತಿ ಚ ।

**ಅನುವಾದ**—ಜಗತ್ತಿನ ಸತ್ಯತ್ವವನ್ನು ಒಪ್ಪಿಕೊಂಡರೆ ಈ ಯಾವ ದೋಷಗಳೂ ಬರುವದಿಲ್ಲ ಬಹುಜೀವವಾದಿಪಕ್ಷದಲ್ಲಿಯೂ ಭೇದವು ಮಿಥ್ಯಾ ಎಂದು ಹೇಳಿದರೆ ಈ ಎಲ್ಲ ದೋಷಗಳೂ ಬರುವವು ಯಾಕಂದರೆ ಅವುಗಳ ಬಹುತ್ವವು ಮಿಥ್ಯಾಭೂತವಾದ ಉಪಾಧಿ ಮೂಲಕವೆಂದು ಹೇಳಲಾಗುತ್ತದೆ ಮಿಥ್ಯಾಭೂತವಾದ ಉಪಾಧಿ ಮೂಲಕವಾದ ಭೇದವು ಎಲ್ಲಿಯೂ ಕಂಡುಬಂದಿಲ್ಲ (ಉಪಾಧಿ ಮೂಲಕವಾದ ಭೇದಗಳೇ ಇಲ್ಲ ಅಂದಮೇಲೆ ಮಿಥ್ಯಾಭೂತವಾದ ಉಪಾಧಿ ಮೂಲಕವಾದ ಭೇದಗಳು ದೂರತಃ ಅಪಾಸ್ತ ಎಂದು ಅಭಿಪ್ರಾಯವು ) ಮಿಥ್ಯಾಭೂತವಾದ ಉಪಾಧಿಯೂ ಆತ್ಮನಲ್ಲಿ ಅನಾತ್ಮ ಕಲ್ಪನಾರೂಪ ವಾದ್ದರಿಂದ ಯುಕ್ತವಾದುದಲ್ಲ (ಆತ್ಮನಲ್ಲಿ ಅನಾತ್ಮದ ಕಲ್ಪನೆಯ ನಿರಾಕರಣೆಯನ್ನು ಈಗಾಗಲೇ ಮಾಡಿದೆ )

(ಇನ್ನು ಐಂದ್ರಜಾಲಿಕನ ಸೃಷ್ಟಿಯಲ್ಲಿ ಅಧಿಷ್ಠಾನ ಪ್ರಧಾನಗಳು ಇಲ್ಲದಂತೆ ಜಗತ್ತಿನ ಭ್ರಮವೂ ಅವು ಇಲ್ಲದ ಆಗುವದು ಎಂಬ ವಾದವೂ ಸರಿಯಲ್ಲ ಯಾಕಂದರೆ) ಐಂದ್ರಜಾಲಿಕನ ಸೃಷ್ಟಿಯಲ್ಲಿಯೂ ಕೂಡ ಐಂದ್ರಜಾಲಿಕ ಭ್ರಮವಿಷಯದ ವಸ್ತುವಿಗೆ ಸದೃಶವಾದ ಸತ್ಯವಸ್ತುವಿದ್ದರೇ ಅಂಥ ಭ್ರಮುಬರುವದು ಇಲ್ಲವಾದರೆ ಇಲ್ಲ ಪ್ರವೃತ್ತ್ಯಾದಿ ಸಾದೃಶ್ಯವಿರುವ ಅಧಿಷ್ಠಾನವೂ ಇರುವದು

ಅಧಿಷ್ಠಾನ ಮತ್ತು ಪ್ರಧಾನ ಎಂಬ ಸತ್ಯವಾದ ಎರಡು ಸದೃಶವಸ್ತುಗಳಿಲ್ಲದೆ ಭ್ರಾಂತಿಯು ಬರುವದೇ ಇಲ್ಲ ಸ್ವಪ್ನ ಮತ್ತು ಐಂದ್ರಜಾಲಿಕ ಸೃಷ್ಟಿಯಲ್ಲಿಯೂ ಈ ಎರಡೂ ಇರುವವು ಮಾನಸವಾದ ವಾಸನಾಮಯವಾದ (ಗಜಾದಿ) ವಸ್ತುಗಳು ಬಾಹ್ಯವಸ್ತುಗಳೆಂದು ಭ್ರಮಿಸುವದು ಸ್ವಾಪ್ನಭ್ರಮವು (ಇಲ್ಲಿ ವಾಸನಾಮಯ ಗಜಾದಿ ಗಳು ಅಧಿಷ್ಠಾನ) ಐಂದ್ರಜಾಲಿಕನ ಶರೀರ (ಮೂಲಿಕೆಗಳು, ಹರಕುಬಟ್ಟೆ) ಇತ್ಯಾದಿ ವಸ್ತು ಗಳಲ್ಲಿ ಚತುರಂಗ ಸೈನ್ಯ (ಹುಲಿ) ಇತ್ಯಾದಿಗಳನ್ನು ಕಲ್ಪಿಸುವದು ಐಂದ್ರಜಾಲಿಕ ಭ್ರಮವು. (ಇಲ್ಲಿಯೂ ಅವನ ಶರೀರ, ಮೂಲಿಕೆ ಇತ್ಯಾದಿ ಅಧಿಷ್ಠಾನಗಳಿವೆ ಹೀಗೆ ಅಧಿಷ್ಠಾನ ಪ್ರಧಾನಾದಿಗಳು ಇಲ್ಲದೇ ಇರುವದರಿಂದ) ಜಗತ್ತು ಭ್ರಾಂತಿಕಲ್ಪಿತವಲ್ಲ. (ಹೀಗೆ ಜಗತ್ತು ಸತ್ಯವಾದರೂ ಸ್ವತಂತ್ರವಲ್ಲ.) ಸತ್ಯವಾದ ಈ ಜಗತ್ತು ವಿಷ್ಣುವಿನ ಬಲವನ್ನು ಆಶ್ರಯಿಸಿ ಕೊಂಡಿರುವದು ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ

ಅಲ್ಲದೆ, ಐಂದ್ರಜಾಲಿಕನಿಗೆ ತನ್ನ ಮಾಯಾ ಸೃಷ್ಟಿಯು (ಗಜಾದಿಗಳು) ಕಾಣುವ ದಿಲ್ಲ. ಆದರೆ ಪರಮಾತ್ಮನು ಈ ಜಗತ್ತನ್ನು ಸದಾ ಕಾಣುವನು. ಆದ್ದರಿಂದ ಇದು ಮಾಯೆಯಲ್ಲ. ಅಧಿಷ್ಠಾನದ ಅಪರೋಕ್ಷಜ್ಞಾನವಿದ್ದವರಿಗೆ ಭ್ರಮವುಂಟಾಗುವದಿಲ್ಲ.

ವಿಶ್ವವನ್ನು ನೋಡುವ ಪರಮಾತ್ಮನು ಅದರ ಅಸಾಧಾರಣ ಧರ್ಮದ ಅಪರೋಕ್ಷಜ್ಞಾನವುಳ್ಳವನಾಗಿದ್ದಾನೆ ಆದ್ದರಿಂದಲೂ ಜಗತ್ತು ಮಿಥ್ಯೆಯಲ್ಲ

**ವಿವರಣೆ**—ಏಕಜೀವಾಜ್ಞಾನವಾದವನ್ನು ನಿರಾಕರಿಸಿ ಅವರ ಕಲ್ಪನೆಯಾದ ಜಗನ್ಮಿಥ್ಯಾತ್ವದ ಕಲ್ಪನೆಗೆ ಅನೇಕ ದೋಷಗಳನ್ನು ಮೇಲೆ ಹೇಳಿರುವರು ಮಿಥ್ಯಾಭೂತವಾಗಿ ಬಹುಜೀವವಾದವನ್ನು ಅಂಗೀಕರಿಸುವವರಿಗೂ ಈ ಎಲ್ಲ ದೋಷಗಳೂ ಬರುವವು ಎಂದು ಇಲ್ಲಿ ತೋರಿಸುವರು ಮಿಥ್ಯಾಭೂತವಾದ ಉಪಾಧಿಮೂಲಕವಾದ ಭೇದವೆಂಬುದೇ ಸಾಧ್ಯವಿಲ್ಲ ಸ್ವಪ್ನಮಾಯಾದಿ ಸ್ಥಳಗಳಲ್ಲಿಯೂ ಅಧಿಷ್ಠಾನ-ಪ್ರಧಾನಗಳು ಇರುವವು ಎಂಬುದನ್ನೂ ಇಲ್ಲಿ ತೋರಿಸಿರುವರು ಪರಮಾತ್ಮನಿಗೆ ಜಗತ್ತಿನ ಪ್ರತ್ಯಕ್ಷಜ್ಞಾನವಿರುವದರಿಂದ ಅದರ ವಿಷಯದಲ್ಲಿ ಭ್ರಮೆಯುಂಟಾಗಲಾರದು ಎಂದು ವಿಶದಪಡಿಸಿರುವರು

**ಬ್ರಹ್ಮನು ಸತ್ಯವಾದ ಉಪಾಧಿಗಳಿಂದ ನಾನಾಜೀವರಾಗುವನು ಎಂಬ ಮತದ ನಿರಾಕರಣೆ.**

77 **ಯದಿ ಚ ಏಕಮೇವ ಬ್ರಹ್ಮ ಉಪಾಧಿಭೇದಾತ್ ಸಂಸರತಿ ಮುಚ್ಯತೇ ಚ ತದಾ ಸಂಸಾರಿಣಾಂ ಸರ್ವದಾ ವಿದ್ಯಮಾನತ್ವಾತ್ ಸರ್ವದಾ ಸಂಸಾರೀ ಏವ ಬ್ರಹ್ಮ ಅತಃ ತದ್ಜ್ಞಾನೇಽಪಿ ನ ಮುಕ್ತಿಃ ಸರ್ವದಾ ಉಪಾಧಿಸಂಬಂಧತ್ವಾತ್ ತಸ್ಯ । ನ ಚ ಶುದ್ಧಸ್ಯ ನ ಉಪಾಧಿಸಂಬಂಧಃ ಇತಿ ವಾಚ್ಯಮ್ । ಉಪಾಧಿಸಂಬಂಧಸ್ಯ ಉಪಾಧಿಸಂಬಂಧಕಲ್ಪನೇ ಅನವಸ್ಥಾಪ್ರಸಂಗಾತ್ । ನ ಚ ತೇನೈವ ಸಂಬಂಧೇನ ಸಂಬದ್ಧಸ್ಯ ಆತ್ಮಾಶ್ರಯಪ್ರಸಂಗಾತ್ ।**

**ಇತಶ್ಚ ಮಿಥ್ಯೋಪಾಧಿಃ ನ ಯುಜ್ಯತೇ । ಅಜ್ಞಾನಸಿದ್ಧೌ ಮಿಥ್ಯೋಪಾಧಿಸಿದ್ಧಿಃ ಅಜ್ಞಾನಂ ವಿನಾ ಮಿಥ್ಯಾತ್ವಾಸಿದ್ಧೇಃ । ನ ಚ ಮಿಥ್ಯೋಪಾಧಿಂ ವಿನಾ ಅಜ್ಞಾನಸಿದ್ಧಿಃ ಮಿಥ್ಯೋಪಾಧಿಭಿನ್ನಸ್ಯೈವ ಅಜ್ಞತ್ವಾತ್ ।**

**ಅನುವಾದ**— (ಒಬ್ಬನೇ ಆದ ಬ್ರಹ್ಮನು ಸತ್ಯವಾದ ಉಪಾಧಿಗಳಿಂದ ನಾನಾ ಜೀವರೂಪ ತಾಳಿ ಸಂಸಾರಿಗಳಾಗುವನು ಮತ್ತು ಈ ಜೀವರು ಮುಕ್ತರಾದಂತೆ ಮೊದಲಿನ ಬ್ರಹ್ಮರೂಪವನ್ನು ತಾಳುವರು ಎಂಬ ಮತವನ್ನು ಈಗ ನಿರಾಕರಿಸುವರು). ಒಬ್ಬನೇ ಬ್ರಹ್ಮನು (ಸತ್ಯವಾದ) ಅನೇಕ ಉಪಾಧಿಗಳ ಸಂಬಂಧದಿಂದ ಅನೇಕ ಜೀವರೂಪಗಳನ್ನು ತಾಳಿ ಸಂಸಾರಿಯಾಗುವನು ಮುಂದೆ (ನಿವೃತ್ತಕರ್ಮ ಸಮುಚ್ಚಿತ ಐಕ್ಯಜ್ಞಾನವು ಯಾವ ಯಾವ ಜೀವರೂಪಗಳಿಗೆ ಆಗುವದೋ ಆಯಾ ಜೀವರೂಪದಿಂದ) ಮುಕ್ತನಾಗುವನು ಎಂದು ಹೇಳುವದೂ ಸರಿಯಲ್ಲ ಯಾಕೆಂದರೆ (ಸಂಸಾರಿಜೀವರು ಅನಂತರಾಗಿರುವದರಿಂದ ಕೆಲವರಾದರೂ) ಸಂಸಾರಿಜೀವರು ಸದಾಕಾಲದಲ್ಲಿಯೂ ಇರುವರು. ಆದ್ದರಿಂದ ಬ್ರಹ್ಮನು ಯಾವಾಗಲೂ ಸಂಸಾರಿಯಾಗಿಯೇ ಇರುವನು. ಆದ್ದರಿಂದ ಅವನೊಡನೆ ಐಕ್ಯವನ್ನು ಪಡೆಯುವದು ಮುಕ್ತಿಯೆನಿಸಲಾರದು (ನಿರ್ದುಃಖ ಪರಮಾನಂದ ಬ್ರಹ್ಮನೊಡನೆ

ಐಕ್ಯವನ್ನು ಪಡೆಯುವದು ಮುಕ್ತಿಯು ಆದರೆ ಎಲ್ಲ ಜೀವರೂ ಮುಕ್ತಿಯನ್ನು ಪಡೆಯುವವರೆಗೆ ಬ್ರಹ್ಮನು ಇಂಥವನಾಗುವದಿಲ್ಲ ಎಲ್ಲ ಜೀವರೂ ಎಂದಿಗೂ ಮುಕ್ತಿಯನ್ನು ಪಡೆಯುವದಿಲ್ಲ). ಈ ಬ್ರಹ್ಮನಿಗೆ ಯಾವಾಗಲೂ ಉಪಾಧಿಸಂಬಂಧವಿದ್ದೇ ಇರುವದು (ಎಲ್ಲಿಯವರೆಗೆ ಕೆಲವರಾದರೂ ಜೀವರು ಸಂಸಾರಿಗಳಾಗಿರುವರೋ ಅಲ್ಲಿಯವರೆಗೆ ಬ್ರಹ್ಮನಿಗೆ ಉಪಾಧಿಸಂಬಂಧವಿದ್ದೇ ಇರುವದು ಹೀಗೆ ಉಪಾಧಿಸಂಬಂಧವಿದ್ದ ಬ್ರಹ್ಮನು ನಿರ್ದುಃಖ ಪರಮಾನಂದರೂಪಬ್ರಹ್ಮನಾಗಲಾರನು)

ಇನ್ನು ಶುದ್ಧಬ್ರಹ್ಮನಿಗೆ ಉಪಾಧಿಯ ಸಂಬಂಧವು ಇಲ್ಲವೆಂದು ಹೇಳುವದೂ ಸರಿಯಲ್ಲ ಯಾಕಂದರೆ (ಉಪಾಧಿಯ ಸಂಬಂಧಕ್ಕೆ ಒಬ್ಬ ಸಂಬಂಧಿಯು ಬೇಕು ಅವನು ಶುದ್ಧಬ್ರಹ್ಮನಲ್ಲದಿದ್ದರೆ ಈಗಾಗಲೇ ಉಪಾಧಿಸಂಬಂಧವುಳ್ಳ ಇನ್ನೊಬ್ಬನಾಗಿರಬೇಕು ಇವನಿಗೆ ಈ ಮೊದಲಿದ್ದ) ಉಪಾಧಿಸಂಬಂಧಕ್ಕೆ ಅದಕ್ಕೂ ಮೊದಲಿನ ಉಪಾಧಿಸಂಬಂಧವನ್ನು ಕಲ್ಪಿಸುವದಾದರೆ (ಆ ಮೊದಲಿನ ಉಪಾಧಿಸಂಬಂಧ ಯಾರಿಗೆ ಎಂಬ ಪ್ರಶ್ನೆಯುಂಟಾಗುವದು ಅದಕ್ಕಾಗಿ ಅದಕ್ಕೂ ಮೊದಲಿನ ಇನ್ನೊಂದು ಉಪಾಧಿಸಂಬಂಧವನ್ನು ಕಲ್ಪಿಸಿದರೆ ಅದು ಯಾರಿಗೆ ಎಂಬ ಪ್ರಶ್ನೆಯುಂಟಾಗಿ) ಅನವಸ್ಥಾದೋಷ ಬರುವದು (ಆದ್ದರಿಂದ ಶುದ್ಧಬ್ರಹ್ಮನಿಗೇ ಉಪಾಧಿಸಂಬಂಧವನ್ನು ಹೇಳಬೇಕು ಮತ್ತು ಅದು ಇರುವವರೆಗೆ ಅವನು ಸಂಸಾರಿಯಾಗಿಯೇ ಇರುವನು). ಇನ್ನು (ಶುದ್ಧಬ್ರಹ್ಮನಿಗೆ ಉಪಾಧಿಸಂಬಂಧವಿಲ್ಲ ಆದರೆ ಯಾವ ಉಪಾಧಿಯ ಸಂಬಂಧದಿಂದ ಅವನು ಜೀವರೂಪವನ್ನು ತಾಳಲಿರುವನೋ) ಆಯಾ ಉಪಾಧಿಯ ಸಂಬಂಧದಿಂದ ಸಂಬದ್ಧನಾದವನಿಗೇ ಆಯಾ ಉಪಾಧಿಯ ಸಂಬಂಧ ಬರುವದು ಎಂದು ಹೇಳಿದರೆ ಆತ್ಮಾಶ್ರಯ ದೋಷ ಬರುವದು. (ಆದ್ದರಿಂದ ಸತ್ಯವಾದ ಉಪಾಧಿಗಳಿಂದ ಬ್ರಹ್ಮನು ನಾನಾಜೀವರೂಪನಾಗಿ ಬದ್ಧನೂ ಮುಕ್ತನೂ ಆಗುವನು ಎಂಬ ಮತವು ಸರಿಯಲ್ಲ.)

(ಇಲ್ಲಿ ಮತ್ತೆ ಅದ್ವೈತಿಗಳು ತಲೆ ಹಾಕಿ) ಉಪಾಧಿಯು ಮಿಥ್ಯಾಭೂತವಾದುದು ಎಂದು ಹೇಳುವದು ಸರಿಯಲ್ಲ ಯಾಕಂದರೆ ಅಜ್ಞಾನವು ಸಿದ್ಧಿಸದೆ ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸಲಾರದು ಅಜ್ಞಾನವಿಲ್ಲದೆ ಮಿಥ್ಯಾತ್ವವೇ ಸಿದ್ಧಿಸಲಾರದು (ಮಿಥ್ಯಾ ಅಂದರೆ ಆರೋಪಿತ. ಯಾವದೇ ಒಂದು ವಸ್ತುವು ಆರೋಪಿತವಾಗಬೇಕಾದರೆ ಅದಕ್ಕೆ ಅಜ್ಞಾನವು ಬೇಕು) ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸದೆ ಅಜ್ಞಾನವು ಸಿದ್ಧಿಸಲಾರದು (ಯಾಕಂದರೆ ಅಜ್ಞಾನಕ್ಕೆ ಒಬ್ಬ ಆಶ್ರಯನು ಬೇಕು ಆ ಆಶ್ರಯನಾದ ಜೀವನು ಮಿಥ್ಯಾಭೂತವಾದ ಉಪಾಧಿಯಿಂದಲೇ ಉಂಟಾಗಬೇಕು). ಮಿಥ್ಯಾಭೂತವಾದ ಉಪಾಧಿಯಿಂದ ಭಿನ್ನನೆಂದುಂಟಾದ (ಜೀವನೇ) ಅಜ್ಞಾನಕ್ಕೆ ಆಶ್ರಯನಾಗಿರುವನು.

**ವಿವರಣೆ**—ಇಲ್ಲಿ ಮೊದಲು ಬ್ರಹ್ಮನು ಒಬ್ಬನೇ ಆಗಿದ್ದು ಸತ್ಯವಾದ ಅನೇಕ ಉಪಾಧಿಗಳಿಂದ ಅನೇಕ ಜೀವನಾಗಿರುವನು ಯಾವ ಜೀವನು ಇನ್ನೂ ನಿವೃತ್ತಕರ್ಮ

ಸಮುಚ್ಚಿತ ಐಕ್ಯಜ್ಞಾನವುಳ್ಳವನಾಗಿರುವದಿಲ್ಲವೋ ಅವನು ಸಂಸಾರಿಯಾಗಿಯೂ ಬದ್ಧ ನಾಗಿಯೂ ಉಳಿಯುವನು. ಯಾವ ಜೀವನು ನಿವೃತ್ತಕರ್ಮಸಮುಚ್ಚಿತ ಐಕ್ಯಜ್ಞಾನ ವನ್ನು ಪಡೆಯುವನೋ ಅವನು ಮುಕ್ತನಾಗುವನು ಎಂಬ ವಾದವನ್ನು ನಿರಾಕರಿಸಲಾಗಿದೆ. ಈ ಉಪಾಧಿಗಳಿಂದ ಕೂಡಿದ ಕೆಲವು ಜೀವರು ಐಕ್ಯಜ್ಞಾನವನ್ನು ಪಡೆದರೂ ಎಲ್ಲರೂ ಪಡೆಯುವದಿಲ್ಲ ಯಾಕಂದರೆ ಜೀವರು ಅನಂತಾನಂತರಾಗಿರುವರು. ಆದ್ದರಿಂದ ಬ್ರಹ್ಮನು ಸೋಪಾಧಿಕನಾಗಿಯೇ ಉಳಿಯುವನು ಕೆಲವರಾದರೂ ಜೀವರು ಸಂಸಾರಿಗಳಾಗಿರುವ ವರೆಗೆ ಸಂಸಾರಿಯಾಗಿಯೇ ಇರುವನು ಅಂದಮೇಲೆ ಇಂಥ ಬ್ರಹ್ಮನೊಡನೆ ಐಕ್ಯವನ್ನು ಪಡೆದರೆ ನಿರ್ದುಃಖಾನಂದಾನುಭವರೂಪವಾದ ಮುಕ್ತಿಯು ದೊರೆಯಲಾರದು. ಇನ್ನು ಶುದ್ಧಬ್ರಹ್ಮ ಬೇರೆ ಸೋಪಾಧಿಕಬ್ರಹ್ಮ ಬೇರೆ ಎಂದು ಹೇಳಲು ಬರುವದಿಲ್ಲ ಉಪಾಧಿ ಸಂಬಂಧವು ಈ ಶುದ್ಧಬ್ರಹ್ಮನಿಗೇ ಬರಬೇಕು ಉಪಾಧಿಸಂಬಂಧ ಬರುವದಕ್ಕೆ ಒಬ್ಬ ಸಂಬಂಧಿಯು ಬೇಕು ಈ ಸಂಬಂಧಿಯು ಸೋಪಾಧಿಕಬ್ರಹ್ಮನೆಂದು ಹೇಳಿದರೆ ಆ ಮೊದಲಿನ ಉಪಾಧಿಯ ಸಂಬಂಧ ಯಾರಿಗೆ ಬಂದಿತು ? ಅವನೂ ಸೋಪಾಧಿಕನೆಂದರೆ ಆ ಉಪಾಧಿಯ ಸಂಬಂಧ ಯಾರಿಗೆ ಎಂಬ ಅನವಸ್ಥೆಯುಂಟಾಗುವದು ಆದ್ದರಿಂದ ಶುದ್ಧಬ್ರಹ್ಮನೇ ಉಪಾಧಿಯುಳ್ಳವನು ಅನಂತಾನಂತ ಜೀವರಿರುವದರಿಂದ ಅವನಿಗೆ ಅನಂತಾನಂತ ಉಪಾಧಿಗಳಿರುವವು ಅದರಲ್ಲಿ ಕೆಲವರು ಐಕ್ಯಜ್ಞಾನವನ್ನು ಪಡೆದರೂ ಇನ್ನುಳಿದವರ ಉಪಾಧಿಗಳಿರುವದರಿಂದ ಬ್ರಹ್ಮನು ಸೋಪಾಧಿಕನೇ ಆಗಿದ್ದು ಸಂಸಾರಿ ಯಾಗಿರುವನು ಅಂದಮೇಲೆ ಅಂಥ ಬ್ರಹ್ಮನೊಡನೆ ಐಕ್ಯವನ್ನು ಪಡೆದು ಏನು ಪ್ರಯೋಜನ ?

ಇನ್ನು ಈ ಉಪಾಧಿಗಳು ಮಿಥ್ಯಾಭೂತವಾದವು ಎಂಬ ಮಾಯಾವಾದಿಗಳ ವಾದವು ಸರಿಯಲ್ಲ. ಯಾಕಂದರೆ ಅಜ್ಞಾನವು ಸಿದ್ಧಿಸದೆ ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸುವದಿಲ್ಲ. ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸದೆ ಅಜ್ಞಾನವು ಸಿದ್ಧಿಸುವದಿಲ್ಲ ಹೀಗೆ ಇದು ಅನ್ಯೋನ್ಯಾಶ್ರಯದೋಷದುಷ್ಟವಾಗಿರುವದು

**ಶುದ್ಧಬ್ರಹ್ಮನೇ ಅಜ್ಞಾನಕ್ಕೆ ಆಶ್ರಯನು ಎಂದು ಹೇಳಿದರೂ ಅನ್ಯೋನ್ಯಾಶ್ರಯ ತಪ್ಪಿದ್ದಲ್ಲ.**

**78. ಶುದ್ಧಸ್ಯೈವ ಅಜ್ಞತ್ವೇ ಮುಕ್ತಸ್ಯಾಪಿ ಅಜ್ಞತ್ವಪ್ರಸಕ್ತೇಃ । ಸ್ವಾಭಾವಿಕ-ತ್ವಾತ್ ಸತ್ಯತ್ವಾತ್ ಸದ್ವಿತೀಯತ್ವಪ್ರಸಕ್ತೇಶ್ಚ । ಸ್ವಾಭಾವಿಕಸ್ಯ ಅನಿವೃತ್ತ್ಯಂಗೀ-ಕಾರಾತ್ ಅನಿವೃತ್ತಿಪ್ರಸಕ್ತೇಶ್ಚ । ಸತ್ಯಸ್ಯ ಚ ಅನಿವೃತ್ತಿರಿತಿ ಹಿ ತತ್ಪಕ್ಷಃ । ಅತಶ್ಚ ಅನ್ಯೋನ್ಯಾಶ್ರಯತಾ ।**

**ಅಜ್ಞಾನಸಿದ್ಧೌ ಮಿಥ್ಯೋಪಾಧಿಸಿದ್ಧಿಃ ಮಿಥ್ಯೋಪಾಧಿಸಿದ್ಧೌ ಜೀವಸಿದ್ಧಿಃ ಜೀವಸಿದ್ಧೌ ತದಾಶ್ರಯಾಜ್ಞಾನಸಿದ್ಧಿರಿತಿ ಚಕ್ರಕಂ ವಾ ।**

**ನ ಚ ಶುದ್ಧಮೇವ ಭ್ರಾಂತ್ಯಾ ಅಜ್ಞಮಿತಿ ಯುಕ್ತಮ್ । ಅಜ್ಞಾನಸಿದ್ಧೌ ಭ್ರಮಸಿದ್ಧಿಃ ತತ್ಸಿದ್ಧೌ ಅಜ್ಞಾನಸಿದ್ಧಿರಿತಿ ಅನ್ಯೋನ್ಯಾಶ್ರಯತ್ವಾತ್ ।**

**ಅನುವಾದ**—(ಈ ಹಿಂದೆ ಸತ್ಯವಾದ ಉಪಾಧಿಗಳಿಂದ ಬ್ರಹ್ಮನು ನಾನಾ ಜೀವರಾಗುವನು ಎಂಬ ವಾದವನ್ನು ಖಂಡಿಸಿದಮೇಲೆ ಮಾಯಾವಾದಿಗಳು ಮಿಥ್ಯಾಭೂತವಾದ ಉಪಾಧಿಗಳಿಂದ ನಾನಾ ಜೀವರು ತೋರುವರು ಎಂದು ಹೇಳಲು ಪ್ರಯತ್ನಿಸಿದರು. ಅದಕ್ಕೆ ಅಜ್ಞಾನವು ಸಿದ್ಧಿಸದೆ ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸುವದಿಲ್ಲ, ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸದೆ ಅಜ್ಞಾನವು ಸಿದ್ಧಿಸುವದಿಲ್ಲ ಎಂದು ಅನ್ಯೋನ್ಯಾಶ್ರಯದೋಷವನ್ನು ಹೇಳಿದ್ದಕ್ಕೆ ಈ ಅನ್ಯೋನ್ಯಾಶ್ರಯದೋಷವು ಅಜ್ಞಾನವು ಜೀವಾಶ್ರಿತ ಎಂದು ಹೇಳಿದರೆ ಬರುವದು ಆದರೆ ಶುದ್ಧಬ್ರಹ್ಮನೇ ಅಜ್ಞಾನಕ್ಕೆ ಆಶ್ರಯನು ಎಂಬ ವಾದವನ್ನು ಈಗ ನಿರಾಕರಿಸುವರು) ಶುದ್ಧಬ್ರಹ್ಮನೇ ಅಜ್ಞಾನಕ್ಕೆ ಆಶ್ರಯನು ಎಂದು ಹೇಳಿದರೆ ಮುಕ್ತರಾದವರೂ ಅಜ್ಞಾನಕ್ಕೆ ಆಶ್ರಯರು ಎಂದು ಹೇಳುವ ಪ್ರಸಂಗ ಬರುವದು. (ಯಾಕಂದರೆ ಮುಕ್ತರು ಶುದ್ಧ ಬ್ರಹ್ಮರೇ ಆಗುವರು ಶುದ್ಧಬ್ರಹ್ಮನಿಗೆ ಈ ಮೊದಲು ಇದ್ದ ಅಜ್ಞಾನವು ಈಗ ಹೋಗಲು ಕಾರಣವಿಲ್ಲ) ಅಲ್ಲದೆ (ಶುದ್ಧಬ್ರಹ್ಮನನ್ನು ಆಶ್ರಯಿಸಿ ಕೊಂಡಿದ್ದ ಈ ಅಜ್ಞಾನವು ಯಾವ ಕಾರಣವೂ ಇಲ್ಲದೆ ಬಂದದ್ದಾಗಿದ್ದು) ಸ್ವಾಭಾವಿಕವಾದ್ದರಿಂದ ಸತ್ಯವೆಂದು ಹೇಳಬೇಕು ಇದು ಸತ್ಯವಾದ್ದರಿಂದ ಬ್ರಹ್ಮನು ಸದ್ವಿತೀಯನು (ಅಂದರೆ ಸತ್ಯನಾದ ಬ್ರಹ್ಮ ಮತ್ತು ಸತ್ಯವಾದ ಅಜ್ಞಾನ) ಎಂಬ ಎರಡು ಸತ್ಯವಾದ ಪದಾರ್ಥಗಳಿರುವವು ಎಂದು ಹೇಳುವ ಪ್ರಸಂಗ ಬರುವದು ಸ್ವಾಭಾವಿಕವಾದ ಪದಾರ್ಥಗಳು ನಿವೃತ್ತವಾಗುವದಿಲ್ಲವೆಂದು (ಅದ್ವೈತಿಗಳು) ಹೇಳುವದರಿಂದ ಈ ಅಜ್ಞಾನಕ್ಕೆ ನಿವೃತ್ತಿಯೇ ಆಗದಿರುವ ಪ್ರಸಂಗ ಬರುವದು ಸ್ವಾಭಾವಿಕ ಅಂದರೆ ಸತ್ಯವಾದದ್ದು ನಿವೃತ್ತವಾಗುವದಿಲ್ಲ ಎಂಬುದು ಅದ್ವೈತಿಗಳ ಅಭಿಪ್ರಾಯವಾಗಿದೆ (ಆದ್ದರಿಂದ ಮಿಥ್ಯಾಭೂತವಾದ ಉಪಾಧಿಯಿಂದ ಭಿನ್ನನಾದ ಜೀವನೇ ಅಜ್ಞಾನಕ್ಕೆ ಆಶ್ರಯನು, ಶುದ್ಧಬ್ರಹ್ಮನಲ್ಲ ಎಂದು ಅವರು ಹೇಳಲೇಬೇಕಾಗುವದರಿಂದ) ಅನ್ಯೋನ್ಯಾಶ್ರಯವು ತಪ್ಪಿದ್ದಲ್ಲ. (ಅಜ್ಞಾನವು ಸಿದ್ಧಿಸದೆ ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸುವದಿಲ್ಲ. ಇಂಥ ಉಪಾಧಿಯು ಸಿದ್ಧಿಸದೆ ಅಜ್ಞಾನವು ಸಿದ್ಧಿಸುವದಿಲ್ಲ ಎಂಬ ಅನ್ಯೋನ್ಯಾಶ್ರಯವು ತಪ್ಪಿದ್ದಲ್ಲ).

ಅಥವಾ, ಅಜ್ಞಾನವು ಸಿದ್ಧವಾದ ಮೇಲೆಯೇ ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸುವದು, ಇಂಥ ಉಪಾಧಿಯು ಸಿದ್ಧವಾದ ಮೇಲೆಯೇ (ಈ ಉಪಾಧಿ ಮೂಲಕರಾದ) ಜೀವರು ಸಿದ್ಧಿಸುವರು, ಈ ಜೀವರು ಸಿದ್ಧರಾದಮೇಲೆ ಅವರನ್ನು ಆಶ್ರಯಿಸಿಕೊಂಡಿರುವ ಅಜ್ಞಾನವು ಸಿದ್ಧವಾಗುವದು ಎಂಬ ಚಕ್ರಕದೋಷವು ಬರುವದು

ಶುದ್ಧಬ್ರಹ್ಮನೇ ಭ್ರಾಂತಿಯಿಂದ ಅಜ್ಞಾನಕ್ಕೆ ಆಶ್ರಯನು ಎಂದು ಹೇಳುವದೂ ಸರಿಯಲ್ಲ ಯಾಕಂದರೆ ಅಜ್ಞಾನವು ಸಿದ್ಧಿಸದೆ ಭ್ರಮವು ಸಿದ್ಧಿಸುವದಿಲ್ಲ, ಭ್ರಮವು ಸಿದ್ಧಿಸದೆ ಅಜ್ಞಾನವು ಸಿದ್ಧಿಸುವದಿಲ್ಲ ಎಂಬ ಅನ್ಯೋನ್ಯಾಶ್ರಯದೋಷವು ಬರುತ್ತದೆ.

**ವಿವರಣೆ**—ಸತ್ಯವಾದ ಉಪಾಧಿಗಳಿಂದಲೇ ಬ್ರಹ್ಮನು ನಾನಾ ಜೀವರಾಗಿ ತೋರುವನು ಎಂಬ ಮತವನ್ನು ನಿರಾಕರಿಸಿದಮೇಲೆ, ಹಾಗಾದರೆ ಮಿಥ್ಯಾಭೂತವಾದ ಉಪಾಧಿಗಳಿಂದಲೇ ನಾನಾ ಜೀವರು ತೋರುವರು ಎಂಬ ಅದ್ವೈತಿಗಳ ಮೊಂಡುವಾದವನ್ನು (ಈಗಾಗಲೇ ನಿರಾಕರಿಸಿದ್ದನ್ನು) ಉಪಸಂಹಾರರೂಪವಾಗಿ ಮತ್ತೆ ನಿರಾಕರಿಸುವರು ಜೀವನು ಅಜ್ಞಾನಕ್ಕೆ ಆಶ್ರಯನು ಎಂಬ ಅದ್ವೈತಿಗಳ ಪ್ರಕ್ರಿಯೆಯ ಪ್ರಕಾರ ಆಶ್ರಯನಾದ ಜೀವನು ಅಸ್ತಿತ್ವದಲ್ಲಿ ಬರಬೇಕಾದರೆ ಮಿಥ್ಯಾಭೂತ ಉಪಾಧಿಯು ಸಿದ್ಧವಾಗಬೇಕು ಈ ಮಿಥ್ಯಾಭೂತವಾದ ಉಪಾಧಿಯು ಸಿದ್ಧಿಸಬೇಕಾದರೆ ಅಜ್ಞಾನವು ಸಿದ್ಧವಾಗಬೇಕು ಯಾಕೆಂದರೆ ಅಜ್ಞಾನವಿಲ್ಲದೆ ಮಿಥ್ಯಾಭೂತವಾದ ಯಾವದೂ ಸಿದ್ಧವಾಗುವದಿಲ್ಲ ಆದ್ದರಿಂದ ಅನ್ಯೋನ್ಯಾಶ್ರಯದೋಷ ಬರುವದು ಎಂದು ಈ ಹಿಂದೆಯೇ ಹೇಳಿರುವರು. ಈಗ ಅದ್ವೈತಿಗಳು ಶುದ್ಧಬ್ರಹ್ಮನೇ ಅಜ್ಞಾನಕ್ಕೆ ಆಶ್ರಯ ಎಂದು ಹೇಳಿದರೆ ಬರುವ ದೋಷಗಳನ್ನು ತೋರಿಸುವರು ಶುದ್ಧಬ್ರಹ್ಮನೇ ಅಜ್ಞಾನಕ್ಕೆ ಆಶ್ರಯನೆಂದು ಹೇಳಿದರೆ ಜೀವನು ಮುಕ್ತನಾದಮೇಲೆಯೂ ಅಜ್ಞಾನವುಳ್ಳವನಾಗಿರುವನು ಎಂದು ಹೇಳಬೇಕಾಗುವದು ಯಾಕೆಂದರೆ ಮುಕ್ತನಾದ ಜೀವನು ಶುದ್ಧಬ್ರಹ್ಮನೇ ಆಗುವನು ಮತ್ತು ಅವನನ್ನು ಆಶ್ರಯಿಸಿಕೊಂಡು ಅಜ್ಞಾನವು ಇದ್ದೇ ಇರುವದು ಅಲ್ಲದೆ ಶುದ್ಧಬ್ರಹ್ಮನಲ್ಲಿ ಈ ಅಜ್ಞಾನವುಂಟಾಗಲು ಅದ್ವೈತಿಗಳು ಯಾವ ಕಾರಣವನ್ನೂ ಹೇಳುವದಿಲ್ಲ ಹೇಳಲೂ ಬರುವದಿಲ್ಲ. ಆದ್ದರಿಂದ ಇದು ಅವನಿಗೆ ಸ್ವಾಭಾವಿಕವಾದುದೆಂದೇ ಹೇಳಬೇಕು ಸ್ವಾಭಾವಿಕವಾದುದರಿಂದ ಸತ್ಯವಾದುದೆಂದು ಹೇಳಬೇಕಾಗುವದು ಹೀಗೆ ಈ ಅಜ್ಞಾನವೂ ಸತ್ಯವಾದರೆ ಬ್ರಹ್ಮ ಮತ್ತು ಅಜ್ಞಾನ ಹೀಗೆ ಎರಡು ಪದಾರ್ಥಗಳು ಸತ್ಯವಾಗಿ ಅದ್ವೈತಕ್ಕೆ ಹಾನಿ ಬರುವದು ಅಲ್ಲದೆ ಸ್ವಾಭಾವಿಕವಾಗಿ ಸತ್ಯವಾದುದು ಬಾಧಿತವಾಗುವದಿಲ್ಲ ಆದ್ದರಿಂದ ಅಜ್ಞಾನಕ್ಕೆ ನಿವೃತ್ತಿಯೇ ಆಗದಿರುವ ಪ್ರಸಂಗ ಬರುವದು ಆದ್ದರಿಂದ ಅಜ್ಞಾನವು ಶುದ್ಧಬ್ರಹ್ಮನಲ್ಲಿ ಇದೆ ಎಂಬ ಪ್ರಕ್ರಿಯೆಯನ್ನು ಬಿಟ್ಟು ಜೀವನಲ್ಲಿ ಇದ ಎಂದೇ ಹೇಳಬೇಕು ಅಂದಮೇಲೆ ಮೇಲೆ ಹೇಳಿದ ಅನ್ಯೋನ್ಯಾಶ್ರಯವು ಬಂದೇ ಬರುವದು ಇನ್ನೂ ಒಂದು ಹೆಜ್ಜೆ ಮುಂದ ಹೋಗಿ ಹೇಳಬೇಕೆಂದರೆ ಅಜ್ಞಾನವು ಸಿದ್ಧವಾದಮೇಲೆ ಮಿಥ್ಯಾಭೂತವಾದ ಉಪಾಧಿಯು ಸಿದ್ಧವಾಗುವದು ಅಂಥ ಉಪಾಧಿಯು ಸಿದ್ಧವಾದರೆ ತನ್ಮೂಲಕವಾದ ಜೀವರು ಸಿದ್ಧರಾಗುವರು ಜೀವರು ಸಿದ್ಧವಾದರೆ ಅವರನ್ನು ಆಶ್ರಯಿಸಿಕೊಂಡಿರುವ ಅಜ್ಞಾನವು ಸಿದ್ಧವಾಗುವದು. ಹೀಗೆ ಈ ವಿಷಚಕ್ರದ ಚಕ್ರಕದೋಷವು ಬರುವದು

ಇದನ್ನೆಲ್ಲ ತಪ್ಪಿಸಿಕೊಳ್ಳಲು ಶುದ್ಧಬ್ರಹ್ಮನೇ ಭ್ರಾಂತಿಯಿಂದ ಅಜ್ಞಾನಕ್ಕೆ ಒಳಗಾಗಿರುವನು ಎಂದು ಹೇಳಿದರೆ (ಅಂದರೆ ಬ್ರಹ್ಮನ ಅಜ್ಞಾನವು ಸ್ವಾಭಾವಿಕವಲ್ಲ, ಆದರೆ ಭ್ರಾಂತಿಮೂಲಕ ಎಂದು ಹೇಳಿದರೆ), ಈ ಅಜ್ಞಾನವೆಂಬುದು ಸಿದ್ಧವಾಗದೆ ಭ್ರಮವು ಸಿದ್ಧವಾಗುವದಿಲ್ಲ, ಭ್ರಮವು ಸಿದ್ಧವಾಗದೆ ಅಜ್ಞಾನವು ಸಿದ್ಧವಾಗುವದಿಲ್ಲ ಎಂಬ ಅನ್ಯೋನ್ಯಾಶ್ರಯ ತಪ್ಪಿದ್ದೇ ಅಲ್ಲ.

**ಜೀವರು ಅನಂತಾನಂತರು.**

**79.** **ಅನಾಗತಾಃ ಅತೀತಾಶ್ಚ ಯಾವಂತಃ ಸಹಿತಾಃ ಕ್ಷಣಾಃ ।**
**ಅತೀತಾನಾಗತಾಶ್ಚೈವ ಯಾವಂತಃ ಪರಮಾಣವಃ ॥**
**ತತೋಽಪ್ಯನಂತಗುಣಿತಾಃ ಜೀವಾನಾಂ ರಾಶಯಃ ಪೃಥಕ್ ।**
ಇತಿ ವತ್ಸಶ್ರುತೇಃ ನ ಸಂಸಾರಿಣಾಂ ಪರಿಸಮಾಪ್ತಿಃ
**ಅಸ್ಮತ್ಪಕ್ಷೇ ।**
**ಪರಮಾಣುಪ್ರದೇಶೇಽಪಿ ಅನಂತಾ ಹಿ ಪ್ರಾಣರಾಶಯಃ ।**
**ಸೂಕ್ಷ್ಮತ್ವಾದೀಶಶಕ್ತ್ಯೈವ ಸ್ಥೂಲಾ ಅಪಿ ಹಿ ಸಂಸ್ಥಿತಾಃ ॥**
**ಸಹಸ್ರಯೋಜನಸಭಾಂ ಪ್ರಭಾವಾತ್ ವಿಶ್ವಕರ್ಮಣಃ ।**
**ಅನಂತಾ ರಾಶಯೋಽನಂತಾಃ ಪ್ರಜಾನಾಮಧಿಸಂಸ್ಥಿತಾಃ ।** ಇತಿ ಸ್ಕಾಂದೇ

**ಅನುವಾದ**—(ಜೀವರು ಅನಂತಾನಂತರು, ಸೂಕ್ಷ್ಮರು, ಶರೀರಾದಿಗಳನ್ನು ಪಡೆದಾಗ ಸ್ಥೂಲರು ಇತ್ಯಾದಿ ಪ್ರಮೇಯಗಳನ್ನು ಇಲ್ಲಿ ತಿಳಿಸುವರು) ಹಿಂದೆ ಆಗಿಹೋದ ಮತ್ತು ಮುಂದೆ ಬರಲಿರುವ ಕ್ಷಣಗಳು ಮತ್ತು ಪರಮಾಣುಗಳು ಎಷ್ಟಾಗಬಹುದೋ ಅದಕ್ಕೂ ಎಷ್ಟೋ ಪಟ್ಟು ಹೆಚ್ಚು ಜೀವರಾಶಿಗಳಿರುವವು ಎಂದು ವತ್ಸಶ್ರುತಿಯು ಹೇಳುವದು ಆದ್ದರಿಂದ ನಮ್ಮ ಪಕ್ಷದಲ್ಲಿ ಸಂಸಾರಿ ಜೀವರ ಪರಿಸಮಾಪ್ತಿಯೇ ಇಲ್ಲ

ಒಂದು ಪರಮಾಣುವಿನಷ್ಟು ಪ್ರದೇಶದಲ್ಲಿಯೂ ಅನಂತಜೀವರಾಶಿಗಳಿರುವವು. ಈ ಜೀವರು ಸ್ವರೂಪತಃ ಸೂಕ್ಷ್ಮರು (ಶರೀರಾದಿಗಳನ್ನು ಪಡೆದಾಗ) ಸ್ಥೂಲರೂ ಆಗಿರುವರು ಇದೆಲ್ಲವೂ ಪರಮಾತ್ಮನ ಅಘಟಿತ ಘಟನಾ ಸಾಮರ್ಥ್ಯದಿಂದ ನಡೆಯುವದು. ವಿಶ್ವಕರ್ಮನ ಪ್ರಭಾವದಿಂದ ನಿರ್ಮಿತವಾದ ಸಹಸ್ರಯೋಜನ ಸಭೆಯಲ್ಲಿ ಅನಂತಜೀವರಾಶಿಗಳ ಅನಂತಜೀವರು ಇರುವರು ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ

**ವಿವರಣೆ**—ಪರಮಾಣುಗಳು ನಮ್ಮ ಸಿದ್ಧಾಂತದಲ್ಲಿ ನಿತ್ಯವಲ್ಲ ಆದ್ದರಿಂದ ಅತೀತ ಮತ್ತು ಅನಾಗತ ಪರಮಾಣುಗಳು ಎಂದು ಹೇಳುವದರಲ್ಲಿ ಅಭ್ಯಂತರವಿಲ್ಲ. 'ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್' ಎಂಬ ಸೂತ್ರದಲ್ಲಿ ಪರಮಾಣುಗಳು ಅನಿತ್ಯ ಎಂಬುದನ್ನು ಪ್ರತಿಪಾದಿಸಲಾಗಿದೆ ಇಲ್ಲಿ ಉಲ್ಲೇಖಿಸಿದ ಕಾಲದ ಕ್ಷಣಗಳು ಸ್ವಾಭಾವಿಕ ಕ್ಷಣಗಳು, ಔಪಾಧಿಕವಲ್ಲ. ಜೀವರು ಸ್ವರೂಪತಃ ಸೂಕ್ಷ್ಮರು, ಶರೀರಾದಿಸಾಹಿತ್ಯ ವಿವಕ್ಷೆಯಿಂದ ಸ್ಥೂಲರು ಏಕಜೀವವಾದಿಗಳ ಆಕ್ಷೇಪಗಳನ್ನು ಸತ್ಯವಾದ, ಸೂಕ್ಷ್ಮವಾದ, ಅನಂತಾನಂತ ಬಹುಜೀವಗಳನ್ನು ಅಂಗೀಕರಿಸುವ, ಸಂಸಾರಿಜೀವರು ಕೆಲವರು ಇದ್ದೇ ಇರುವರು ಎನ್ನುವ ನಮ್ಮ ಮತದಿಂದಲೇ ನಿರಾಕರಿಸುವದು ಸಾಧ್ಯ ಮಿಥ್ಯಾ ಉಪಾಧಿ ಮೂಲಕ ಬಹು ಜೀವವಾದಿಗಳಿಂದ ಸಾಧ್ಯವಿಲ್ಲ ಎಂಬ ಸಂದರ್ಭದಲ್ಲಿ ಜೀವಸ್ವರೂಪದ ಈ ವಿವರಗಳನ್ನು ಹೇಳಿದ್ದಾರೆ.

ಮಿಥ್ಯಾತ್ವದ ದುರ್ಘಟಿತ್ವವು ಭೂಷಣ ಎಂಬ ಮೊಂಡುವಾದ ಸರಿಯಲ್ಲ.

80. ನ ಚ ಮಿಥ್ಯಾವಸ್ತುನಃ ದುರ್ಘಟಿತ್ವಮೇವ ಭೂಷಣಮ್ । ದೃಷ್ಟಸ್ಯ ವಸ್ತುನಃ ಮಿಥ್ಯಾತ್ವಕಲ್ಪನಸ್ಯ ದೃಷ್ಟಿಸಕಾಶಾತ್ ಬಲವತ್ಪ್ರಮಾಣಯುಕ್ತ್ಯಪೇಕ್ಷತ್ವಾತ್ । ತದಭಾವೇ ಸತ್ಯತ್ವಂ ದೃಷ್ಟ್ಯೈವ ಸಿದ್ಧ್ಯತಿ । ನ ಹಿ ಅನ್ನಾದಿಕಂ ಭೋಗ್ಯಂ ದೃಷ್ಟ್ವಾ ಭೋಕ್ತುಂ ಸತ್ಯತ್ವೇ ಪ್ರಮಾಣಾಂತರಮಪೇಕ್ಷತೇ । ಕಿಂತು ನೇದಮನ್ನಮಿತಿ ಕೇನಚಿದುಕ್ತೇ ಕಥಮಿದಮನ್ನತ್ವೇನ ದೃಶ್ಯಮಾನಮನ್ನಂ ನ ಭವತೀತಿ ಪ್ರಮಾಣಾಂತರಮಪೇಕ್ಷತೇ ।

ನ ಚ ಪ್ರತ್ಯಕ್ಷದೃಷ್ಟಸ್ಯ ತತೋ ಬಲವತ್ಪ್ರತ್ಯಕ್ಷಂ ಆಗಮಂ ವಿನಾ ಅನುಮಾನಾದಿನೈವ ಬಾಧೋ ದೃಷ್ಟಃ । ದೂರಸ್ಥವೃಕ್ಷಹ್ರಸ್ವತ್ವಾದೌ ಪ್ರತ್ಯಕ್ಷಾಪಟುತ್ವಸ್ಯ ನಿಶ್ಚಿತತ್ವಾತ್ ಯುಕ್ತ್ಯಾ ತತ್ರ ಧೀರ್ಘತ್ವನಿಶ್ಚಯಃ । ಪ್ರತ್ಯಕ್ಷಸ್ಯ ಹಿ ದೂರೇ ಮಂದಗ್ರಾಹಿತ್ವಂ ಪರಿಮಾಣಾದೌ ಅನ್ಯಥಾತ್ವಂ ಚ ತತೋ ಬಲವತ್ಪ್ರತ್ಯಕ್ಷೇಣೈವ ನಿಶ್ಚಿತಮ್ ।

ನ ಚ ಜಗತ್ಪ್ರತ್ಯಕ್ಷಸ್ಯ ಮಿಥ್ಯಾತ್ವಂ ಕೇನಾಪಿ ಪ್ರಮಾಣೇನ ನಿಶ್ಚಿತಮ್ । ವಿಶೇಷತಶ್ಚ ಜ್ಞಾನಾಜ್ಞಾನ ಸುಖದುಃಖಾತ್ಮಭೇದಾದಿ ವಿಷಯಸ್ಯ ಅನುಭವಸ್ಯ ನ ಮಿಥ್ಯಾತ್ವಂ ದೃಷ್ಟಮ್ । ಅತಶ್ಚ ಸಂಸಾರಸ್ಯ ಸತ್ಯತ್ವಾತ್ ಸತ್ಯಸ್ಯ ಚ ಅನಿವೃತ್ತ್ಯಂಗೀಕಾರಾತ್ ನ ಮೋಕ್ಷಃ ಸ್ಯಾತ್ ।

ಅನುವಾದ—(ಅನ್ಯೋನ್ಯಾಶ್ರಯದೋಷವನ್ನು ತೋರಿಸಿ ಅಜ್ಞಾನವು ದುರ್ಘಟಿ ಎಂದು ಹೇಳಿದ್ದು ಭೂಷಣವೇ ಆಗಿದ ಯಾಕೆಂದರೆ ಇದರಿಂದ ಅದು ಮಿಥ್ಯಾ ಎಂದು ಸಿದ್ಧವಾಗುತ್ತದೆ ಮಿಥ್ಯಾವಸ್ತುಗಳು ಸತ್ಯವಸ್ತುಗಳಂತೆ ಸುಘಟವಾಗಿರುವದಿಲ್ಲ ಆದರೆ ದುರ್ಘಟವೇ ಆಗಿರುತ್ತವೆ—ಎಂಬ ಅದ್ವೈತಿಗಳ ಮೊಂಡುವಾದವನ್ನು ಇಲ್ಲಿ ನಿರಾಕರಿಸುವರು ) ಮಿಥ್ಯಾವಸ್ತುವು ದುರ್ಘಟವಾಗಿರುವದು ಭೂಷಣವೇ ಆಗಿದೆ ಎಂದು ಹೇಳಲು ಬರುವದಿಲ್ಲ. (ಯಾಕೆಂದರೆ ನೀವು ಮಿಥ್ಯಾ ಎಂದು ಹೇಳುವ ವಸ್ತುಗಳು ಮಿಥ್ಯಾ ಎಂದುದು ಇನ್ನೂ ಸಿದ್ಧವೇ ಆಗಿಲ್ಲ.) ಪ್ರತ್ಯಕ್ಷಸಿದ್ಧವಾದ (ಪ್ರಪಂಚ ಆತ್ಮಭೇದ ಇತ್ಯಾದಿ) ವಸ್ತುಗಳು ಮಿಥ್ಯಾ ಎಂದು ಹೇಳಬೇಕಾದರೆ ಅದು ಪ್ರತ್ಯಕ್ಷಕ್ಕಿಂತ ಪ್ರಬಲವಾದ ಪ್ರಮಾಣಗಳಿಂದ ಸಿದ್ಧವಾಗಬೇಕು. ಅಂಥ ಬಾಧಕ ಪ್ರಮಾಣಗಳು ಇಲ್ಲದಿದ್ದಾಗ ಆ ಪದಾರ್ಥಗಳು ಸತ್ಯವೆಂಬುದು ಪ್ರತ್ಯಕ್ಷದಿಂದಲೇ ಸಿದ್ಧವಾಗುತ್ತದೆ. ಅನ್ನವೇ ಮೊದಲಾದ ಭೋಗ್ಯವಸ್ತುಗಳನ್ನು ಕಂಡಾಗ ಅವುಗಳನ್ನು ಭುಂಜಿಸಲು ಅವು ಸತ್ಯವೇ ಎಂದು ನಿರ್ಧರಿಸಲು ಪ್ರಮಾಣಾಂತರಗಳನ್ನು ಯಾರೂ ಹುಡುಕುವದಿಲ್ಲ ಆದರೆ ಇದು ಅನ್ನವಲ್ಲ ಎಂದು ಯಾರಾದರೂ ಹೇಳಿದರೆ 'ಅನ್ನ'ವೆಂದು ಕಂಡುಬರುವ ಇದು ಅನ್ನವು ಏಕೆ ಅಲ್ಲ ಎಂದು ತಿಳಿಯಲು ಪ್ರಮಾಣಾಂತರವನ್ನು ಹುಡುಕುತ್ತಾರೆ.

ಪ್ರತ್ಯಕ್ಷಸಿದ್ಧವಾದದ್ದು ಅದಕ್ಕಿಂತ ಪ್ರಬಲವಾದ ಇನ್ನೊಂದು ಪ್ರತ್ಯಕ್ಷ ಅಥವಾ ಆಗಮವಿಲ್ಲದೆ ಅನುಮಾನಾದಿಗಳಿಂದ ಬಾಧಿತವಾಗುವದಿಲ್ಲ ದೂರದಲ್ಲಿದ್ದ ಮರವು ಚಿಕ್ಕದಾಗಿ ಕಂಡಂಥ ಸಂದರ್ಭಗಳಲ್ಲಿ ಪ್ರತ್ಯಕ್ಷವು ಪಟುವಾಗಿಲ್ಲ ಎಂಬುದು ನಿಶ್ಚಿತವಾಗಿದ್ದ ರಿಂದ ಯುಕ್ತಿಯಿಂದ ಅಲ್ಲಿ ದೀರ್ಘತ್ವವನ್ನು ನಿಶ್ಚಯಿಸಲಾಗುತ್ತದೆ ಪ್ರತ್ಯಕ್ಷವು ದೂರ ವಾಗಿದ್ದದ್ದನ್ನು ಮಂದವಾಗಿ ಗ್ರಹಿಸುತ್ತದೆ ಮತ್ತು ಪರಿಮಾಣದ ವಿಷಯದಲ್ಲಿ ವಿರುದ್ಧ ವಾಗಿಯೂ ಇರುತ್ತದೆ ಎಂಬುದು ಬಲವತ್ಪ್ರತ್ಯಕ್ಷದಿಂದಲೇ ನಿಶ್ಚಿತವಾಗುತ್ತದೆ

ಜಗತ್ತಿನ ಪ್ರತ್ಯಕ್ಷವು 'ಮಿಥ್ಯಾ' ಎಂಬುದು ಬೇರೆ ಯಾವ ಪ್ರಮಾಣದಿಂದಲೂ ನಿಶ್ಚಿತವಾಗಿಲ್ಲ ಅದರಲ್ಲಿಯೂ ಜ್ಞಾನ, ಅಜ್ಞಾನ, ಸುಖ, ದುಃಖ, ಆತ್ಮ, ಭೇದ (ಜೀವ-ಪರಮಾತ್ಮರ, ಜೀವ-ಜೀವರ ಇತ್ಯಾದಿಯಾದ ಭೇದಗಳು) ಇತ್ಯಾದಿ ವಿಷಯಗಳ ಅನುಭವವು 'ಮಿಥ್ಯಾ' ಎಂಬುದು ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲ ಆದ್ದರಿಂದ ಸಂಸಾರವು-ಸತ್ಯವಾದ್ದರಿಂದ ಸತ್ಯವಾದದ್ದು ನಿವೃತ್ತಿಯನ್ನು ಹೊಂದುವದಿಲ್ಲ ಎಂದು (ಅದ್ವೈತಿಗಳು) ಅಂಗೀಕರಿಸಿದ್ದರಿಂದ (ಅದ್ವೈತಿಗಳಿಗೆ) ಮೋಕ್ಷವೇ ಇಲ್ಲದಂಥ ಪ್ರಸಂಗ ಬರುವದು

**ವಿವರಣೆ**—ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕ ಇತ್ಯಾದಿ ಅಜ್ಞಾನದ ವಿಷಯದಲ್ಲಿ ತೋರಿಸಿದ ದೋಷಗಳು ಭೂಷಣವೇ ಆಗಿವೆ ಯಾಕಂದರೆ ಮಿಥ್ಯಾವಸ್ತು ಗಳು ದುರ್ಘಟವಾಗಿಯೇ ಇರುವವು ಎಂಬ ಅದ್ವೈತಿಗಳ ಮೊಂಡುವಾದಕ್ಕೆ ಇಲ್ಲಿ ಉತ್ತರ ವನ್ನು ಹೇಳಿರುವರು ಅದ್ವೈತಿಗಳು 'ಮಿಥ್ಯಾ' ಎಂದು ಹೇಳುವ ಪ್ರಪಂಚಾದಿ ವಸ್ತುಗಳು 'ಮಿಥ್ಯಾ' ಎಂದು ಸಿದ್ಧವಾದಮೇಲೆ ಅದರ ದುರ್ಘಟತ್ವದ ವಿಚಾರವನ್ನು ಹೇಳಬಹುದು. ಆದರೆ ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದ ವಸ್ತುಗಳನ್ನು ಅದಕ್ಕಿಂತಲೂ ಪ್ರಬಲವಾದ ಪ್ರತ್ಯಕ್ಷ, ಆಗಮಗಳಿಂದ ಮಾತ್ರ ಅಲ್ಲಗಳೆಯಲು ಬರುತ್ತದೆ ಕೇವಲ ಅನುಮಾನ ಅರ್ಥಾಪತ್ತಿಗಳಿಂದ ಅಲ್ಲಗಳೆಯಲು ಬರುವದಿಲ್ಲ ಜಗತ್ತಿನ ಪ್ರತ್ಯಕ್ಷವು ಮಿಥ್ಯಾ ಎಂದು ಯಾವ ಪ್ರಮಾಣದಿಂದಲೂ ಸಿದ್ಧವಾಗುವದಿಲ್ಲ. ಆದ್ದರಿಂದ ಅದು ಮಿಥ್ಯಾ ಮತ್ತು ಈ ಮಿಥ್ಯಾತ್ವವು ದುರ್ಘಟ ಎಂಬ ಮೊಂಡುವಾದವು ಸರಿಯಲ್ಲ. ಹೀಗೆ ಬಂಧರೂಪವಾದ ಈ ಸಂಸಾರವು ಸತ್ಯವಾದ್ದರಿಂದ ಅದ್ವೈತಪ್ರಕ್ರಿಯೆಯ ಪ್ರಕಾರ ಅದು ನಿವೃತ್ತವಾಗದೇ ಇರುವದರಿಂದ ಅವರಿಗೆ ಮೋಕ್ಷವೇ ಆಗಲಾರದು ಎಂದೂ ಪ್ರಾಸಂಗಿಕವಾಗಿ ಹೇಳುವರು.

**81. ಅನುಭವಸಿದ್ಧಸ್ಯ ಬಲವದನುಭವಂ ವಿನಾ ಯುಕ್ತಿತಃ ಏವ ಮಿಥ್ಯಾ-ತ್ವಾಂಗೀಕಾರೇ ಆತ್ಮನೋಽಪಿ ಮಿಥ್ಯಾತ್ವಂ ಸ್ಯಾತ್ । ಯುಕ್ತಿಶ್ಚ ಸರ್ವಸ್ಯ ಅನ್ಯಸ್ಯ ಮಿಥ್ಯಾತ್ವಾಂಗೀಕಾರಾತ್ । ದ್ವಿಧಾ ಕಲ್ಪನೇ ಕಲ್ಪನಾಗೌರವಮಿತಿ । ಆತ್ಮಾಧಿಷ್ಠಾನ-ಭ್ರಮಸ್ಯೈವ ಅದೃಷ್ಟೇಃ ತಸ್ಯ ಅಧಿಷ್ಠಾನತ್ವಮಪಿ ನ ಯುಜ್ಯತೇ । ದುರ್ಘಟತ್ವಸ್ಯ ಭೂಷಣತ್ವೇ ದುರ್ಘಟಮಪಿ ಆತ್ಮಮಿಥ್ಯಾತ್ವಂ ಸ್ಯಾದೇವ । ಪ್ರತೀತೇರಪಿ ಅವಿದ್ಯಾ-ಕಾರ್ಯತ್ವಾಂಗೀಕಾರಾತ್ । ತಸ್ಮಾಚ್ಚ ದುರ್ಘಟತ್ವಸ್ಯ ಭೂಷಣತ್ವಾತ್ । ಸತ್ಯಸ್ಯ**

**ಚ ಯುಕ್ತ್ಯಪೇಕ್ಷತ್ವಾತ್ । ಘಟಾದೀನಾಂ ದ್ರಷ್ಟೃತ್ವಂ, ಆತ್ಮನಶ್ಚ ಜಡತ್ವಂ, ದ್ರಷ್ಟುಃ ಅಭಾವೇ ಚ ಪ್ರತೀತಿಃ, ಅಧಿಷ್ಠಾನಂ ವಿನೈವ ಭ್ರಮಃ ಇತ್ಯಾದಿ ವಿರುದ್ಧಂ ಸರ್ವಮಪಿ ಸ್ಯಾತ್ ।**

**ಅನುವಾದ**—(ಮಿಥ್ಯಾತ್ವದ ಸಮರ್ಥನೆಯು ದುರ್ಘಟವಾಗಿರುವದು ಮಿಥ್ಯಾತ್ವಕ್ಕೆ ಭೂಷಣವೇ ಆಗಿದೆ ಎಂಬ ಮೊಂಡುವಾದವನ್ನು ಮೇಲೆ ನಿರಾಕರಿಸಿದರು ಈಗ ಅನುಭವ ಸಿದ್ಧವಾದದ್ದನ್ನು ಕೇವಲ ಯುಕ್ತಿಯಿಂದ 'ಮಿಥ್ಯಾ' ಎಂದು ಸಾಧಿಸುವ ಮೊಂಡುತನ ಹಿಡಿದರೆ ಅನುಭವಸಿದ್ಧವಾದ ಆತ್ಮವೂ 'ಮಿಥ್ಯಾ' ಎಂದು ಹೇಳುವ ಪ್ರಸಂಗ ಬರುವದು ಎಂದು ತೋರಿಸುವರು) ಅನುಭವ ಅಂದರೆ ಪ್ರತ್ಯಕ್ಷದಿಂದ ಸಿದ್ಧವಾದದ್ದನ್ನು ಅದಕ್ಕಿಂತ ಪ್ರಬಲವಾದ ಪ್ರತ್ಯಕ್ಷದಿಂದಲ್ಲದೆ ಕೇವಲ ಯುಕ್ತಿಯಿಂದ ಮಿಥ್ಯಾ ಎಂದು ಅಂಗೀಕರಿಸಿದರೆ (ಸಾಕ್ಷಿ ಅನುಭವದಿಂದ ಸಿದ್ಧವಾದ) ಆತ್ಮವೂ ಕೂಡ ಮಿಥ್ಯಾ ಎಂದು ಹೇಳುವ ಪ್ರಸಂಗ ಬರುವದು ಆತ್ಮವನ್ನು ಬಿಟ್ಟು ಇನ್ನುಳಿದ ಎಲ್ಲವೂ ಮಿಥ್ಯಾ ಎಂದು ಅಂಗೀಕರಿಸಿದ್ದೇ ಆತ್ಮವೂ ಕೂಡ ಮಿಥ್ಯಾ ಎಂದು ವಾದಿಸಲು ಯುಕ್ತಿಯಾಗಿದೆ. ಆತ್ಮವೊಂದು ಸತ್ಯ ಇನ್ನುಳಿದವು ಮಿಥ್ಯಾ ಎಂದು ಎರಡು ವಿಧವಾಗಿ ಕಲ್ಪಿಸುವದು ಗೌರವವಾಗುವದು (ಇತರ ವಸ್ತುಗಳ ಭ್ರಮಕ್ಕೆ ಆತ್ಮವು ಅಧಿಷ್ಠಾನವಾಗಿ ಬೇಕು ಆದ್ದರಿಂದ ಅದೊಂದು ಸತ್ಯ ವಾದದ್ದು ಬೇಕು ಎಂಬ ಸಮಾಧಾನವೂ ಸರಿಯಲ್ಲ ಯಾಕೆಂದರೆ ನಿರಧಿಷ್ಠಾನಭ್ರಮ ವನ್ನು ಹೇಳುವ ಬೌದ್ಧಾದಿಗಳ ರೀತ್ಯಾ) ಆತ್ಮವು ಅಧಿಷ್ಠಾನವಾಗಿರುವ ಭ್ರಮವೇ ಇಲ್ಲ. ಆದ್ದರಿಂದ ಅದು ಅಧಿಷ್ಠಾನವಾಗಿ ಬೇಕು ಎಂಬ ವಾದದಲ್ಲಿ ಹುರುಳಿಲ್ಲ ದುರ್ಘಟ ವಾದದ್ದೆಲ್ಲ ಭೂಷಣವು ಎಂದು ಅಂಗೀಕರಿಸುವವರಿಗೆ ಆತ್ಮಮಿಥ್ಯಾತ್ವವು ದುರ್ಘಟವಾದರೂ ಭೂಷಣವೇ ಆಗಿದೆ.

(ಅದ್ವೈತಿಗಳ ಮತದಲ್ಲ) ಪ್ರತೀತಿ ಅಂದರೆ ಅನುಭವವೂ ಕೂಡ ಅವಿದ್ಯೆಯ ಕಾರ್ಯವಾಗಿದ ಅದು ದುರ್ಘಟವಾಗಿರುವದು ಭೂಷಣವೇ ಆಗಿದೆ ಸತ್ಯವಾದದ್ದಕ್ಕೆ ಮಾತ್ರ ಯುಕ್ತಿಯ ಸಮರ್ಥನೆ ಅಗತ್ಯವಿದೆ. ಆದ್ದರಿಂದ ಘಟಾದಿ ಜಡಪದಾರ್ಥಗಳೂ ದ್ರಷ್ಟೃವಾಗಲಿ, ಆತ್ಮವೂ ಜಡವಾಗಲಿ, ದ್ರಷ್ಟೃವು ಇಲ್ಲದಿದ್ದರೂ ಪ್ರತೀತಿ ಅಥವಾ ಅನುಭವ ಬರಲಿ, ಅಧಿಷ್ಠಾನವಿಲ್ಲದೇ ಭ್ರಮ ಬರಲಿ ಹೀಗೆ ವಿರುದ್ಧವಾದದ್ದು ಎಲ್ಲವೂ ಆಗಬಹುದು

**ವಿವರಣೆ**—ಕೇವಲ ಯುಕ್ತಿಯಿಂದ ಅನುಭವವನ್ನು ಅಲ್ಲಗಳೆಯುವದಾದರೆ 'ಆತ್ಮ'ವೂ ಮಿಥ್ಯಾ ಆಗಲಿ, ಆತ್ಮವು ಮಿಥ್ಯಾ ಎಂದಾದರೆ ಅಧಿಷ್ಠಾನವೇ ಇಲ್ಲದೆ ಭ್ರಮ ಬರಲಿ, ಆತ್ಮವೂ ಜಡವಾಗಲಿ, ಇತ್ಯಾದಿ ಅನೇಕ ವಿರುದ್ಧ ಸಂಗತಿಗಳ ಪ್ರಸಂಗ ಬರುವದು ಎಂದು ಮಾರ್ಮಿಕವಾಗಿ ತೋರಿಸಿದ್ದಾರೆ.

82. ಉಪಾಧಿಭೇದಾಂಗೀಕಾರೇ ಹಸ್ತಪಾದಾದ್ಯುಪಾಧಿಭೇದೇಪಿ ತದ್ಗತ-ಸುಖದುಃಖಾದಿಭೋಕ್ತುಃ ಯಥಾ ಭೇದೋ ನ ಪ್ರತೀಯತೇ ಏವಮೇವ ಶರೀರಾದಿಭೇದೇಪಿ ಭೋಕ್ತುಃ ಭೇದೋ ನ ದೃಶ್ಯೇತ । ಸರ್ವದೇಹಗತಸುಖ-ದುಃಖಾದಿಕಮೇಕೇನೈವ ಭುಜ್ಯೇತ.

ಯಥಾ ಚ ಏಕಾಂಗುಲ್ಯಾದ್ಯಪಗಮೇsಪಿ ನ ಮುಕ್ತಿಃ ಏವಮೇಕೋಪಾಧ್ಯ-ಪಗಮೇಪಿ ತಸ್ಯೈವ ಅನಂತೋಪಾಧಿಸಂಬದ್ಧತ್ವಾತ್ ನ ಮುಕ್ತಿಃ ಸ್ಯಾತ್ ।

ಉದ್ಯತಾಯುಧದೋರ್ದಂಡಾಃ ಪತಿತಸ್ವಶಿರೋಕ್ಷಿಭಿಃ ।
ಪಶ್ಯಂತಃ ಪಾತಯಂತಿ ಸ್ಮ ಕಬಂಧಾ ಅಪ್ಯರೀನ್ ಯುಧಿ ॥
ಇತಿ ಭಾರತವಚನಾತ್ ನ ವಿಶ್ಲೇಷಾದ್ ವಿಶೇಷಃ ।

**ಅನುವಾದ**—(ಈ ಹಿಂದೆ ಸತ್ಯವಾದ ಉಪಾಧಿ ಮೂಲಕವಾಗಿ ಭೇದವನ್ನು ಹೇಳುವ ಅದ್ವೈತಿಗಳ ಮತದಲ್ಲಿ ಬದ್ಧರು ಮುಕ್ತರು ಎಂಬ ವ್ಯವಸ್ಥೆಯು ಹೊಂದುವದಿಲ್ಲ ಎಂದು ತೋರಿಸಿದರು ಈಗ ಅವರ ಮತದಲ್ಲಿ ಸುಖದುಃಖಾದಿ ವ್ಯವಸ್ಥೆಯೂ ಕೂಡುವ ದಿಲ್ಲವೆಂದು ತೋರಿಸುವರು) ಉಪಾಧಿಭೇದ ಪ್ರಯುಕ್ತವಾದ ಭೇದವನ್ನು ಅಂಗೀಕರಿಸಿದರೆ ಹಸ್ತಪಾದಾದಿ ಉಪಾಧಿಭೇದಗಳಿದ್ದರೂ ಅವುಗಳಲ್ಲಿ ಉಂಟಾಗುವ ಸುಖದುಃಖಗಳನ್ನು ಅನುಭವಿಸುವವನಲ್ಲಿ ಭೇದವು ಇಲ್ಲದೇ ಇರುವಂತೆ ಶರೀರಭೇದಗಳಿದ್ದರೂ ಅವೆಲ್ಲವುಗಳಲ್ಲಿ ಆಗುವ ಸುಖದುಃಖಗಳನ್ನು ಅನುಭವಿಸುವವರಲ್ಲಿ ಭೇದವು ಇಲ್ಲದೇ ಇರುವ ಪ್ರಸಂಗ ಬರುವದು ಎಲ್ಲ ದೇಹಗಳಲ್ಲಿ ಉಂಟಾಗುವ ಸುಖದುಃಖಗಳನ್ನು ಒಬ್ಬನೇ ಅನುಭವಿಸುವ ಪ್ರಸಂಗ ಬರುವದು

ಅಲ್ಲದೆ, ಹೇಗೆ ಒಂದು ಬೆರಳನ್ನು ಕತ್ತರಿಸಿದರೆ ಮುಕ್ತಿಯಾಗುವದಿಲ್ಲವೋ ಹಾಗೆ ಒಂದು (ಶರೀರಾದಿರೂಪ) ಉಪಾಧಿಯು ಕಳಚಿದರೂ ಅವನಿಗೇ ಇನ್ನೂ ಅನಂತ (ಶರೀರಾದಿರೂಪ) ಉಪಾಧಿಗಳ ಸಂಬಂಧವಿರುವದರಿಂದ ಮುಕ್ತಿಯಾಗಲಾರದು

(ಇನ್ನು ಶರೀರಾದಿರೂಪ ಈ ಉಪಾಧಿಗಳು ಹಸ್ತಪಾದಾದಿಗಳಂತೆ ಸಂಶ್ಲಿಷ್ಟವಾಗಿರದೆ ವಿಶ್ಲಿಷ್ಟವಾಗಿರುವದರಿಂದ ಒಂದರಲ್ಲಿ ಆದ ಸುಖದುಃಖ ಇನ್ನೊಂದರಲ್ಲಿ ಗೋಚರವಾಗುವ ದಿಲ್ಲ ಎಂದು ಹೇಳುವದೂ ಸರಿಯಲ್ಲ ಯಾಕೆಂದರೆ) 'ಕಬಂಧ ಅಂದರೆ ರುಂಡವಿಲ್ಲದ ದೇಹಗಳು ಕತ್ತರಿಸಿ ಜೋತಾಡುತ್ತಿದ್ದ ತಮ್ಮ ತಲೆಯಲ್ಲಿಯ ಕಣ್ಣುಗಳಿಂದ ನೋಡುತ್ತ ಆಯುಧವನ್ನು ಎತ್ತಿದ ತಮ್ಮ ಕೈಗಳಿಂದ ಯುದ್ಧದಲ್ಲಿ ಶತ್ರುಗಳನ್ನು ಕೆಡವುತ್ತಿದ್ದವು' ಎಂದು ಭಾರತದಲ್ಲಿ ಹೇಳಿದ್ದರಿಂದ ಉಪಾಧಿಗಳು ವಿಶ್ಲಿಷ್ಟವಾದ ಮಾತ್ರದಿಂದ ವ್ಯತ್ಯಾಸ ವೇನೂ ಆಗುವುದಿಲ್ಲ (ಭಿನ್ನ ಅವಯವ ಅಥವಾ ಶರೀರಗಳಲ್ಲಿ ಆಗುವ ಸುಖದುಃಖಗಳ ಅನುಸಂಧಾನವು ಒಬ್ಬನಿಗೇ ಆಗಲಿಕ್ಕೆ ಅವುಗಳಲ್ಲಿದ್ದವನ ಸ್ವರೂಪೈಕ್ಯವೇ ಕಾರಣವೇ ಹೊರತು ಅವಯವಗಳ ಸಂಶ್ಲೇಷ ಅಥವಾ ವಿಶ್ಲೇಷ ಕಾರಣವಲ್ಲ. ಆದ್ದರಿಂದ ಒಬ್ಬನೇ ಬ್ರಹ್ಮನು ಸತ್ಯವಾದ ಉಪಾಧಿಗಳಿಂದ ಭಿನ್ನನಾಗಿದ್ದಾನೆ ಎಂದು ಹೇಳುವ ಅದ್ವೈತಿಗಳ

ಮತದಲ್ಲಿ ಎಲ್ಲ ದೇಹಗಳಲ್ಲಿಯು ಸುಖದುಃಖವು ಒಬ್ಬನಿಗೇ ಆಗಲಿ ಎಂಬ ಆಪಾದನೆಯು ಉಳಿದೇ ಉಳಿಯುತ್ತದೆ ಒಂದು ಉಪಾಧಿಯು ನಾಶದಿಂದ ಮುಕ್ತಿಯಾಗುವದಿಲ್ಲ ಎಂಬ ಆಪಾದನೆಯೂ ಉಳಿಯುತ್ತದೆ )

**ವಿವರಣೆ**—ಬ್ರಹ್ಮನೇ ಸತ್ಯವಾದ ಉಪಾಧಿಗಳಿಂದ ನಾನಾ ಜೀವರಾಗುತ್ತಾನೆ ಎಂಬ ಮತದ ಪ್ರಸ್ತಾಪ ಹಿಂದೆ ಬಂದಿತ್ತು ಆ ಮತದಲ್ಲಿ ಎಲ್ಲ ಉಪಾಧಿಗಳೂ ನಾಶವಾಗುವವರೆಗೆ ಮುಕ್ತಿ ದೊರೆಯುವದಿಲ್ಲ ಅಂದಮೇಲೆ ತಮ್ಮ ತಮ್ಮ ಉಪಾಧಿಗಳನ್ನು ಕಳೆದುಕೊಂಡವರು ಮುಕ್ತರು, ಉಳಿದವರು ಬದ್ಧರು ಎಂಬ ವ್ಯವಸ್ಥೆಯುಳಿಯುವದಿಲ್ಲ. ಅಲ್ಲದೆ ಒಳಗಿರುವ ಆತ್ಮದ ಸ್ವರೂಪೈಕ್ಯವಿರುವದರಿಂದ ಒಂದು ಶರೀರಾದಿ ಉಪಾಧಿಮೂಲಕವಾಗಿ ಆಗುವ ಸುಖ ದುಃಖಗಳು ಇನ್ನಿತರ ಶರೀರಾದಿ ಉಪಾಧಿಗಳಿದ್ದಲ್ಲಿಯೂ ಆಗಲಿ, ಒಬ್ಬನು ಎಲ್ಲರ ಸುಖದುಃಖಗಳನ್ನೂ ಅನುಭವಿಸಲಿ ಎಂಬ ಆಪಾದನೆಗಳುಂಟಾಗಿ ಸುಖದುಃಖ ವ್ಯವಸ್ಥೆಯೂ ಸಾಧ್ಯವಿಲ್ಲ ಎಂದು ಇಲ್ಲಿ ತೋರಿಸಿರುವರು

**83. ಕಿಂಚ ಉಪಾಧಿಃ ಆತ್ಮನಃ ಏಕದೇಶಂ ಗ್ರಸತಿ ಉತ ಸರ್ವಮಾತ್ಮಾನಮ್ । ಏಕದೇಶಾಂಗೀಕಾರೇ ಸಾವಯವತ್ವಮ್ । ಸಾವಯವಸ್ಯ ಚ ಅನಿತ್ಯತ್ವಂ ತೈರಂಗೀಕೃತಮ್ । ಸರ್ವಗ್ರಾಸೇ ಚ ನ ಉಪಾಧಿಃ ಭೇದಕಃ ಸ್ಯಾತ್ । ಉಪಾಧಿಕೃತಾಂಶಕಲ್ಪನೇ ತದುಪಾಧಿಕೃತತ್ವೇ ಆತ್ಮಾಶ್ರಯತ್ವಮ್ । ಉಪಾಧ್ಯಂತರಕಲ್ಪನೇ ಅನವಸ್ಥಾ ।**

**ನ ಚ ಈಶ್ವರಸ್ಯ ಸರ್ವಗತತ್ವಾತ್ ಔಪಾಧಿಕಭೇದೋ ಬ್ರಹ್ಮಣಾ ಭವತಿ । ನ ಹಿ ದೇಶತಃ ಕಾಲತಃ ಅಪರಿಚ್ಛಿನ್ನಯೋಃ ಔಪಾಧಿಕಭೇದಃ ದೃಷ್ಟಃ । ಸರ್ವೋಪಾಧಿಗತತ್ವಾಚ್ಚ ಏಕಸ್ಯೈವ ಈಶ್ವರಸ್ಯ ಭೇದಸ್ಯ ಮಿಥ್ಯಾತ್ವಾತ್ ಹಸ್ತಪಾದಾದಿಭೇದೇಽಪಿ ಭೋಕ್ತುಃ ಏಕತ್ವಂ ಸರ್ವಸುಖದುಃಖಾದಿ ಭೋಕ್ತೃತ್ವಮೀಶ್ವರಸ್ಯೈವ ಸ್ಯಾತ್ ।**

**ದೇಶತಃ ಕಾಲತಶ್ಚ ಅಪರಿಚ್ಛಿನ್ನಯೋಃ ಔಪಾಧಿಕಭೇದಾಭಾವಾದೇವ ದುಃಖಿನಃ ಅನ್ಯತ್ ಶುದ್ಧಂ ಬ್ರಹ್ಮ ನ ಸಿದ್ಧ್ಯತಿ । ಅತಃ ಸ್ವಾಭಾವಿಕಃ ಸಂಸಾರಃ ಇತಿ ಅನಿವೃತ್ತಿರೇವ ಸ್ಯಾತ್ ।**

**ಅನುವಾದ**—(ಸತ್ಯವಾದ ಉಪಾಧಿಗಳಿಂದ ಭೇದವನ್ನು ಹೇಳಿದರೆ ಬದ್ಧ ಮುಕ್ತ ವ್ಯವಸ್ಥೆಯೂ ಸುಖದುಃಖವ್ಯವಸ್ಥೆಯೂ ಆಗುವದಿಲ್ಲವೆಂದು ಮೇಲೆ ಹೇಳಿದರು ಈಗ ಇಂಥ ಉಪಾಧಿಗಳಿಂದ ಬ್ರಹ್ಮನಲ್ಲಿ ಭೇದವನ್ನೇ ಹೇಳಲು ಬರುವದಿಲ್ಲ ಎಂದು ಹೇಳುವರು ) **ಆತ್ಮನಲ್ಲಿ (ಬ್ರಹ್ಮನಲ್ಲಿ) ಭೇದವನ್ನುಂಟುಮಾಡುವ ಈ ಉಪಾಧಿಯು ಅವನ ಏಕದೇಶಕ್ಕೆ ಅಂಟುವದೋ ಅಥವಾ ಸರ್ವಾತ್ಮನಾ ಅಂಟುವದೋ ? ಏಕದೇಶಕ್ಕೆ ಅಂಟುವದೆಂದು ಹೇಳಿದರೆ ಆತ್ಮನು ಅವಯವವುಳ್ಳವನು ಎಂದಾಗುವದು. ಅವಯವವುಳ್ಳದ್ದು ಅನಿತ್ಯ**

ಎಂದು ಅವರು ಅಂಗೀಕರಿಸಿರುವರು (ಆದ್ದರಿಂದ ಆತ್ಮನಿಗೆ ಅನಿತ್ಯತ್ವದ ಪ್ರಸಂಗ ಬರುವದು). ಸರ್ವಾತ್ಮನಾ ಅಂಟಿದರೆ ಉಪಾಧಿಯು ಭೇದಕವಾಗುವದಿಲ್ಲ (ಉಪಾಧಿಯು ಆತ್ಮನ ಸರ್ವಾಂಶದಲ್ಲಿಯೂ ಸಂಬಂಧವುಳ್ಳದ್ದಾದರೆ ಅವನಲ್ಲಿ ಭೇದವನ್ನುಂಟುಮಾಡಲಾರದು). ಆತ್ಮನಲ್ಲಿ ಔಪಾಧಿಕವಾದ ಅಂಶಗಳನ್ನು ಕಲ್ಪಿಸಿದರೆ, ಇಂಥ ಔಪಾಧಿಕ ಅಂಶವು ಅದೇ ಉಪಾಧಿಯಿಂದ ಕಲ್ಪಿತವಾಗಿದ್ದರೆ (ಯಾವ ಉಪಾಧಿಯಿಂದ ಭೇದವನ್ನು ಹೇಳಬೇಕಾಗಿದೆಯೋ ಅದೇ ಉಪಾಧಿಯಿಂದ ಅಂಶಗಳೂ ಕಲ್ಪಿತವಾಗಿದ್ದರೆ) ಆತ್ಮಾಶ್ರಯದೋಷ ಬರುವದು (ಅಂದರೆ ತಾನೇ ಅಂಶಗಳನ್ನು ಕಲ್ಪಿಸಿ ತಾನೇ ಭೇದಗಳನ್ನು ಕಲ್ಪಿಸಿದ ಆತ್ಮಾಶ್ರಯ ದೋಷ ಬರುವದು) ಬೇರೆ ಉಪಾಧಿಗಳಿಂದ ಕಲ್ಪಿಸಿದರೆ ಇವುಗಳು ಅಂಶಗಳನ್ನು ಕಲ್ಪಿಸಲು ಅನುಕೂಲಮಾಡಲು ಬೇರೆ ಉಪಾಧಿಗಳು, ಅವಕ್ಕೆ ಮತ್ತೆ ಬೇರೆ ಉಪಾಧಿಗಳು ಎಂಬ ಅನವಸ್ಥಾದೋಷ ಬರುವದು (ಆದ್ದರಿಂದ ಉಪಾಧಿಗಳಿಂದ ಭೇದವನ್ನು ಕಲ್ಪಿಸುವದು ಸಾಧ್ಯವಾಗಲಾರದು)

(ಈ ವರೆಗೆ ಉಪಾಧಿಗಳಿಂದ ಬ್ರಹ್ಮನಲ್ಲಿ ಭೇದವನ್ನು ಕಲ್ಪಿಸಿ ನಾನಾ ಜೀವರಾಗಿರುವದನ್ನು ಹೇಳಲು ಬರುವದಿಲ್ಲವೆಂದು ತೋರಿಸಿದರು. ಇನ್ನು ಮುಂದೆ ಬ್ರಹ್ಮ, ಈಶ್ವರ, ಜೀವ ಎಂಬ ತ್ರಿಸ್ಕಂಧ ವ್ಯವಸ್ಥೆಯನ್ನು ದೂಷಿಸುವರು ) ಈಶ್ವರನೂ ಸರ್ವಗತನಾದ್ದರಿಂದ ಬ್ರಹ್ಮನಿಗೂ ಈಶ್ವರನಿಗೂ ಔಪಾಧಿಕ ಭೇದವನ್ನು ಹೇಳಲು ಬರುವದಿಲ್ಲ ದೇಶ ಮತ್ತು ಕಾಲಗಳಿಂದ ಅಪರಿಚ್ಛಿನ್ನವಾದ ಎರಡು ವಸ್ತುಗಳಿಗೆ ಪರಸ್ಪರ ಔಪಾಧಿಕ ಭೇದವನ್ನು ಹೇಳಲು ಬರುವದಿಲ್ಲ ಅಲ್ಲದೆ ಈಶ್ವರನು ಎಲ್ಲ ಉಪಾಧಿಗಳಲ್ಲಿಯೂ ಇರುವದರಿಂದ, ಭೇದವು ನಿಜವಾಗಿ ಇಲ್ಲದೇ ಇರುವದರಿಂದ, ಹಸ್ತಪಾದಾದಿ ಭೇದಗಳಿದ್ದರೂ ಅನುಭವಿಸುವವನು ಒಬ್ಬನೇ ಇದ್ದಂತೆ, ಈಶ್ವರನಿಗೇ ಎಲ್ಲರ ಸುಖದುಃಖಗಳನ್ನು ಅನುಭವಿಸುವ ಪ್ರಸಂಗ ಬರುವದು.

ಅಲ್ಲದೆ, ದೇಶ ಮತ್ತು ಕಾಲಗಳಿಂದ ಅಪರಿಚ್ಛಿನ್ನರಾದವರಲ್ಲಿ (ಬ್ರಹ್ಮ ಮತ್ತು ಈಶ್ವರರಲ್ಲಿ) ಔಪಚಾರಿಕ ಭೇದವಿಲ್ಲದೇ ಇರುವದರಿಂದ ದುಃಖಿಯಾದ (ಮೇಲೆ ಎಲ್ಲ ಜೀವರ ದುಃಖವನ್ನು ಅನುಭವಿಸುವದರಿಂದ ದುಃಖಿಯೆಂದು ವಿವರಿಸಿದ) ಈಶ್ವರನಿಗಿಂತ ಭಿನ್ನನಾದ ಶುದ್ಧಬ್ರಹ್ಮನು ಸಿದ್ಧನಾಗುವದಿಲ್ಲ ಆದ್ದರಿಂದ ಅವನಿಗೆ ಸ್ವಾಭಾವಿಕವಾದ (ಈ ದುಃಖರೂಪ) ಸಂಸಾರದಿಂದ ನಿವೃತ್ತಿಯೇ ಇಲ್ಲವೆಂದಾಗುವದು

**ವಿವರಣೆ**—ಉಪಾಧಿಗೂ ಆತ್ಮನಿಗೂ ಸಂಬಂಧವನ್ನು ಕಲ್ಪಿಸುವದೇ ಸಾಧ್ಯವಿಲ್ಲದ್ದರಿಂದ (ಏಕದೇಶದಿಂದಲಾಗಲೀ ಸರ್ವಾತ್ಮನಾ ಆಗಲೀ ಸಂಬಂಧವನ್ನು ಹೇಳಲು ಬರುವದಿಲ್ಲವಾದ್ದರಿಂದ) ಬ್ರಹ್ಮನೇ ಉಪಾಧಿಸಂಬಂಧದಿಂದ ನಾನಾ ಜೀವರಾಗುವರು ಎಂಬ ವಾದ ಸಮರ್ಥನೀಯವಲ್ಲ ಎಂದು ಇಲ್ಲಿ ವಿವರಿಸಿರುವರು ಅಲ್ಲದೆ, ಬ್ರಹ್ಮ, ಈಶ್ವರ, ಜೀವ ಎಂಬ ತ್ರಿಸ್ಕಂಧ ವ್ಯವಸ್ಥೆಯೂ ಹೊಂದುವದಿಲ್ಲ. ಉಪಾಧಿಯಿಂದ ಈ ವ್ಯವಸ್ಥೆಯು ಸಾಧ್ಯವಿಲ್ಲ. ಇಬ್ಬರೂ ಸರ್ವಗತರಾದ ಬ್ರಹ್ಮ ಈಶ್ವರರಿಗೆ ಔಪಾಧಿಕ ಭೇದವನ್ನು ಹೇಳಲು ಬರುವದಿಲ್ಲ.

ಸರ್ವತ್ರ ವ್ಯಾಪ್ತರಾದ ಈಶ್ವರನೂ ಬ್ರಹ್ಮನೂ ದುಃಖಿಗಳಾಗಬೇಕಾದ ಪ್ರಸಂಗವೂ ಬರುವದು ಆದ್ದರಿಂದ ಈ ವ್ಯವಸ್ಥೆಯೇ ಸರಿಯಲ್ಲ ಎಂದೂ ವಿವರಿಸುವರು

**84. ಕಿಂಚ ವಿಶಿಷ್ಟಸ್ಯ ಶುದ್ಧಸ್ಯ ವಾ ಸಂಸಾರಃ । ಶುದ್ಧಸ್ಯ ಸಂಸಾರಃ ಇತ್ಯುಕ್ತೌ ಸ್ವವ್ಯಾಹತಿಃ । ವಿಶಿಷ್ಟಸ್ಯ ಇತ್ಯುಕ್ತೌ ವಿಶಿಷ್ಟಃ ಅನ್ಯಃ ಸ ಏವ ವಾ । ಸ ಏವ ಚೇತ್ ಉಕ್ತಃ ದೋಷಃ । ಅನ್ಯಶ್ಚೇತ್ ನಿತ್ಯಃ ಅನಿತ್ಯೋವಾ । ಅನಿತ್ಯಶ್ಚೇತ್ ನಾಶ ಏವ ತಸ್ಯ ನ ಮೋಕ್ಷಃ । ನಿತ್ಯತ್ವೇಚ ಭೇದಸ್ಯ ಸತ್ಯತ್ವಂ ಮೋಕ್ಷೇಪಿ ತಸ್ಯ ಭಾವಾತ್ । ಸ್ವರೂಪಮಾತ್ರಸ್ಯ ಅಭೇದಃ ಉಪಾಧಿಭಿನ್ನ ಏವ ಇತ್ಯಂಗೀಕಾರೇ ಸ್ವರೂಪಮೇವ ಉಪಾಧಿಸಂಬದ್ಧಮಿತಿ ನ ತಸ್ಯ ಶುದ್ಧತ್ವಮ್ । ಅಶುದ್ಧಸ್ವಭಾವಸ್ಯ ನ ಕದಾಚಿತ್ ಶುದ್ಧತ್ವಮಿತಿ ತತ್ಪಕ್ಷಃ । ಉಪಾಧಿಮಿಥ್ಯಾತ್ವಾಂಗೀಕಾರೇ ಚ ಅನ್ಯೋನ್ಯಾಶ್ರಯತ್ವಾದಿ ದೋಷಾಃ ಉಕ್ತಾಃ । ನ ಚ ಅನಾದಿಕರ್ಮಭೇದಾತ್ ಭೇದಃ । ಔಪಾಧಿಕ-ಭೇದಸಿದ್ಧೌ ಕರ್ಮಭೇದಸಿದ್ಧಿಃ ತತ್ಸಿದ್ಧೌ ಚ ತತ್ಸಿದ್ಧಿಃ ಇತಿ ಅನ್ಯೋನ್ಯಾಶ್ರಯತ್ವಾತ್। ಅತ ಅನಂತದೋಷದುಷ್ಟತ್ವಾತ್ ಗ್ರಂಥಬಹುತ್ವಂ ಸ್ಯಾದಿತ್ಯುಪರಮ್ಯತೇ । ಅತಃ ಸರ್ವಪ್ರಮಾಣ ವಿರುದ್ಧತ್ವಾತ್ ನ ಅಭೇದೇ ಶ್ರುತಿತಾತ್ಪರ್ಯಮ್ ।**

**ಅನುವಾದ**—(ಅದ್ವೈತಮತದ ಮೇಲೆ ಇನ್ನೂ ಕೆಲವು ಆಕ್ಷೇಪಗಳನ್ನು ಮಾಡಿ ದೋಷಗಳನ್ನು ತೋರಿಸುವರು) ಸುಖದುಃಖಾನುಭವ ರೂಪವಾದ ಸಂಸಾರವು ವಿಶಿಷ್ಟನಿಗೆ (ಅಂದರೆ ಜೀವನಿಗೆ) ಆಗುವದೋ ಅಥವಾ ಶುದ್ಧಬ್ರಹ್ಮನಿಗೆ ಆಗುವದೋ ? ಶುದ್ಧಬ್ರಹ್ಮನಿಗೆ ಸಂಸಾರವೆಂದು ಹೇಳಿದರ ಸ್ವವ್ಯಾಹತಿ ಬರುವದು (ಅಂದರೆ ಈ ಮಾತಿನಲ್ಲಿಯೇ ಪರಸ್ಪರ ವ್ಯಾಘಾತವಿರುವದು ಶುದ್ಧನಾದವನು ಸಂಸಾರಿಯಾಗಿರಲಾರ, ಸಂಸಾರಿಯಾದವನು ಶುದ್ಧನಾಗಿರಲಾರ. ಆದ್ದರಿಂದ ಇದು ಸ್ವವ್ಯಾಹತಿಯು ) ವಿಶಿಷ್ಟನಾದವನಿಗೆ ಸಂಸಾರ ಎಂದು ಹೇಳಿದರೆ ಈ ವಿಶಿಷ್ಟನು ಶುದ್ಧನಿಂದ ಭಿನ್ನನೋ ಅಥವಾ ಶುದ್ಧನೇ ಆಗಿರುವನೋ ? ಅವನೇ ಆಗಿದ್ದರೆ ಈಗಾಗಲೇ ಹೇಳಿದ ದೋಷ ಬರುವದು (ಶುದ್ಧನು ಸಂಸಾರಿಯೆಂದರೆ ಸ್ವವ್ಯಾಹತಿ ದೋಷ ಬರುವದು) ಈ ವಿಶಿಷ್ಟನು ಶುದ್ಧನಿಂದ ಭಿನ್ನನಾಗಿದ್ದರೆ, ಅವನು ನಿತ್ಯನೋ ಅನಿತ್ಯನೋ ? ಅನಿತ್ಯನಾಗಿದ್ದರೆ ನಾಶವೇ ಅವನ ಮೋಕ್ಷವಾಗುವದು (ಅವನ ಉಪಾಧಿಗಳು ಕಳಚಿದವೆಂದರೆ ಅವನು ನಷ್ಟನೇ ಆಗುವನು ಆದ್ದರಿಂದ ಅವನಿಗೆ ಪುರುಷಾರ್ಥರೂಪವಾದ ಬೇರೆ ಮೋಕ್ಷವಿಲ್ಲ ನಾಶವೇ ಮೋಕ್ಷ ಎಂದು ಅಭಿಪ್ರಾಯವು.) ವಿಶಿಷ್ಟನಾದವನು ನಿತ್ಯನಾದರೆ (ಅವನಿಗೂ ಶುದ್ಧನಿಗೂ ಇರುವ) ಭೇದವು ಸತ್ಯವಾಗುವದು ಮತ್ತು ಅದು ಮೋಕ್ಷದಲ್ಲಿಯೂ ಮುಂದುವರೆಯುವದು

ಇನ್ನು ಜೀವ-ಬ್ರಹ್ಮರ ಸ್ವರೂಪವು ಅಭಿನ್ನವಾಗಿದ್ದು ಉಪಾಧಿಯಿಂದ ಮಾತ್ರ ಅವರು ಭಿನ್ನರು ಎಂದು ಹೇಳಿದರೆ ಸ್ವರೂಪವೇ ಉಪಾಧಿಸಂಬದ್ಧವಾಗುವದು ಎಂದು ಹೇಳಬೇಕಾಗುವದರಿಂದ ಅವನು ಶುದ್ಧನಾಗಿ ಉಳಿಯುವದಿಲ್ಲ ಅಶುದ್ಧಸ್ವಭಾವದ ವಸ್ತುವು ಎಂದೂ ಶುದ್ಧವಾಗುವದಿಲ್ಲ ಎಂಬುದು ಅವರ ಮತವೂ ಆಗಿದೆ (ನಿಮಿತ್ತಾಂತರವಿಲ್ಲದೆ ಸಂಬದ್ಧವಾದ

ಉಪಾಧಿಯು ಸ್ವಾಭಾವಿಕವಾಗುವದರಿಂದ ಸ್ವಾಭಾವಿಕವಾದದ್ದು ಎಂದಿಗೂ ಹೋಗುವದಿಲ್ಲ ವೆಂಬುದು ಎಲ್ಲ ವಾದಿಗಳಿಗೂ ಅಂದರೆ ಅದ್ವೈತಿಗಳಿಗೂ ಕೂಡ ಸಮ್ಮತ ಎಂದು ಅಭಿಪ್ರಾಯ.)

ಉಪಾಧಿಯು ಮಿಥ್ಯಾ ಎಂದು ಅಂಗೀಕರಿಸಿದರೆ (ಮತ್ತೆ ಅದೇ ಮೊಂಡುವಾದವನ್ನು ಮುಂದಿಟ್ಟರೆ) ಅನ್ಯೋನ್ಯಾಶ್ರಯತ್ವಾದಿದೋಷಗಳನ್ನು ಈಗಾಗಲೇ ಹೇಳಿರುವೆವು

(ಆಯಾ ಜೀವರಿಗೆ ಸಂಬಂಧಿಸಿದ) ಅನಾದಿಯಾದ ಕರ್ಮಗಳ ಭೇದದಿಂದ (ಜೀವರ) ಭೇದವನ್ನು ಹೇಳುವೆವು ಎಂಬುದೂ ಸರಿಯಲ್ಲ ಯಾಕೆಂದರೆ (ಜೀವರಲ್ಲಿ) ಔಪಾಧಿಕ ಭೇದವು ಸಿದ್ಧಿಸಿದ ಮೇಲೆ (ಆಯಾ ಜೀವರ) ಕರ್ಮಭೇದವು ಸಿದ್ಧಿಸುವದು, ಕರ್ಮಭೇದವು ಸಿದ್ಧಿಸಿದ ಮೇಲೆ (ನೀವು ಹೇಳುವಂತೆ ಕರ್ಮಭೇದ ಪ್ರಯುಕ್ತವಾಗಿ) ಜೀವರ ಭೇದವು ಸಿದ್ಧಿಸುವುದು ಎಂಬ ಅನ್ಯೋನ್ಯಾಶ್ರಯದೋಷ ಬರುವದು

ಹೀಗೆ (ಮಾಯಾವಾದವು) ಅನಂತದೋಷ ದುಷ್ಟವಾಗಿದ ಗ್ರಂಥ ವಿಸ್ತಾರವಾಗ ಬಾರದೆಂದು (ಇನ್ನೂ ಅನೇಕ ದೋಷಗಳನ್ನು ಹೇಳದೇ) ವಿರಮಿಸುವೆವು

ಹೀಗೆ ಸರ್ವ ಪ್ರಮಾಣಗಳಿಗೂ ವಿರುದ್ಧವಾದ್ದರಿಂದ ಶ್ರುತಿಗೆ ಅಭೇದದಲ್ಲಿ ತಾತ್ಪರ್ಯವಿಲ್ಲ

ವಿವರಣೆ—ಉಪಾಧಿ ವಿಶಿಷ್ಟನಾಗಿ ಬ್ರಹ್ಮನೇ ಜೀವರಾಗುವನು ಎಂಬ ಮತದಲ್ಲಿ ಬ್ರಹ್ಮನಿಗೂ ಸಂಸಾರವನ್ನು ಹೇಳಲು ಬರುವದಿಲ್ಲ, ಜೀವನಿಗೂ ಸಂಸಾರವನ್ನು ಹೇಳಲು ಬರುವದಿಲ್ಲ ವಿಶಿಷ್ಟ ಶುದ್ಧರಿಗೆ ಐಕ್ಯವನ್ನೂ ಹೇಳಲು ಬರುವದಿಲ್ಲ ಭೇದವನ್ನೂ ಹೇಳಲು ಬರುವದಿಲ್ಲ ವಿಶಿಷ್ಟನು ನಿತ್ಯನೆಂದೂ ಹೇಳಲು ಬರುವದಿಲ್ಲ ಅನಿತ್ಯನೆಂದೂ ಹೇಳಲು ಬರುವದಿಲ್ಲ ಉಪಾಧಿಯು ಸತ್ಯವೆಂದೂ ಹೇಳಲು ಬರುವದಿಲ್ಲ, ಮಿಥ್ಯೆಯೆಂದೂ ಹೇಳಲು ಬರುವದಿಲ್ಲ ಆದ್ದರಿಂದ ಈ ವಾದವನ್ನು ಬಿಟ್ಟುಬಿಡುವದೇ ಒಳ್ಳೆಯದು ಎಂದು ತೋರಿಸಿರುವರು 'ಕಥಂ ಚ ಜೀವಪರಮಾತ್ಮೈಕ್ಯೇ ಶ್ರುತಿತಾತ್ಪರ್ಯಂ ಯುಜ್ಯತೇ ಸರ್ವ-ಪ್ರಮಾಣವಿರುದ್ಧತ್ವಾತ್' ಎಂದು ಆರಂಭಿಸಿದ ವಿವೇಚನೆಯನ್ನು 'ಅತಃ ಸರ್ವಪ್ರಮಾಣ-ವಿರುದ್ಧತ್ವಾತ್ ನ ಅಭೇದೇ ಶ್ರುತಿತಾತ್ಪರ್ಯಮ್' ಎಂದು ಉಪಸಂಹಾರ ಮಾಡುವರು.

**85. ಸರ್ವಶಬ್ದಾವಾಚ್ಯಸ್ಯ ಲಕ್ಷಣಾಪಿ ನ ದೃಷ್ಟಾ ಇತಿ ನ ತಸ್ಯ ಶಾಸ್ತ್ರ-ಗಮ್ಯತ್ವಮ್ । ಅತೋ ಅವಾಚ್ಯತ್ವಾತ್ ಅಜ್ಞೇಯತ್ವಾತ್ ಶೂನ್ಯಮೇವ ತದಿತಿ ಪ್ರಾಪ್ತಮ್ । ನ ಚ ಸ್ವೇನಾಪಿ ಜ್ಞೇಯತ್ವಂ ತೈಃ ಉಚ್ಯತೇ । ಕರ್ತೃಕರ್ಮವಿರೋಧ ಇತಿ ಹಿ ತೇ ವದಂತಿ । ನ ಚ ಸ್ವರೂಪಂ ಅನ್ಯದ್ವಾ ಜ್ಞೇಯಂ ಜ್ಞಾತಾರಂ ಚ ವಿನಾ ಜ್ಞಾನಂ ದೃಷ್ಟಮ್ । ಅತೋ ಜ್ಞಾತೃಜ್ಞೇಯಾಭಾವಾತ್ ಜ್ಞಾನಸ್ಯಾಪಿ ಶೂನ್ಯತೈವ । ಅತಃ ಶೂನ್ಯವಾದಾತ್ ನ ಕಶ್ಚಿದ್ ವಿಶೇಷಃ । ನ ಚ ಜ್ಞಾತೃಜ್ಞೇಯ-ರಹಿತಂ ಜ್ಞಾನಂ ಕ್ವಾಪಿ ದೃಷ್ಟಮ್ ।**

**ಅಪ್ರಾಪ್ತತ್ವಾಚ್ಚ ಈಶ್ವರಭೇದಸ್ಯ ನ ಅಭೇದೇ ಶ್ರುತಿತಾತ್ಪರ್ಯಂ ಯುಜ್ಯತೇ ।**

**ಸರ್ವೋತ್ತಮಂ ಸರ್ವದೋಷವ್ಯಪೇತಂ**
**ಗುಣೈರಶೇಷೈಃ ಪೂರ್ಣಮನ್ಯಂ ಸಮಂತಾತ್ ।**
**ವೈಲಕ್ಷಣ್ಯಾತ್ ಜ್ಞಾಪಯಿತುಂ ಪ್ರವೃತ್ತಾಃ**
**ಸರ್ವೇ ವೇದಾ ಮುಖ್ಯತೋ ನೈವ ಚಾನ್ಯತ್ ।** ಇತಿ ಮಹೋಪನಿಷದಿ

**ಅತಃ ಸರ್ವಾಗಮೈರೇವ ಸರ್ವಸ್ಮಾತ್ ಭಿನ್ನತ್ವೇನ ಸರ್ವಸ್ಮಾತ್ ವಿಶಿಷ್ಟತ್ವೇನ ಚ ವಿಜ್ಞೇಯೋ ಭಗವಾನ್ ನಾರಾಯಣಃ ಇತಿ ಸಿದ್ಧಮ್ ॥**

ಇತಿ ಶ್ರೀ ಆನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ
ಶ್ರೀವಿಷ್ಣುತತ್ತ್ವವಿನಿರ್ಣಯೇ ಪ್ರಥಮಃ ಪರಿಚ್ಛೇದಃ

**ಅನುವಾದ** — (ಬ್ರಹ್ಮನು ಅದ್ವೈತಮತದ ಪ್ರಕಾರ ಶ್ರುತಿವಾಚ್ಯನೇ ಅಲ್ಲದ್ದರಿಂದ ಶ್ರುತಿತಾತ್ಪರ್ಯನಾಗಲಾರನು ಅವನಿಂದ ಅಭಿನ್ನವಾದ ಅಭೇದ ಅಥವಾ ಐಕ್ಯವೂ ಶ್ರುತಿತಾತ್ಪರ್ಯವಾಗಲಾರದು ಎಂದು ವಿವರಿಸುವರು) (ಬ್ರಹ್ಮನು ಯಾವ ಶಬ್ದದಿಂದಲೂ ವಾಚ್ಯನಲ್ಲ ಹೀಗೆ ಸರ್ವಶಬ್ದ ಅವಾಚ್ಯನಾದ ಅವನು ಲಕ್ಷಣಾದಿಂದಲೂ ಬೋಧಿತವಾಗ ಲಾರ) ಸರ್ವಶಬ್ದಗಳಿಗೂ ವಾಚ್ಯವಾಗದೇ ಇರುವವರ ವಿಷಯದಲ್ಲಿ ಲಕ್ಷಣಾವೃತ್ತಿಯು ಪ್ರವೃತ್ತವಾಗುವದು ಕಂಡುಬಂದಿಲ್ಲ ಆದ್ದರಿಂದ (ಶಬ್ದಗಳಿಂದ ವಾಚ್ಯನೂ ಲಕ್ಷ್ಯನೂ ಅಲ್ಲದ ಬ್ರಹ್ಮನು) ಶ್ರುತಿಗಳಿಂದ ಗಮ್ಯನಲ್ಲ ಹೀಗೆ ಅವಾಚ್ಯನೂ ಅಜ್ಞೇಯನೂ ಆಗಿದ್ದ ರಿಂದ (ಅದ್ವೈತಿಗಳ) ಬ್ರಹ್ಮನು ಶೂನ್ಯನೇ ಆಗಿದ್ದಾನೆ ಅವನು (ಸ್ವಯಂ ಪ್ರಕಾಶನಾದ್ದ ರಿಂದ) ತನಗೆ ತಾನೇ ಜ್ಞೇಯನಾಗಿರುವನು (ತನ್ನನ್ನು ತಾನೇ ತಿಳಿದುಕೊಳ್ಳುವನು) ಎಂದೂ ಅವರು ಹೇಳಲು ಬರುವದಿಲ್ಲ ಯಾಕಂದರೆ (ಒಂದೇ ವಸ್ತುವಿನಲ್ಲಿ) ಕರ್ತೃತ್ವ ಮತ್ತು ಕರ್ಮತ್ವ ಎರಡೂ ಇರುವದು ವಿರುದ್ಧವಾದದ್ದು ಎಂದು ಅವರು ಹೇಳುವರು (ಬ್ರಹ್ಮನ) ಸ್ವರೂಪವಾಗಲೀ ಅಥವಾ ಬೇರೆ ಯಾವದೇ ವಸ್ತುವಾಗಲೀ ಜ್ಞೇಯುವಾದದ್ದೂ (ಜ್ಞಾನಕ್ಕೆ ವಿಷಯುವಾದದ್ದೂ) ಜ್ಞಾತೃವೂ ಇಲ್ಲದೇ ಜ್ಞಾನವಾಗುವದು ಸಾಧ್ಯವಿಲ್ಲ (ಬ್ರಹ್ಮನೇ ಕರ್ತಾ, ಕರ್ಮ ಎರಡೂ ಆಗುವದು ಸಾಧ್ಯವಿಲ್ಲದ್ದರಿಂದ ಅವನ ಸ್ವರೂಪವು ಜ್ಞೇಯು ಅಂದರೆ ಜ್ಞಾನವಿಷಯುವಾಗಲಾರದು, ಬೇರೆ ಎಲ್ಲವೂ ಮಿಥ್ಯಾ ಆದ್ದರಿಂದ ಅವೂ ಜ್ಞೇಯು ವಾಗಲಾರವು. ಬ್ರಹ್ಮನು ಕೇವಲ ಜ್ಞಾನಸ್ವರೂಪನು, ಜ್ಞಾತೃವಲ್ಲ ಆದ್ದರಿಂದ ಅದ್ವೈತ ಮತದ ಪ್ರಕಾರ ಜ್ಞೇಯು, ಜ್ಞಾತಾ ಎರಡೂ ಇಲ್ಲ ಅಂದಮೇಲೆ ಜ್ಞಾನವಾಗುವದು ಸಾಧ್ಯವಿಲ್ಲ) ಹೀಗೆ ಜ್ಞಾತೃ, ಜ್ಞೇಯು ಎರಡೂ ಇಲ್ಲದ್ದರಿಂದ ಶೂನ್ಯವಾದಕ್ಕೂ ಅದ್ವೈತ ಮತಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಜ್ಞಾತೃ ಮತ್ತು ಜ್ಞೇಯುಗಳಿಲ್ಲದೆ ಜ್ಞಾನ ವುಂಟಾಗುವದು ಎಲ್ಲಿಯೂ ಕಂಡುಬಂದಿಲ್ಲ

ಅಲ್ಲದೆ, (ಈಶ್ವರನು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿಷಯುನಾಗದೇ ಇದ್ದದ್ದರಿಂದ) ಈಶ್ವರ ಭೇದವು ಪ್ರಾಪ್ತವಾಗದೇ ಇದ್ದದ್ದರಿಂದ (ಅದನ್ನು ಪ್ರತಿಷೇಧಿಸುವ) ಅಭೇದವಲ್ಲಿ

ಶ್ರುತಿಯು ತಾತ್ಪರ್ಯವನ್ನು ಹೇಳಲು ಬರುವದಿಲ್ಲ ('ದ್ವಾ ಸುಪರ್ಣಾ' ಇತ್ಯಾದಿ ಶ್ರುತಿಗಳಿಂದ ಪ್ರಾಪ್ತವಾದ ಭೇದವನ್ನಂತೂ ನಿಷೇಧಿಸಲು ಬರುವದಿಲ್ಲ ಭೇದವು ಪ್ರಮಾಣಾಂತರ ಅಪ್ರಾಪ್ತವಾದ್ದರಿಂದ ಈ ಭೇದಶ್ರುತಿಗಳು ಅನುವಾದಕವಲ್ಲ )

' ಸರ್ವೋತ್ತಮನೂ ಸರ್ವದೋಷವರ್ಜಿತನೂ ಸರ್ವಗುಣ ಪರಿಪೂರ್ಣನೂ ಇನ್ನಿತರ ಸಮಸ್ತಗಳಿಂದ ಭಿನ್ನನೂ ಎಂದು (ಪರಮಾತ್ಮನನ್ನು) ವೈಲಕ್ಷಣ್ಯದಿಂದ ಮುಖ್ಯವಾಗಿ ಬೋಧಿಸುವದಕ್ಕಾಗಿ ಸಕಲ ವೇದಗಳು ಪ್ರವೃತ್ತವಾಗಿವೆ ಅವುಗಳಿಗೆ ಬೇರೆ (ಅಭೇದಾದಿ) ತಾತ್ಪರ್ಯವಿಲ್ಲ ' ಎಂದು ಮಹೋಪನಿಷತ್ತಿನಲ್ಲಿ ಹೇಳಿದ ಆದ್ದರಿಂದ ಸದಾಗಮಗಳಿಂದ ಎಲ್ಲಕ್ಕಿಂತಲೂ ಭಿನ್ನನಾಗಿಯೂ (ಅಂದರೆ ಕ್ಷರ ಮತ್ತು ಅಕ್ಷರಗಳಿಗಿಂತ ಭಿನ್ನನೂ ಉತ್ತಮನೂ ಆಗಿಯೂ) ಎಲ್ಲಕ್ಕಿಂತಲೂ ವಿಶಿಷ್ಟನಾಗಿಯೂ (ಅಂದರೆ ನಿರ್ದೋಷ ಅಶೇಷ ಸದ್ಗುಣನಾಗಿಯೂ) ಭಗವಾನ್ ನಾರಾಯಣನೇ ತಿಳಿಗುಬರುವನು ಎಂದು ಸ್ಥಿರವಾಯಿತು.

**ವಿವರಣೆ**—ಶ್ರುತಿಗಳಿಗೆ ಅಭೇದದಲ್ಲಿ ತಾತ್ಪರ್ಯವಿಲ್ಲ ಎಂಬುದನ್ನು ಆಯಾ ಶ್ರುತಿಗಳ ಅರ್ಥವನ್ನು ನಿರ್ಣಯಿಸಿ ಮೇಲೆ ಹೇಳಿದರು. ಇಲ್ಲಿ ಬ್ರಹ್ಮನು ಶಕ್ತಿ, ಲಕ್ಷಣಾ, ಗೌಣೀ ಇತ್ಯಾದಿ ಯಾವದೇ ವೃತ್ತಿಯಿಂದ ಬೋಧಿತನೇ ಆಗದೇ ಇರುವದರಿಂದ ಸರ್ವಶಬ್ದಾವಾಚ್ಯನಾದ ಅವನು ಶ್ರುತಿತಾತ್ಪರ್ಯವಿಷಯನೇ ಆಗಲಾರ ಎಂದು ತೋರಿಸಿರುವರು ಅಲ್ಲದೆ ಜ್ಞಾತೃ-ಜ್ಞೇಯ-ರಹಿತವಾದ ಜ್ಞಾನವೇ ಸಾಧ್ಯವಿಲ್ಲವಾದ್ದರಿಂದ ಅವನು ಅಜ್ಞೇಯನೇ ಆಗಿದ್ದಾನೆ ಪ್ರತ್ಯಕ್ಷಾದಿ ಪ್ರಮಾಣಗಳಿಂದಾಗಲೀ, ಶ್ರುತಿಯಿಂದಾಗಲೀ, ಸ್ವಯಂಪ್ರಕಾಶನೆಂದಾಗಲೀ ಅವನ ಜ್ಞಾನವೇ ಸಾಧ್ಯವಿಲ್ಲ. ಆದ್ದರಿಂದ ಅವನು ಶೂನ್ಯಸಮನು, ಅವನ ಜ್ಞಾನವೂ ಶೂನ್ಯಸಮ ಆದ್ದರಿಂದ ಅವನಿಂದ ಅಭಿನ್ನವಾದ ಅಭೇದ ಅಥವಾ ಐಕ್ಯವೂ ಶ್ರುತಿ ತಾತ್ಪರ್ಯವಿಷಯವಲ್ಲ ಎಂದು ವಿವರಿಸುವರು

ಇನ್ನು ಅದ್ವೈತಿಗಳಿಗೆ ಅಭಿಮತವಾದ ಅಭೇದಶ್ರುತಿಗಳು ಭೇದವನ್ನು ನಿಷೇಧಿಸುವದೂ ಸಾಧ್ಯವಿಲ್ಲ. ಭೇದವು ಪ್ರತ್ಯಕ್ಷಾದಿಪ್ರಮಾಣಗಳಿಂದ ಪ್ರಾಪ್ತವೇ ಆಗಿಲ್ಲ ಶ್ರುತಿಯಿಂದ ಪ್ರಾಪ್ತವಾದದ್ದನ್ನು ನಿಷೇಧಿಸಲು ಬರುವದಿಲ್ಲ. ಆದ್ದರಿಂದಲೂ ಶ್ರುತಿಗಳಿಗೆ ಅಭೇದದಲ್ಲಿ ತಾತ್ಪರ್ಯವಿಲ್ಲ.

ಜೀವೇಶ್ವರಾಭೇದದಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲವೆಂದು ಶ್ರುತಿಯೇ (ಮಹೋಪನಿಷತ್ತು) ಹೇಳುತ್ತದೆ. ಆದ್ದರಿಂದ ಸರ್ವೋತ್ತಮನೂ ಸರ್ವವಿಲಕ್ಷಣನೂ ಸರ್ವಗುಣಪರಿಪೂರ್ಣನೂ ಸರ್ವದೋಷವಿದೂರನೂ ಆದ ಭಗವಾನ್ ನಾರಾಯಣನೇ ಸಕಲಶ್ರುತಿಪ್ರತಿಪಾದಿತನಾಗಿದ್ದಾನೆ.

ಇತಿ ಶ್ರೀಜಯತೀರ್ಥಗುರ್ವಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀವೆಂಕಟೇಶದೇವರ ಅನುಗ್ರಹದಿಂದ ಪಾಂಡುರಂಗಿ ವಮ್ಮಣ್ಣಾಚಾರ್ಯಸುತ ಕೃಷ್ಣಾಚಾರ್ಯನು ಯಥಾಮತಿಮಾಡಿದ ಶ್ರೀವಿಷ್ಣುತತ್ತ್ವವಿನಿರ್ಣಯ ಮೂಲದ ಕನ್ನಡ ಅನುವಾದ ಮತ್ತು ಟೀಕಾದ ಸಾರಸಂಗ್ರಹರೂಪವಾದ ಕನ್ನಡ ವಿವರಣೆಯಲ್ಲಿ ಪ್ರಥಮ ಪರಿಚ್ಛೇದವು ಮುಗಿಯಿತು

# ದ್ವಿತೀಯ ಪರಿಚ್ಛೇದಃ

86. ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ ।
ಲಕ್ಷ್ಮೀಃ ಅಕ್ಷರದೇಹತ್ವಾತ್ ಅಕ್ಷರಾ ತತ್ಪರೋ ಹರಿಃ ॥
ಸ್ವಾತಂತ್ರ್ಯಶಕ್ತಿವಿಜ್ಞಾನಸುಖಾದ್ಯೈಃ ಅಖಿಲೈಃ ಗುಣೈಃ ।
ನಿಸ್ಸೀಮತ್ವೇನ ತೇ ಸರ್ವೇ ತದ್ವಶಾಃ ಸರ್ವದೈವ ಚ ॥
ಸರ್ಗಸ್ಥಿತಿಕ್ಷಯಯತಿಪ್ರಕಾಶಾವೃತಿಬಂಧನಮ್ ।
ಸರ್ವಕ್ಷರಾಣಾಮೇಕಃ ಸ ಕುರ್ಯಾತ್ ಸಾತ್ವಿಕಮೋಕ್ಷಣಮ್ ।
ಸರ್ಗಸ್ಥಿತಿಯತಿಜ್ಯೋತಿರ್ನಿತ್ಯಾನಂದಪ್ರದೋಽಕ್ಷರೇ ।
ಚೇಷ್ಟಾಪ್ರದಶ್ಚ ಸರ್ವೇಷಾಮೇಕ ಏವ ಪರೋ ಹರಿಃ ॥
ತಸ್ಯ ನಾನ್ಯೋಽಸ್ತಿ ಸರ್ಗಾದಿಕರ್ತಾ ನಿರ್ದೋಷಕಶ್ಚ ಸಃ ॥ ಇತಿ ಪರಮಶ್ರುತಿಃ
ಬ್ರಹ್ಮಶೇಷಸುಪರ್ಣೇಶಶಕ್ರಸೂರ್ಯಗುಹಾದಯಃ ।
ಸರ್ವೇಕ್ಷರಾ ಅಕ್ಷರಾ ತು ಶ್ರೀರೇಕಾ ತತ್ಪರೋ ಹರಿಃ ॥ ಇತಿ ಸ್ಕಾಂದೇ

ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ । ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತ ವಾ ಉ । ಅಹಂ ಜನಾಯ ಸಮದಂ ಕೃಣೋಮಿ ಅಹಂ ದ್ಯಾವಾ ಪೃಥಿವೀ ಆವಿವೇಶ । ಅಹಂ ಸುವೇ ಪಿತರಮಸ್ಯ ಮೂರ್ಧನ್ ಮಮ ಯೋನಿಃ ಅಪ್ಸು ಅಂತಃಸಮುದ್ರೇ ।

ಯಮಂತಃ ಸಮುದ್ರೇ ಕವಯೋ ವಯಂತಿ ಯದಕ್ಷರೇ ಪರಮೇ ಪ್ರಜಾಃ । ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಮ್ ।

ಯದೋಷಧೀಭಿಃ ಪುರುಷಾನ್ ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ । ಅತಃ ಪರಂ ನಾನ್ಯದಣೀಯಸಂ ಹಿ ಪರಾತ್ ಪರಂ ಯನ್ಮಹತೋ ಮಹಾಂತಮ್ । ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ।

ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ ಪರಮಂ ಕವೀನಾಮ್ ।

ಅಸ್ಯ ದೇವಸ್ಯ ಮೀಳ್ಹುಷಃ ವಯಾ ವಿಷ್ಣೋರೇಷಸ್ಯ ಪ್ರಭೃತೇ ಹವಿರ್ಭಿಃ । ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾ ವಿರಾವತ್ ।

ಅನುವಾದ—(ಪ್ರಥಮ ಪರಿಚ್ಛೇದದಲ್ಲಿ ವಿಷ್ಣುವೇ ಸದಾಗಮಗಳಿಂದ ಪ್ರತಿಪಾದ್ಯನು ಎಂದು ಸಮರ್ಥಿಸಿದರು. ಇದನ್ನು ಸಮರ್ಥಿಸುವಾಗ ಅವನು ಸರ್ವೋತ್ತಮನೂ ಸರ್ವಗುಣ

ಪರಿಪೂರ್ಣನೂ ಸರ್ವದೋಷವಿವರ್ಜಿತನೂ ಎಂಬುದನ್ನೂ ವಿವರಿಸಿದರು ಈಗ ವಿಶೇಷ ಶ್ರುತಿ-ಸ್ಮೃತಿವಚನಗಳನ್ನು ಉಲ್ಲೇಖಿಸಿ ಅವನು ಕ್ಷರ ಮತ್ತು ಅಕ್ಷರಗಳಿಗಿಂತ ಉತ್ತಮನು ಎಂಬುದನ್ನು ವಿವರಿಸುವರು) ಚತುರ್ಮುಖಬ್ರಹ್ಮದೇವರು, ರುದ್ರದೇವರು ಮತ್ತು ಇನ್ನಿತರ ಎಲ್ಲ ದೇವತೆಗಳೂ (ಇತರ ಸಮಸ್ತಜೀವರೂ) ಇವರ ಶರೀರವು ನಾಶಹೊಂದುವವದರಿಂದ 'ಕ್ಷರ' ಎನಿಸಿಕೊಳ್ಳುತ್ತಾರೆ. (ಕ್ಷರ ಅಂದರೆ ನಾಶ ಹೊಂದುವದು ಎಂ ು ಅರ್ಥ) ಮಹಾ ಲಕ್ಷ್ಮೀದೇವಿಯು ಶರೀರವು ನಾಶಹೊಂದದೇ ಇರುವದರಿಂದ ಅವಳು 'ಅಕ್ಷರ' ಎನಿಸಿಕೊಳ್ಳುತ್ತಾಳೆ ಹರಿಯು ಈ ಎರಡಕ್ಕಿಂತಲೂ ಉತ್ತಮನು ಸ್ವಾತಂತ್ರ್ಯ, ಶಕ್ತಿ, ಜ್ಞಾನ, ಸುಖ ಇತ್ಯಾದಿ ಎಲ್ಲ ಗುಣಗಳೂ (ಹರಿಯಲ್ಲಿ) ಅಪರಿಮಿತವಾಗಿರುವದರಿಂದ ಲಕ್ಷ್ಮೀ ಚತುರ್ಮುಖ ಬ್ರಹ್ಮಾದಿಗಳು ಯಾವಾಗಲೂ ಅವನಿಗೆ ಅಧೀನರಾಗಿರುತ್ತಾರೆ ಸೃಷ್ಟಿ, ಸ್ಥಿತಿ, ನಾಶ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಸಾತ್ತ್ವಿಕಜೀವರಿಗೆ ಮೋಕ್ಷ ಇವೆಲ್ಲವನ್ನೂ ಅವನೊಬ್ಬನೇ (ಹರಿಯೊಬ್ಬನೇ) ಎಲ್ಲ ಕ್ಷರರಿಗೂ ಮಾಡುವನು ಅಕ್ಷರಳಾದ ಲಕ್ಷ್ಮೀ ದೇವಿಗೂ ಕೂಡ ಸರ್ಗ ಅಂದರೆ ಪ್ರಾದುರ್ಭಾವ, ಸ್ಥಿತಿ ಅಂದರೆ ಎಂದಿಗೂ ದೇಹನಾಶವಿಲ್ಲದೇ ಇರುವದು, ಯತಿ ಅಂದರೆ ಪರಮಾತ್ಮನ ಆಜ್ಞೆಯನ್ನು ಯಾವಾಗಲೂ ಅನುಸರಿಸುವದು, ಜ್ಯೋತಿ ಅಂದರೆ ಭಗವದಿತರ ಸರ್ವದ ಸಾಕ್ಷಾತ್ಕಾರ ಯಾವಾಗಲೂ ಇರುವದು, ನಿತ್ಯವಾದ ಆನಂದ ಇವುಗಳನ್ನು ಕೊಡುವನು ಕ್ಷರ, ಅಕ್ಷರ ಈ ಎಲ್ಲರಿಗೂ ಸರ್ವ ವಿಧವಾಗಿ ಪ್ರೇರಕನು ಹರಿಯೊಬ್ಬನೇ ಆಗಿದ್ದಾನೆ ಅವನನ್ನು ಬಿಟ್ಟು ಬೇರೆ ಯಾರೂ ಸೃಷ್ಟ್ಯಾದಿಕರ್ತರಲ್ಲ. ಅವನೇ ಸೃಷ್ಟ್ಯಾದಿಕರ್ತನು ಮತ್ತು ನಿರ್ದೋಷನು ಎಂದು ಪರಮಶ್ರುತಿಯಲ್ಲಿ ಹೇಳಿದೆ

ಚತುರ್ಮುಖ ಬ್ರಹ್ಮದೇವರು, ಶೇಷ, ಗರುಡ, ರುದ್ರ, ಇಂದ್ರ, ಸೂರ್ಯ, ಗುಹ ಇತ್ಯಾದಿಗಳೆಲ್ಲರೂ ಕ್ಷರರು, ಲಕ್ಷ್ಮೀದೇವಿಯು ಅಕ್ಷರಳು, ಇವೆರಡಕ್ಕಿಂತಲೂ ಶ್ರೇಷ್ಠನಾದವನು ಹರಿಯು ಎಂದು ಸ್ಕಾಂದಪುರಾಣದಲ್ಲಿ ಹೇಳಿದ

ನಾನು ಯಾರನ್ನು ರುದ್ರನನ್ನಾಗಿ ಮಾಡಲು ಇಚ್ಛಿಸುವೆನೋ ಅವನನ್ನು ರುದ್ರನನ್ನಾಗಿ ಮಾಡುವೆನು, ಯಾರನ್ನು ಚತುರ್ಮುಖಬ್ರಹ್ಮನನ್ನಾಗಿ ಮಾಡಲು ಇಚ್ಛಿಸುವೆನೋ ಅವನನ್ನು ಚತುರ್ಮುಖಬ್ರಹ್ಮನನ್ನಾಗಿ ಮಾಡುವೆನು ಯಾರನ್ನು ಮೇಧಾವಿಯಾದ ಋಷಿಯನ್ನು ಮಾಡಲು ಇಚ್ಛಿಸುವೆನೋ ಅವನನ್ನು ಅಂಥ ಋಷಿಯ ನ್ನಾಗಿ ಮಾಡುವೆನು

ಶರವೇ ಅಂದರೆ ಹಿಂಸಕನಾದ, ಬ್ರಹ್ಮದ್ವಿಷೇ ಅಂದರೆ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದ, ರುದ್ರನನ್ನು ದಂಡಿಸಲು ನಾನು ಧನುಷ್ಯವನ್ನು ಹೂಡುವೆನು. ನಾನು ಜನರಿಗೆ ಸಂತೋಷವನ್ನುಂಟುಮಾಡುವೆನು. ನಾನು ದ್ಯಾವಾ ಪೃಥಿವೀ ಇತ್ಯಾದಿ ಎಲ್ಲ ಲೋಕಗಳನ್ನೂ ಧಾರಣೆಮಾಡುವದಕ್ಕೋಸ್ಕರ ಪ್ರವೇಶಿಸುವೆನು ಈ ಜಗತ್ತಿಗೆ ತಂದೆಯಾದ ಚತುರ್ಮುಖಬ್ರಹ್ಮನನ್ನು ಹಿರಿಯ ದೇವತೆಯಾಗಿ ಹಡೆಯುವೆನು ಇಂಥ ನನಗೆ ಕಾರಣಭೂತನಾದವನು (ಭಗವಾನ್ ನಾರಾಯಣನು) ಸಮುದ್ರದಲ್ಲಿ ನೀರಿನ ಮೇಲೆ ಇರುವನು. (ಎಂದು ಅಂಭ್ರಣೀಸೂಕ್ತದಲ್ಲಿ ಲಕ್ಷ್ಮೀದೇವಿಯು ಹೇಳುವಳು).

ಅಂತಃಸಮುದ್ರದಲ್ಲಿದ್ದ ಯಾರನ್ನು ಜ್ಞಾನಿಗಳೂ ಕೂಡ ಸ್ವಲ್ಪಮಾತ್ರ ತಿಳಿದಿರುವರೋ, ಅಕ್ಷರನಾದ ಯಾರಿಗೆ ಎಲ್ಲ ಪ್ರಜೆಗಳೂ ಅಧೀನರಾಗಿರುವರೋ, ಜಗತ್ತಿಗೇ ತಾಯಿಯಾದ ಲಕ್ಷ್ಮೀದೇವಿಯು ಯಾರಿಂದ ಜನಿಸಿರುವಳೋ, ಯಾರು ತೋಯೇನ ಅಂದರೆ ಅವರವರ ಕರ್ಮಗಳಿಗನುಸರಿಸಿ (ಅಥವಾ ತನ್ನ ಮಹಿಮೆಯಿಂದ, ಅಥವಾ ತೋಯದಿಂದ ಉಪಲಕ್ಷಿತ ವಾದ ಎಲ್ಲ ಭೂತಗಳಿಂದ ಸಹಿತರನ್ನಾಗಿ) ಜೀವರನ್ನು ಪೃಥಿವ್ಯಾದಿ ಲೋಕಗಳಲ್ಲಿ ಸೃಷ್ಟಿಸಿದನೋ, ಯಾರು ಲತಾದಿ ಔಷಧಿಗಳಲ್ಲಿಯೂ ಪುರುಷರಲ್ಲಿಯೋ ಪಶುಗಳಲ್ಲಿಯೋ ಹೀಗೆ ಚರಾಚರಭೂತಗಳಲ್ಲಿ (ಅವುಗಳಿಗೆ) ಪ್ರೇರಣೆ ಮಾಡಲು ಪ್ರವೇಶಿಸುವನೋ, ಯಾರಿಗಿಂತ ಶ್ರೇಷ್ಠವಾದದ್ದು ಯಾವದೂ ಇಲ್ಲವೋ, ಯಾವದು ಉತ್ತಮಕ್ಕಿಂತ ಉತ್ತಮವಾದದ್ದೂ ಮಹತ್ತಿಗಿಂತ ಮಹತ್ತಾದದ್ದೂ ಆಗಿರುವದೋ, ಯಾವನು ಏಕ ಅಂದರೆ ಕೇವಲ, ಅವ್ಯಕ್ತ ಅಂದರೆ ಅತೀಂದ್ರಿಯ, ಅನಂತರೂಪ, ವಿಶ್ವ ಅಂದರೆ ಪೂರ್ಣ, ಪುರಾಣ, ತಮಸಃ ಪರಸ್ತಾತ್ ಅಂದರೆ ಪ್ರಕೃತಿಯನ್ನು ಮೀರಿದ್ದು (ಅಥವಾ ಅಜ್ಞಾನವನ್ನು ಮೀರಿದ್ದು) ಆಗಿರುವದೋ, ಯಾವದು ಋತ ಅಂದರೆ ಯಥಾರ್ಥಜ್ಞಾನರೂಪವೂ ಸತ್ಯ ಅಂದರೆ ಜ್ಞಾನಪೂರ್ವಕ ಕ್ರಿಯಾ ಉಳ್ಳದ್ದು ಎಂದು ಹೇಳುವರೋ, ಅದೇ ಜ್ಞಾನಿಗಳು ಹೇಳುವ ಪರಮ ಬ್ರಹ್ಮವು

ಮೀಳ್ಹುಷಃ ಅಂದರೆ ಭಕ್ತರ ಅಭೀಷ್ಟಗಳನ್ನು ಸುರಿಸುವ, ಏಷಸ್ಯ ಅಂದರೆ ಸತ್ಯಕಾಮನಾದ, ಅಸ್ಯ ಅಂದರೆ ಪ್ರಸಿದ್ಧನಾದ, ದೇವಸ್ಯ ದ್ಯೋತನಾದಿಗುಣಯುಕ್ತನಾದ ವಿಷ್ಣುವಿನ ಹವಿಸ್ಸುಗಳಿಗೆ ಪ್ರಬೃಥೇ ಪೂಜೆಯನ್ನು ಮಾಡಿಯೇ ಅಂದರೆ ಅವನ ಅನುಗ್ರಹದಿಂದಲೇ ವಯಾ ಅಂದರೆ ಬಂಧಕನಾದ (ಅಹಂಕಾರಕ್ಕೆ ಅಭಿಮಾನಿಯಾಗಿರುವದರಿಂದ ಜೀವರಿಗೆ ಬಂಧಕನಾದ) ರುದ್ರನು ರುದ್ರನಿಗಿರುವ ಮಹಿಮೆಯನ್ನು ಪಡೆದಿರುವನು. ಅಶ್ವಿನೀದೇವತೆಗಳೇ ನೀವೂ (ವಿಷ್ಣುವಿನ ಅನುಗ್ರಹದಿಂದಲೇ) ಇರಾವತ್ ವರ್ತಿಃ ಅನ್ನವಿರುವ ಸ್ಥಾನವನ್ನು (ಅಂದರೆ ಸಮಸ್ತ ಭೋಗವಿರುವ ಸ್ಥಾನವನ್ನು) ಯಾಸಿಷ್ಟಮ್ ಪಡೆದಿರುವಿರಿ (ರುದ್ರಾದಿಗಳು ಭಗವಂತನ ಅನುಗ್ರಹದಿಂದಲೇ ತಮ್ಮ ತಮ್ಮ ಸ್ಥಾನಗಳನ್ನೂ ಮಹಿಮೆಯನ್ನೂ ಪಡೆದಿರುವರು ಎಂದು ಅಭಿಪ್ರಾಯವು).

ಚಂದ್ರನು ಪರಮ ಪುರುಷನ ಮನಸ್ಸಿನಿಂದ ಜನಿಸಿದನು ಚಕ್ಷುಸ್ಸಿನಿಂದ ಸೂರ್ಯನು ಜನಿಸಿದನು ಮುಖದಿಂದ ಇಂದ್ರ ಅಗ್ನಿಯರು ಜನಿಸಿದರು ಪ್ರಾಣದಿಂದ ವಾಯುವು ಜನಿಸಿದನು (ಇತ್ಯಾದಿ ಪುರುಷಸೂಕ್ತದ ವಚನಗಳಿಂದ ಇವರೆಲ್ಲ ಪರಮಾತ್ಮನಿಗೆ ಅಧೀನರಾದದ್ದು ಸ್ಪಷ್ಟವಾಗಿ ಕಂಡುಬರುತ್ತದೆ )

**ವಿವರಣೆ**— ಇಲ್ಲಿ ಉದಹರಿಸಿರುವ ಶ್ರುತಿಸ್ಮೃತಿ ಪುರಾಣವಚನಗಳಿಂದ ಪರಮಾತ್ಮ ಕ್ಷರ ಮತ್ತು ಅಕ್ಷರಗಳಿಗಿಂತ ಉತ್ತಮನಾಗಿರುವದೂ ಅವುಗಳೆಲ್ಲ ಅವನಿಗೆ ಅಧೀನನಾಗಿರುವದೂ ಸ್ಪಷ್ಟವಾಗುತ್ತದೆ. ಸರ್ಗ, ಸ್ಥಿತಿ, ಯತಿ ಇತ್ಯಾದಿಗಳ ಸ್ವರೂಪವು ಮತ್ತು ಈ ಪದಗಳ ಅರ್ಥಗಳು ಲಕ್ಷ್ಮೀ ವಿಷಯದಲ್ಲಿಯೂ ಇತರ ಬ್ರಹ್ಮಾದಿ ಜೀವರ ವಿಷಯದಲ್ಲಿಯೂ ಭಿನ್ನಭಿನ್ನವಾಗಿವೆ. ಇದನ್ನು ಟೀಕಾದಲ್ಲಿ ವಿವರಿಸಿದಂತೆ, ಅನುವಾದದಲ್ಲಿ ಕೊಡಲಾಗಿದೆ.

87. ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಈಶಾನಃ ನ ಅಗ್ನೀ-ಷೋಮೌ ನ ಇಮೇ ದ್ಯಾವಾಪೃಥಿವೀ । ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ । ಸ ಮುನಿಃ ಭೂತ್ವಾ ಸಮಚಿಂತಯತ್ ತತ ಏತೇ ವ್ಯಜಾಯಂತ । ವಿಶ್ವೋ ಹಿರಣ್ಯಗರ್ಭೋಽಗ್ನಿಃ ಯಮೋ ವರುಣ ರುದ್ರೇಂದ್ರಾಃ ಇತಿ ।

ವಾಸುದೇವೋ ವಾ ಇದಮಗ್ರ ಆಸೀತ್ ನ ಬ್ರಹ್ಮಾ ನ ಚ ಶಂಕರಃ ।
ನೇಂದ್ರಸೂರ್ಯೌ ನ ಚ ಗುಹೋ ನ ಸೋಮೋ ನ ವಿನಾಯಕಃ ।

ಇತ್ಯಾದಿ ಶ್ರುತಿಭ್ಯಶ್ಚ ।

ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್ ಇತ್ಯತ್ರಾಪಿ ಅಪರಮಸ್ತೀ-ತ್ಯೇವಾರ್ಥಃ । ಅನ್ಯಥಾ ತೇನೇದಂ ಪೂರ್ಣಂ ತತೋ ಯದುತ್ತರಂ ತದರೂಪಮ-ನಾಮಯಮಿತಿ ವಾಕ್ಯಶೇಷವಿರೋಧಾತ್ । ತೇನೇದಮಿತ್ಯುಕ್ತಮೇವ ತತ ಇತಿ ಪರಾಮೃಶ್ಯತೇ । ಅನ್ಯಥಾ ಯಸ್ಮಾತ್ ಪರಂ ನೇತಿ ಯುಕ್ತಿ ವಿರೋಧಾತ್ ।

ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ
ಪರಮಮುದಾಹರಂತಿ ।

ಅಸ್ಯೈವ ಸರ್ವನಾಮಾನಿ ವ್ಯತಿರಿಕ್ತಸ್ಯ ಸರ್ವತಃ ।
ಯಃ ಸ್ವತಂತ್ರಃ ಸದೈವೈಕಃ ಸ ವಿಷ್ಣುಃ ಪರಮೋ ಮತಃ ।

ಇತ್ಯಾದಿಶ್ರುತಿಭ್ಯಃ ಅನ್ಯನಾಮಾನಿ ಅಸ್ಯೈವೇತಿ ನಾನ್ಯೇಷಾಂ ಸರ್ವೇಶ್ವರ-ತ್ವಾದಿಕಮುಚ್ಯತೇ ।

ಸರ್ವವೇದೇಷ್ವಪಿ ಅಸ್ಯ ಅದೋಷವಚನಾತ್ ಆದೌ ಅಭಾವಾವಚನಾಚ್ಚ, ತದ್ವಚನಾಚ್ಚ ಅನ್ಯೇಷಾಂ ಸರ್ವೇಷು ವೇದೇಷು । ತೇಷಾಂ ಸರ್ವನಾಮತ್ವಾನು-ಕ್ತೇಶ್ಚ ।

ಉತ್ಪತ್ತಿರ್ವಾಸುದೇವಸ್ಯ ಪ್ರಾದುರ್ಭಾವೋ ನ ಚಾಪರಃ ।
ದೇಹೋತ್ಪತ್ತಿಃ ತದನ್ಯೇಷಾಂ ಬ್ರಹ್ಮಾದೀನಾಂ ತದೀರಣಾತ್ ।
ದೇಹೋಽನಾದಿರ್ಹರೇಃ ನಿತ್ಯೋ ಬ್ರಹ್ಮಾದೀನಾಮನಿತ್ಯಕಃ ।
ಮುಖ್ಯೋತ್ಪತ್ತಿಃ ತದನ್ಯೇಷಾಂ ಪ್ರಾದುರ್ಭಾವೋ ಹರೇರ್ಜನಿಃ ।

ಇತಿ ಪರಮಶ್ರುತೇಃ

ಇತಿ ಶ್ರೀ ಆನಂದತೀರ್ಥಭಗವತ್ಪಾದಾಚಾರ್ಯವಿರಚಿತ ಶ್ರೀವಿಷ್ಣುತತ್ತ್ವವಿನಿರ್ಣಯೇ
ದ್ವಿತೀಯಃ ಪರಿಚ್ಛೇದಃ ಸಮಾಪ್ತಃ

**ಅನುವಾದ**—ಮಹಾಪ್ರಲಯದಲ್ಲಿ ನಾರಾಯಣನು ಒಬ್ಬನೇ ಇದ್ದನು. ಚತುರ್ಮುಖಬ್ರಹ್ಮನಾಗಲೀ ರುದ್ರನಾಗಲೀ ಅಗ್ನೀಷೋಮರಾಗಲೀ ದ್ಯಾವಾಪೃಥಿವೀ ಗಳಾಗಲೀ ಇರಲಿಲ್ಲ ನಾರಾಯಣನೊಬ್ಬನೇ ಇದ್ದನು ಚತುರ್ಮುಖಬ್ರಹ್ಮನಾಗಲೀ

ಶಂಕರನಾಗಲೀ ಇರಲಿಲ್ಲ ಅವನು ಮೌನದಿಂದ ಇದ್ದನು ಬಳಿಕ ಆಲೋಚಿಸಿದನು ಬಳಿಕ ವಿಶ್ವ ಅಂದರೆ ವಾಯು, ಹಿರಣ್ಯಗರ್ಭ ಅಂದರೆ ಚತುರ್ಮುಖಬ್ರಹ್ಮದೇವರು, ಅಗ್ನಿ, ಯಮ, ವರುಣ, ರುದ್ರ, ಇಂದ್ರ ಇವರಲ್ಲ ಜನಿಸಿದರು

ವಾಸುದೇವನು ಸೃಷ್ಟಿಗಿಂತ ಮೊದಲು ಇದ್ದನು ಚತುರ್ಮುಖಬ್ರಹ್ಮನಾಗಲೀ ಶಂಕರನಾಗಲೀ ಇರಲಿಲ್ಲ ಇಂದ್ರ ಸೂರ್ಯರೂ ಇರಲಿಲ್ಲ, ಗುಹನು ಇರಲಿಲ್ಲ, ಸೋಮನು ಇರಲಿಲ್ಲ, ವಿನಾಯಕನು ಇರಲಿಲ್ಲ, ಇತ್ಯಾದಿ ಶ್ರುತಿಗಳಿಂದ (ವಿಷ್ಣುವು ಕ್ಷರ ಮತ್ತು ಅಕ್ಷರ ಗಳಿಗಿಂತ ಉತ್ತಮನು ಎಂದು ತಿಳಿದುಬರುವದು)

'ಯಾರಿಗಿಂತ ಶ್ರೇಷ್ಠವಾದುದು ಯಾವದೂ ಇಲ್ಲ ಆದರೆ ಕನಿಷ್ಠವಾದುದು ಇರುವದು' ಎಂಬಲ್ಲಿ ಕನಿಷ್ಠವಾದುದು ಇರುವದು ಎಂದೇ ಹೇಳಿದ (ಶ್ರೇಷ್ಠ, ಕನಿಷ್ಠ ಎರಡರ ನಿಷೇಧವನ್ನೂ ಮಾಡಿಲ್ಲ) ಇಲ್ಲವಾದರೆ (ಕನಿಷ್ಠವಾದುದೂ ಇಲ್ಲವೆಂದಾದರೆ) ಅವನಿಂದ ಇದು (ಪ್ರಪಂಚವು) ಪೂರ್ಣವಾಗಿದೆ ಎಂಬ ಮುಂದಿನ ವಾಕ್ಯಕ್ಕೆ ವಿರೋಧ ಬರುತ್ತದೆ. ಕನಿಷ್ಠವಾದ ಪ್ರಪಂಚವು ಇಲ್ಲದೇ ಇದ್ದರೆ ಅವನಿಂದ ಪೂರ್ಣವಾಗುವದು ಹೇಗ? ಯಾವನು ಅವಕ್ಕಿಂತ (ಅಂದರೆ ಪ್ರಪಂಚಕ್ಕಿಂತ) ಶ್ರೇಷ್ಠನೋ ಅದು ಪ್ರಾಕೃತ ರೂಪ ರಹಿತವಾದುದೂ ದೋಷರಹಿತವಾದುದೂ ಆಗಿದ ಎಂಬ ಮುಂದಿನ ವಾಕ್ಯಕ್ಕೂ ವಿರೋಧ ಬರುತ್ತದೆ (ಪ್ರಪಂಚವೇ ಇಲ್ಲದಿದ್ದರ ಅದಕ್ಕಿಂತ ಶ್ರೇಷ್ಠವಾಗುವದು ಹೇಗೆ?) ಈ ಮುಂದಿನ ವಾಕ್ಯಗಳಲ್ಲಿ 'ಇದಮ್' ಎಂಬುದರಿಂದ ಉಲ್ಲೇಖಿಸಲ್ಪಟ್ಟ ಪ್ರಪಂಚವೇ 'ತತೋ' ಎಂಬುದರಿಂದ ಉಲ್ಲೇಖಿಸಲ್ಪಟ್ಟಿದ ಇಲ್ಲದಿದ್ದರ 'ಯಾವದಕ್ಕಿಂತ ಶ್ರೇಷ್ಠ ವಾದದ್ದು ಯಾವದೂ ಇಲ್ಲ' ಎಂದು ಹೇಳಿದ್ದಕ್ಕೆ ವಿರೋಧ ಬರುತ್ತದ ('ತತಃ' ಎಂಬುದರಿಂದ ಪರಮಾತ್ಮನನ್ನು ತೆಗದುಕೊಂಡು ಅವಕ್ಕಿಂತ ಉತ್ತಮವಾದ ಎಂದು ಇನ್ನೊಂದನ್ನು ಉಲ್ಲೇಖಿಸಿದರೆ ಪರಮಾತ್ಮನಿಗಿಂತ ಉತ್ತಮರಾದವರು ಯಾರೂ ಇಲ್ಲ ಎಂಬ ಹಿಂದಿನ ಮಾತಿಗೆ ವಿರೋಧ ಬರುತ್ತದ. ಆದ್ದರಿಂದ 'ತತಃ' ಎಂಬುದರಿಂದ ಪ್ರಪಂಚವನ್ನೇ ತೆಗೆದುಕೊಳ್ಳಬೇಕು)

ಎಲ್ಲ ನಾಮಗಳೂ ಯಾರನ್ನು ಮುಖ್ಯವೃತ್ತಿಯಿಂದ ಹೇಳುವವೋ ಆ ವಿಷ್ಣುವೇ ಸರ್ವೋತ್ತಮನೆಂದು ಹೇಳಲ್ಪಟ್ಟಿರುವನು. ಎಲ್ಲ ಪದಾರ್ಥಗಳಿಗಿಂತ ಭಿನ್ನನೂ ವಿಲಕ್ಷಣನೂ ಆದ ಇವನಿಗೇ ಎಲ್ಲ ನಾಮಗಳಿರುವವು ಇವನು ಸ್ವತಂತ್ರನು, ಶಶ್ವದೇಕಪ್ರಕಾರನು, ಈ ವಿಷ್ಣುವೇ ಸರ್ವೋತ್ತಮನು ಇತ್ಯಾದಿ ಶ್ರುತಿಗಳಿಂದ ಎಲ್ಲ ಅನ್ಯನಾಮಗಳೂ ಇವನಿಗೇ ಅನ್ವಯಿಸುವವು. ಆದ್ದರಿಂದ ಬೇರೆ ಯಾರಿಗೂ ಸರ್ವೇಶ್ವರತ್ವಾದಿ ಗುಣಗಳನ್ನು ಹೇಳಿಲ್ಲ.

ಎಲ್ಲ ವೇದಗಳಲ್ಲಿಯೂ ಇವನು ನಿರ್ದೋಷನು ಎಂದು ಹೇಳಿದ ಇವನು (ಸೃಷ್ಟಿ ಪೂರ್ವದಲ್ಲಿ) ಇಲ್ಲ ಎಂದು ಎಲ್ಲಿಯೂ ಹೇಳಿಲ್ಲ ಬೇರೆಯವರಿಗೆ (ದೋಷಗಳನ್ನೂ, ಸೃಷ್ಟಿ ಪೂರ್ವದಲ್ಲಿ ಇಲ್ಲ ಎಂಬುದನ್ನೂ) ಎಲ್ಲ ವೇದಗಳಲ್ಲಿಯೂ ಹೇಳಿದೆ ಬೇರೆಯವರಿಗೆ ಸರ್ವ-ನಾಮವಾಚಕತ್ವವನ್ನು ಹೇಳಿಲ್ಲ

ವಾಸುದೇವನಿಗೆ ಪ್ರಾದುರ್ಭಾವವೇ ಉತ್ಪತ್ತಿಯು. ಇನ್ನುಳಿದ ಚತುರ್ಮುಖ ಬ್ರಹ್ಮಾದಿಗಳಿಗೆ ದೇಹ ಸಂಬಂಧರೂಪೋತ್ಪತ್ತಿಯು. ಹರಿಯ ದೇಹವು ಅನಾದಿನಿತ್ಯವು (ಯಾಕೆಂದರೆ ಅದು ಅಪ್ರಾಕೃತ ಮತ್ತು ಜ್ಞಾನಾನಂದರೂಪವು ) ಚತುರ್ಮುಖಬ್ರಹ್ಮಾದಿಗಳ ಶರೀರವು ಅನಿತ್ಯವು ಹರಿಗೆ ಪ್ರಾದುರ್ಭಾವವೇ ಜನಿಯು ಉಳಿದವರಿಗೆ ಮುಖ್ಯವಾದ ಉತ್ಪತ್ತಿಯು ಎಂದು ಪರಮಶ್ರುತಿಯಲ್ಲಿ ಹೇಳಿದೆ.

**ವಿವರಣೆ**—ವಿಷ್ಣುವು ಕ್ಷರ ಮತ್ತು ಅಕ್ಷರಗಳಿಗಿಂತ ಉತ್ತಮನು ಎಂಬುದನ್ನು ವಿವರಿಸಲು, ಅವನಿಗೆ ಉತ್ಪತ್ತ್ಯಾದಿ ದೋಷಗಳಿಲ್ಲವೆಂದೂ ಸೃಷ್ಟಿಗೆ ಮೊದಲು ಅವನೊಬ್ಬನೇ ಇದ್ದನೆಂದೂ ಚತುರ್ಮುಖ ಬ್ರಹ್ಮ, ರುದ್ರ ಮೊದಲಾದವರಿಗೆ ಉತ್ಪತ್ತ್ಯಾದಿ ದೋಷಗಳಿರುವವೆಂದೂ ಹೇಳುವ ಶ್ರುತಿವಚನಗಳನ್ನು ಉಲ್ಲೇಖಿಸಿರುವರು ಅವನಿಗಿಂತ ಶ್ರೇಷ್ಠವಾದುದು ಯಾವದೂ ಇಲ್ಲ ಎಂಬುದನ್ನು ಹೇಳುವ ಶ್ರುತಿಗಳನ್ನೂ ಅವನು ಸರ್ವಶಬ್ದವಾಚ್ಯನೆಂದು ಹೇಳುವ ಶ್ರುತಿಗಳನ್ನೂ ಉಲ್ಲೇಖಿಸಿರುವರು

ಇತಿ ಶ್ರೀಜಯತೀರ್ಥಗುರ್ವಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ
ಶ್ರೀ ಲಕ್ಷ್ಮೀವೆಂಕಟೇಶದೇವರ ಅನುಗ್ರಹದಿಂದ ಪಾಂಡುರಂಗಿ ತಮ್ಮಣ್ಣಾಚಾರ್ಯಸುತ
ಪಾಂಡುರಂಗಿ ಕೃಷ್ಣಾಚಾರ್ಯನು ಯಥಾಮತಿ ಮಾಡಿದ ಶ್ರೀವಿಷ್ಣುತತ್ತ್ವವಿನಿರ್ಣಯ
ಮೂಲದ ಕನ್ನಡ ಅನುವಾದ ಮತ್ತು ಟೀಕಾಸಾರಸಂಗ್ರಹರೂಪವಾದ ಕನ್ನಡ
ವಿವರಣೆಯ ದ್ವಿತೀಯ ಪರಿಚ್ಛೇದವು ಮುಗಿಯಿತು

# ತೃತೀಯಃ ಪರಿಚ್ಛೇದಃ

88. ವರ್ಜಿತಃ ಸರ್ವದೋಷೈರ್ಯೋ ಗುಣಸರ್ವಸ್ವಮೂರ್ತಿಮಾನ್ ।
ಸ್ವತಂತ್ರೋ ಯದ್ವಶಾಃ ಸರ್ವೇ ಸ ವಿಷ್ಣುಃ ಪರಮೋ ಮತಃ ॥
ಇತಿ ಪರಮೋಪನಿಷದಿ

ನಿತ್ಯಪೂರ್ಣಾಖಿಲಗುಣೋ ನಿರ್ದೋಷಃ ಸರ್ವದೈವ ಯಃ ।
ಯಃ ಸ್ವತಂತ್ರಃ ಪರೋ ವಿಷ್ಣುಃ ಜನ್ಮಮೃತ್ಯಾದಿವರ್ಜಿತಃ ॥

ನಾರದ ಉವಾಚ—
ನಿರ್ದೋಷಶ್ಚೇತ್ ಕಥಂ ವಿಷ್ಣುಃ ಮಾನುಷೇಷು ಉದಪದ್ಯತ ।
ಚಿಂತಾಶ್ರಮವ್ರಣಾಜ್ಞಾನದುಃಖಯುಗ್ ದೃಶ್ಯತೇ ಕಥಮ್ ॥
ಏಷ ಮೇ ಸಂಶಯೋ ಬ್ರಹ್ಮನ್ ಹೃದಿ ಶಲ್ಯ ಇವಾರ್ಪಿತಃ ।
ಅನುದ್ಧಾರ್ಯೋಽಪರೈರ್ಮರ್ತ್ಯೈಃ ಸೂಕ್ತಿಶಕ್ತ್ಯಾ ತಮುದ್ಧರ ॥

ಬ್ರಹ್ಮಾ ಉವಾಚ—
ಸ್ತ್ರೀಪುಂಮಲಾಭಿಯೋಗಾತ್ಮಾ ದೇಹೋ ವಿಷ್ಣೋರ್ನ ಜಾಯತೇ ।
ಕಿಂತು ನಿರ್ದೋಷಚೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಮ್ ॥
ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋರ್ನ ಚಾಪರಾ ।
ತಥಾಪ್ಯಸುರಮೋಹಾಯ ಪರೇಷಾಂ ಚ ಕ್ವಚಿತ್ ಕ್ವಚಿತ್ ॥
ದುಃಖಾಜ್ಞಾನಶ್ರಮಾದೀನ್ ಸ ದರ್ಶಯೇತ್ ಶುದ್ಧಸದ್ಗುಣಃ ॥
ಕ್ವ ವ್ರಣಾದಿ ಕ್ವಚಾಜ್ಞಾನಂ ಸ್ವತಂತ್ರಾಚಿಂತ್ಯಸದ್ಗುಣೇ ॥
ದೌರ್ಲಭ್ಯಾಯೈವ ಮೋಕ್ಷಸ್ಯ ದರ್ಶಯೇತ್ ತಾನ್ಯಜೋ ಹರಿಃ ।
ಮಿಥ್ಯಾದರ್ಶನದೋಷೇಣ ತೇನ ಮುಕ್ತಿಂ ನ ಯಾಂತಿ ಚ ॥
ತಮೋ ಯಾಂತಿ ಚ ತೇನೈವ ತಸ್ಮಾದ್ ದೋಷವಿವರ್ಜಿತಮ್ ।
ಪ್ರಾದುರ್ಭಾವಗತಂ ಚೈವ ಜಾನೀಯಾದ್ ವಿಷ್ಣುಮಂಜಸಾ ॥
ಇತಿ ಬ್ರಹ್ಮಾಂಡೇ

ಅನುವಾದ—ಸರ್ವದೋಷವಿರಹಿತನು, ಗುಣಸರ್ವಸ್ವಮೂರ್ತಿಯುಳ್ಳವನು, ಸ್ವತಂತ್ರನು ಆದ ವಿಷ್ಣುವೇ ಸರ್ವೋತ್ತಮನು ಇನ್ನುಳಿದ ಎಲ್ಲರೂ ಅವನಿಗೆ ಅಧೀನರು ಎಂದು ಪರಮೋಪನಿಷತ್ತಿನಲ್ಲಿ ಹೇಳಿದೆ ನಿತ್ಯಪೂರ್ಣನೂ ಅಖಿಲಗುಣಗಳುಳ್ಳವನೂ ಯಾವಾಗಲೂ ನಿರ್ದೋಷನೂ, ಸ್ವತಂತ್ರನೂ, ಜನ್ಮ ಮೃತ್ಯು ಇತ್ಯಾದಿ ರಹಿತನೂ ಆದ ವಿಷ್ಣುವು ಸರ್ವೋತ್ತಮನು

ನಾರದರು ಕೇಳುವರು—'ವಿಷ್ಣುವು ನಿರ್ದೋಷನಾಗಿದ್ದರೆ ಮನುಷ್ಯನಾಗಿ ಹೇಗೆ ಹುಟ್ಟಿದನು? ಚಿಂತೆ, ಶ್ರಮ, ನೋವು, ಅಜ್ಞಾನ, ದುಃಖವುಳ್ಳವನಾಗಿ ಏಕೆ ಕಾಣುತ್ತಾನೆ?

ಚತುರ್ಮುಖಬ್ರಹ್ಮನೇ, ಈ ಸಂಶಯವು ನನ್ನ ಮನಸ್ಸಿನಲ್ಲಿ ಶಲ್ಯದಂತೆ (ಕಬ್ಬಿಣದ ಚೂರಿನಂತೆ) ನಟ್ಟಿದೆ ಬೇರೆ ಯಾರೂ ಇದನ್ನು ಕಿತ್ತಲು ಸಾಧ್ಯವಿಲ್ಲ ಆದ್ದರಿಂದ ನೀನೇ ನಿನ್ನ ಯುಕ್ತಿಯುಕ್ತ ಮಾತುಗಳಿಂದ ಕಿತ್ತು

ಬ್ರಹ್ಮನು ಉತ್ತರಿಸುವನು—ಸ್ತ್ರೀಪುರುಷರ ಸಂಪರ್ಕದಿಂದುಂಟಾಗುವ ಮಲಿನವಾದ ದೇಹವು ವಿಷ್ಣುವಿಗೆ ಇಲ್ಲ ಆದರೆ ನಿರ್ದುಷ್ಟವಾದ ಜ್ಞಾನಾನಂದರೂಪವಾದ ನಿತ್ಯವಾದ ತನ್ನ ರೂಪವನ್ನು ತೋರಿಸುವನು ಇದೇ ವಿಷ್ಣುವಿನ ಜನಿ ಅಂದರೆ ಪ್ರಾದುರ್ಭಾವವು ಬೇರೆ ಯಾವ ವಿಧವಾದ ಜನ್ಮವೂ ಅವನಿಗಿಲ್ಲ ಆದರೂ ಅಸುರರಿಗೆ ಮತ್ತು ಇನ್ನು ಕೆಲವರಿಗೆ (ಅಂದರೆ ನಿತ್ಯತಮಸ್ಸಿನ ಅಧಿಕಾರಿಗಳಿಗೆ ಮತ್ತು ಮೋಕ್ಷವು ಯಾರಿಗೆ ವಿಲಂಬವಾಗಬೇಕಾಗುವದೋ ಅವರಿಗೆ) ಮೋಹವನ್ನುಂಟುಮಾಡಲು ಆಗಾಗ ದುಃಖ, ಶ್ರಮ, ಅಜ್ಞಾನಗಳುಂಟಾದಂತೆ ತಾನು ಸ್ವತಃ ಶುದ್ಧ ಸದ್ಗುಣನಾದರೂ ತೋರಿಸುವನು ಸ್ವತಂತ್ರನೂ ಅಚಿಂತ್ಯಸದ್ಗುಣನೂ ಆದ ಅವನಿಗೆ ದುಃಖವೆಲ್ಲಿಯುದು ? ವ್ರಣಗಳು (ಅಂದರೆ ಗಾಯ, ನೋವುಗಳು) ಎಲ್ಲಿಯವು ? ಅವರಿಗೆ (ಅಸುರಾದಿಗಳಿಗೆ) ಮೋಕ್ಷವು ದುರ್ಲಭವಾಗಲೆಂದೇ ಅವುಗಳನ್ನು ತೋರಿಸುವನು. ಈ ಮಿಥ್ಯಾ ಅಂದರೆ ಇಲ್ಲದ ದೋಷಗಳ ದರ್ಶನದಿಂದ ಅವರು ಮುಕ್ತಿಯನ್ನು ಕಳೆದುಕೊಳ್ಳುವರು ತಮಸ್ಸನ್ನು ಪಡೆಯುವರು ಆದ್ದರಿಂದ ವಿಷ್ಣುವು ದೋಷರಹಿತನೆಂದೂ ಕೇವಲ ಪ್ರಾದುರ್ಭಾವವಿರುವವನೆಂದೂ (ಅಂದರೆ ಜನ್ಮವಿಲ್ಲದವನೆಂದೂ) ದೃಢವಾಗಿ ತಿಳಿದುಕೊಳ್ಳಬೇಕು, ಎಂದು ಬ್ರಹ್ಮಾಂಡದಲ್ಲಿ ಹೇಳಿದೆ

89. ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ ।
ಅತೋ ಮಿಥೋಽಪಿ ಭೇದೋ ನ ತೇಷಾಂ ಕಶ್ಚಿತ್ ಕದಾಚನ ॥
ಸ್ವರೂಪೇಽಪಿ ವಿಶೇಷೋಽಸ್ತಿ ಸ್ವರೂಪತ್ವವದೇವ ತು ।
ಭೇದಾಭಾವೇಽಪಿ ತೇನೈವ ವ್ಯವಹಾರಶ್ಚ ಸರ್ವತಃ ॥ ಇತಿ ಪರಮೋಪನಿಷದಿ

ಅಭಿನ್ನತ್ವಮಭೇದಶ್ಚ ಯಥಾ ಭೇದವಿವರ್ಜಿತಮ್ ।
ವ್ಯವಹಾರ್ಯಂ ಪೃಥಕ್ ಚ ಸ್ಯಾದೇವಂ ಸರ್ವೇ ಗುಣಾ ಹರೇಃ ॥
ಅಭೇದಾಭಿನ್ನಯೋರ್ಭೇದೋ ಯದಿ ವಾ ಭೇದಭಿನ್ನಯೋಃ ।
ಅನವಸ್ಥಿತಿರೇವ ಸ್ಯಾತ್ ನ ವಿಶೇಷಣತಾ ಮತಿಃ ॥
ಮೂಲಸಂಬಂಧಮಜ್ಞಾತ್ವಾ ತಸ್ಮಾದೇಕಮನಂತಧಾ ।
ವ್ಯವಹಾರ್ಯಂ ವಿಶೇಷೇಣ ದುಸ್ತರ್ಕಬಲತೋ ಹರೇಃ ।
ವಿಶೇಷೋಽಪಿ ಸ್ವರೂಪಂ ಸ ಸ್ವನಿರ್ವಾಹಕತಾಽಸ್ಯ ಚ । ಇತಿ ಬ್ರಹ್ಮತರ್ಕೇ

ಏಕಮೇವಾದ್ವಿತೀಯಂ ತತ್, ನೇಹ ನಾನಾಸ್ತಿ ಕಿಂಚನ ।
ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ ।**

ಇತ್ಯಾದಿಶ್ರುತೇಶ್ಚ ।

**ದೇಶಃ ಸರ್ವತ್ರ ಪುರುಷಃ ಸ್ವತಂತ್ರಃ ಕಾಲನಿತ್ಯತಾ ।**
**ಇತ್ಯಾದಿಷು ಸ್ವಸಂಬಂಧಾತ್ ಯಥೈವ ಗುಣರೂಪಿಣಃ ।**
**ಗುಣಿತ್ವಂ ಗುಣಭೋಕ್ತೃತ್ವಂ ಸ್ಯಾದ್ ವಿಷ್ಣೋಃ ತಚ್ಚ ಸ ಸ್ವಯಮ್ ॥**

ಇತಿ ಬ್ರಹ್ಮತರ್ಕೇ

**ಅನುವಾದ**—ವಿಷ್ಣುವಿನ ಗುಣಕ್ರಿಯಾದಿಗಳು ಅವನ ಸ್ವರೂಪಭೂತವಾದವೇ ಆಗಿವೆ ಅವನಿಂದ ಭಿನ್ನವಾಗಿಲ್ಲ ಈ ಗುಣಕ್ರಿಯಾದಿಗಳು ಪರಸ್ಪರವಾಗಿಯೂ ಭಿನ್ನವಾಗಿಲ್ಲ ಅವು ಹೀಗೆ ಅಭಿನ್ನವಾಗಿದ್ದರೂ (ಅವುಗಳ ಭೇದ ವ್ಯವಹಾರವನ್ನು ನಿರ್ವಾಹ ಮಾಡುವ) ವಿಶೇಷವಿದೆ ಇದು ಸ್ವರೂಪತ್ವದಂತೆ ಇದ (ಅಂದರೆ ಸ್ವರೂಪತ್ವವು ಸ್ವರೂಪಕ್ಕಿಂತ ಭಿನ್ನವಾದುದಲ್ಲ ಆದರೂ ಸ್ವರೂಪ, ಸ್ವರೂಪತ್ವ ಎಂಬ ಭೇದವ್ಯವಹಾರವಿದೆ. ಇದರಂತೆ ವಿಶೇಷವೂ ಆಯಾ ವಸ್ತು ಸ್ವರೂಪವಾಗಿದ್ದು ಭೇದವ್ಯವಹಾರಕ್ಕೆ ಕಾರಣವಾಗುತ್ತದ ) ಈ ವಿಶೇಷದಿಂದ (ಗುಣ-ಗುಣಿ ಮುಂತಾದವುಗಳಲ್ಲಿ) ಭೇದವಿಲ್ಲದಿದ್ದರೂ ಭೇದ ವ್ಯವಹಾರವಾಗುತ್ತದ (ಇಂಥ ಅಭೇದವನ್ನು ಸವಿಶೇಷಾಭೇದ ಎಂದು ಹೇಳುವರು )

(ಅದ್ವೈತಮತದಲ್ಲಿ ಜೀವಬ್ರಹ್ಮರ) ಅಭೇದ ಮತ್ತು ಬ್ರಹ್ಮ ಇವು ಭಿನ್ನವಾಗಿಲ್ಲ ಆದರೂ (ಬ್ರಹ್ಮನ ಅಭೇದ, ಬ್ರಹ್ಮನ ಅಭಿನ್ನತ್ವ ಇತ್ಯಾದಿಯಾಗಿ) ಭೇದವ್ಯವಹಾರದಂತೆ ಪರಮಾತ್ಮನ ಎಲ್ಲ ಗುಣಗಳೂ ಅವನಿಂದ ಅಭಿನ್ನವಾಗಿವೆ ಅಭೇದ ಮತ್ತು ಅಭಿನ್ನವಾದ ವಸ್ತುಗಳು, ಭೇದ ಮತ್ತು ಭಿನ್ನವಾದ ವಸ್ತುಗಳು (ಇದರಂತೆಯೇ ಗುಣ-ಗುಣಿ ಮತ್ತು ಅವುಗಳ ಭೇದ) ಇವುಗಳಲ್ಲಿ ಭೇದವನ್ನು ಒಪ್ಪಿಕೊಂಡರ (ಈ ಭೇದ ಮತ್ತು ಆಯಾ ವಸ್ತುಗಳು ಇವುಗಳಲ್ಲಿ ಭೇದವೋ ಅಭೇದವೋ ? ಇವು ಭಿನ್ನವಾಗಿದ್ದರೆ ಈ ಎರಡನೆಯ ಭೇದ ಮತ್ತು ಮೊದಲನೆಯ ಭೇದ ಭಿನ್ನವೋ ಅಭಿನ್ನವೋ ಇತ್ಯಾದಿಯಾಗಿ) ಅನವಸ್ಥೆಯುಂಟಾಗುವದು (ಆದ್ದರಿಂದ ಗುಣ-ಗುಣಿಗಳ ಅಭೇದವಾದಿಗಳೂ, ಭೇದವಾದಿಗಳೂ, ಭೇದಾಭೇದವಾದಿಗಳೂ ವಿಶೇಷವನ್ನು ಒಪ್ಪಿ ಸವಿಶೇಷಾಭೇದವನ್ನು ಅಂಗೀಕರಿಸಲೇಬೇಕು.)

ಅಲ್ಲದೆ, (ಗುಣ-ಗುಣಿಗಳ ಭೇದವನ್ನು ಹೇಳಿದರೆ ಅವುಗಳ) ವಿಶೇಷಣ ವಿಶೇಷ್ಯ ಭಾವವು ಅವುಗಳ ಸಂಬಂಧವು ತಿಳಿದಾಗಲೇ ತಿಳಿಯುವದು. (ಈ ಸಂಬಂಧವನ್ನು ತೋರಿಸಲು ಗುಣ-ಗುಣಿಗಳ ಸಂಬಂಧ ಯಾವದು, ಈ ಸಂಬಂಧದ ಸಂಬಂಧ ಯಾವದು ಇತ್ಯಾದಿಯಾಗಿ ಅನವಸ್ಥೆ ಬರುವದು.) ಆದ್ದರಿಂದ ಗುಣಾದಿಗಳಿಂದ ಅಭಿನ್ನನಾದ ಪರಮಾತ್ಮನ ಅನಂತ ಗುಣಗಳ ವ್ಯವಹಾರವು ತರ್ಕಕ್ಕೆ ಸಿಲುಕದ ಅವನ ಶಕ್ತಿಯಾದ ವಿಶೇಷದ ಮಹಿಮೆಯಿಂದ ಆಗುವದು. ವಿಶೇಷವು ಆಯಾ ವಸ್ತುಗಳ ಸ್ವರೂಪಭೂತವೇ ಆಗಿದ್ದು ತನ್ನ ಭೇದವನ್ನು ತಾನೇ ತಿಳಿಸಿಕೊಡುವದು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ

'ಏಕಮೇವ ಅದ್ವಿತೀಯಮವ್ ತತ್' (ಈ ಶ್ರುತಿಯಲ್ಲಿ ಪರಮಾತ್ಮನ ಅವಯವ-ಅವಯವಿಗಳಿಗೆ ಭೇದವಾಗಲೀ ಭೇದಾಭೇದವಾಗಲೀ ಇಲ್ಲವೆಂದು ಹೇಳಿದ) 'ನೇಹ ನಾನಾಸ್ತಿ' ಎಂಬ ಶ್ರುತಿಯಲ್ಲಿ 'ಪರಮಾತ್ಮನ ಗುಣಗಳಿಗೂ ಅವನಿಗೂ ಭೇದವಿಲ್ಲ ಅವನ ಗುಣಗಳಲ್ಲಿ ಪರಸ್ಪರ ಭೇದವಿಲ್ಲ ಇವುಗಳಲ್ಲಿ ಭೇದಚಿಂತನೆ ಮಾಡುವವನು ಮೃತ್ಯುವಿನ ಮೃತ್ಯುವನ್ನು ಅಂದರೆ ನಿತ್ಯನರಕವನ್ನು ಅನುಭವಿಸುವನು ಶಿಖರದ ಮೇಲೆ ಬಿದ್ದ ಮಳೆಯು ಪರ್ವತದಲ್ಲಿ ಕೆಳಕೆಳಗೆ ಹರಿಯುವಂತೆ ಪರಮಾತ್ಮನ ಗುಣಗಳ ಭೇದಚಿಂತನೆ ಮಾಡುವವನು ಕೆಳಕ್ಕೆ ಹೋಗುವನು' ಎಂದು ಹೇಳಿದ

ಆಕಾಶವು ಎಲ್ಲ ಕಡೆಗೂ ಇದೆ, ಪರಮ ಪುರುಷನು ಸ್ವತಂತ್ರನಾಗಿದ್ದಾನೆ, ಕಾಲವು ನಿತ್ಯವಾಗಿದೆ ಇತ್ಯಾದಿ ಪ್ರಯೋಗಗಳಲ್ಲಿ ಆಯಾ ವಸ್ತುಗಳಿಗೆ ಆಯಾ ವಸ್ತುಗಳ ಸಂಬಂಧವನ್ನೇ ಹೇಳಿದ (ಆಕಾಶವು ಎಲ್ಲ ಕಡೆಗೆ ಅಂದರೆ ಆಕಾಶದಲ್ಲಿಯೇ ಇದೆ, ಪರಮಪುರುಷನು ಸ್ವತಂತ್ರ ಅಂದರೆ ತನ್ನ ಸಂಬಂಧವುಳ್ಳವನೇ ಆಗಿದ್ದಾನೆ, ಕಾಲವು ನಿತ್ಯ ಅಂದರೆ ಸದಾಕಾಲ ಸಂಬಂಧವುಳ್ಳದ್ದಾಗಿದ ಎಂದು ಆಯಾ ವಸ್ತುಗಳಿಗೆ ಆಯಾ ವಸ್ತುಗಳ ಸಂಬಂಧವನ್ನೇ ಹೇಳಲಾಗಿದೆ) ಇದರಂತೆಯೇ ವಿಷ್ಣುವು ಸ್ವತಃ ಗುಣರೂಪನೂ ಗುಣಭೋಕ್ತೃನೂ ಆಗ ಬಲ್ಲನು, ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ

**ವಿವರಣೆ**—ಕೆಲವರು ಪರಮಾತ್ಮನು ನಿರ್ಗುಣನೆನ್ನುವರು ಕೆಲವರು ಅವನ ಗುಣಗಳು ಅವನಿಂದ ಭಿನ್ನ ಎಂದೂ, ಇನ್ನು ಕೆಲವರು ಭಿನ್ನಾಭಿನ್ನ ಎಂದೂ ಹೇಳುವರು ಕೆಲವರು ಆನಂದಾದಿ ಅವನ ಗುಣಗಳು ಸ್ವರೂಪಭೂತ ಮತ್ತು ಭಿನ್ನ ಎಂದು ಎರಡು ವಿಧವಾಗಿ ಇರುವವು ಎಂದು ಇವೆಲ್ಲ ಪಕ್ಷಗಳನ್ನು ನಿರಾಕರಿಸಿ ಪರಮಾತ್ಮನ ಗುಣಗಳು ಅವನಿಂದ ಅಭಿನ್ನವಾಗಿವೆ. ಪರಮಾತ್ಮನ ಆನಂದ ಇತ್ಯಾದಿಯಾದ ವ್ಯವಹಾರವು ಪರಮಾತ್ಮನ ಸ್ವರೂಪ ಎಂಬುದರಂತೆ ವಿಶೇಷ ಮಹಿಮೆಯಿಂದ ಆಗುವದು ಎಂಬುದನ್ನು ವಿವರಿಸಿದ್ದಾರೆ ವಿಶೇಷವನ್ನು ಅಂಗೀಕರಿಸಿ ಗುಣ-ಗುಣಿಗಳಿಗೆ ಸವಿಶೇಷಾಭೇದವನ್ನು ಸಮರ್ಥಿಸಿದ್ದಾರೆ. ಗುಣ-ಗುಣಿಗಳಿಗೆ ಅಭೇದ, ಭೇದ, ಭೇದಾಭೇದ ಹೀಗೆ ಯಾವದನ್ನು ಹೇಳಿದರೂ ಅನವಸ್ಥಾದಿ ದೋಷಪರಿಹಾರಮಾಡಲು ವಿಶೇಷವನ್ನು ಒಪ್ಪಲೇಬೇಕಾಗುತ್ತದೆ. ಆದ್ದರಿಂದ ವಿಶೇಷವನ್ನು ಅಂಗೀಕರಿಸಿ ಸವಿಶೇಷಾಭೇದವನ್ನು ಹೇಳುವದೇ ಯುಕ್ತ ಎಂದು ತೋರಿಸಿದ್ದಾರೆ.

'ಏಕಮೇವಾದ್ವಿತೀಯಮವ್' 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಗಳು ಪರಮಾತ್ಮನಲ್ಲಿ ಅವಯವ-ಅವಯವಿ ಭೇದವಾಗಲೀ ಗುಣಗುಣಿ ಭೇದವಾಗಲೀ ಇಲ್ಲ ವೆಂದು ಸ್ಪಷ್ಟವಾಗಿ ಹೇಳುವವು. ಆಕಾಶವು ಎಲ್ಲ ಕಡೆಗೆ (ಅಂದರೆ ಆಕಾಶದಲ್ಲಿ ಎಲ್ಲ ಕಡೆಗೆ) ಇದೆ ಕಾಲವು ನಿತ್ಯವಾಗಿದೆ (ಅಂದರೆ ಎಲ್ಲ ಕಾಲದಲ್ಲಿಯೂ ಇದೆ) ಎಂಬ ಪ್ರಯೋಗಗಳಲ್ಲಿ ಕಂಡುಬರುವಂತೆ ವಿಷ್ಣುವು ಗುಣರೂಪಿಯೂ ಗುಣವುಳ್ಳವನೂ ಗುಣಭೋಕ್ತೃನೂ ಆಗಬಲ್ಲನು

90 ವಿಷ್ಣುಂ ಸರ್ವಗುಣೈಃ ಪೂರ್ಣಂ ಜ್ಞಾತ್ವಾ ಸಂಸಾರವರ್ಜಿತಃ ।
ನಿರ್ದುಃಖಾನಂದಭುಕ್ ನಿತ್ಯಂ ತತ್ಸಮೀಪೇ ಸ ಮೋದತೇ ॥

ಮುಕ್ತಾನಾಂ ಚಾಶ್ರಯೋ ವಿಷ್ಣುರಧಿಕೋಽಧಿಪತಿಸ್ತಥಾ ।
ತದ್ವಶಾ ಏವ ತೇ ಸರ್ವೇ ಸರ್ವದೈವ ಸ ಈಶ್ವರಃ ॥ ಇತಿ ಪರಮಶ್ರುತಿಃ

ಅಮೃತಸ್ಯೈಷ ಸೇತುಃ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ಇತ್ಯಾದಿ ಚ ।

ನೃಪಾದ್ಯಾಃ ಶತಧೃತ್ಯಂತಾಃ ಮುಕ್ತಿಗಾಃ ಉತ್ತರೋತ್ತರಮ್ ।
ಗುಣೈಃ ಸರ್ವೈಃ ಶತಗುಣಾ ಮೋದಂತೇ ಇತಿ ಹಿ ಶ್ರುತಿಃ ॥ ಇತಿ ಪಾದ್ಮೇ

ಅತೋ ನಿಶ್ಶೇಷದೋಷವರ್ಜಿತಃ
ಪೂರ್ಣೋಽನಂತಗುಣಃ ನಾರಾಯಣ ಇತಿ ಸಿದ್ಧಮ್ ।

**ಅನುವಾದ**—ಸರ್ವಗುಣಪರಿಪೂರ್ಣನಾದ ವಿಷ್ಣುವನ್ನು ತಿಳಿದುಕೊಂಡು ಸಂಸಾರದಿಂದ ಪಾರಾಗಿ ದುಃಖರಹಿತವಾದ ಆನಂದವನ್ನು ಅನುಭವಿಸುತ್ತ ಅವನ ಹತ್ತಿರ (ಮುಕ್ತನು) ಇರುವನು ವಿಷ್ಣುವು ಮುಕ್ತರಿಗೆ ಆಶ್ರಯನು, ಅವರಿಗಿಂತ ಉತ್ತಮೋತ್ತಮನು ಮತ್ತು ಅವರಿಗೆ ಅಧಿಪತಿಯು ಮುಕ್ತರೆಲ್ಲ ಅವನಿಗೆ ಯಾವಾಗಲೂ ಅಧೀನರು ಅವನು ಒಡೆಯನು ಎಂದು ಪರಮಶ್ರುತಿಯಲ್ಲಿ ಹೇಳಿದೆ.

ಪರಮಾತ್ಮನು ಅಮೃತಸ್ಯ ಅಂದರೆ ಮುಕ್ತರಿಗೆ ಆಶ್ರಯನು. ಮುಕ್ತನು ಚತುರ್ಮುಖಬ್ರಹ್ಮನೊಡನೆ ತನ್ನ ಎಲ್ಲ ಕಾಮನೆಗಳನ್ನು ಅನುಭವಿಸುವನು. ಇತ್ಯಾದಿ ಶ್ರುತಿಗಳಿವೆ (ಈ ಶ್ರುತಿಗಳಿಂದ ಮುಕ್ತರು ಪರಮಾತ್ಮನೊಡನೆ ಅಭಿನ್ನರೂ ಅಲ್ಲ, ಅವನಿಗೆ ಸಮರೂ ಅಲ್ಲ ಉತ್ತಮರಂತೂ ಅಲ್ಲವೇ ಅಲ್ಲ ಎಂದು ತಿಳಿದುಬರುವದು )

ಮನುಷ್ಯೋತ್ತಮರಿಂದ ಆರಂಭಿಸಿ ಚತುರ್ಮುಖಬ್ರಹ್ಮನವರೆಗೆ ಮುಕ್ತರಾದವರು ನೂರು ನೂರು ಪಟ್ಟು ಹೆಚ್ಚು ಹೆಚ್ಚು ಆನಂದವನ್ನು ಅನುಭವಿಸುವರು ಎಂದು ಶ್ರುತಿಯಿದೆ ಎಂದು ಪಾದ್ಮದಲ್ಲಿ ಹೇಳಿದೆ (ಇದರಿಂದ ಮುಕ್ತರೂ ಪರಸ್ಪರ ಸಮರಲ್ಲ ಎಂದು ಸ್ಪಷ್ಟವಾಗುತ್ತದ)

ಹೀಗೆ ನಾರಾಯಣನು ನಿಶ್ಶೇಷದೋಷರಹಿತನು, ಪೂರ್ಣನು, ಅನಂತಗುಣನು ಎಂದು ಸಿದ್ಧವಾಯಿತು.

**ವಿವರಣೆ**—ಪರಮಾತ್ಮನು ಸರ್ವಗುಣ ಪರಿಪೂರ್ಣನು ಎಂದು ಈವರೆಗೆ ಪ್ರತಿಪಾದಿಸಿ ಇದರ ಜ್ಞಾನವು ಮೋಕ್ಷಸಾಧನವೆಂಬುದನ್ನು ಇಲ್ಲಿ ಹೇಳಿರುವರು. ಮುಕ್ತರಾದಮೇಲೆಯೂ ಮುಕ್ತಜೀವರು ಭಿನ್ನರಾಗಿಯೇ ಉಳಿಯುವರೆಂಬುದನ್ನೂ, ಮುಕ್ತಜೀವರು ಪರಮಾತ್ಮನಿಗೆ ಸಮರಾಗುವದಿಲ್ಲ ಎಂಬುದನ್ನೂ ಹೇಳುವರು. ಮುಕ್ತರು ಪರಸ್ಪರವಾಗಿಯೂ ಸಮರಲ್ಲವೆಂದು ಹೇಳುವರು.

**91.** ಯಸ್ಯ ತ್ರೀಣಿ ಉದಿತಾನಿ ವೇದವಚನೇ ರೂಪಾಣಿ ದಿವ್ಯಾನಿ ಅಲವ್ ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋ ನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ।

ಸ್ವತಂತ್ರಾಯಾಖಿಲೇಶಾಯ ನಿರ್ದೋಷಗುಣರೂಪಿಣೇ ।
ಪ್ರೇಯಸೇ ಮೇ ಸುಪೂರ್ಣಾಯ ನಮೋ ನಾರಾಯಣಾಯ ತೇ ॥

ಇತಿ ಶ್ರೀ ಆನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀವಿಷ್ಣುತತ್ತ್ವವಿನಿರ್ಣಯೇ ತೃತೀಯಃ ಪರಿಚ್ಛೇದಃ ಸಮಾಪ್ತಃ ।

॥ ಸಮಾಪ್ತಶ್ಚ ಅಯಂ ಗ್ರಂಥಃ ॥

**ಅನುವಾದ**—ಯಾವ ವಾಯುದೇವರ ಕ್ರೀಡಾದಿಗುಣಯುಕ್ತವಾದ ಮೂರು ರೂಪಗಳು ಬಳಿತ್ಥಾ ಸೂಕ್ತವೇ ಮೊದಲಾದ ವೇದವಚನಗಳಲ್ಲಿ ಹೇಳಲ್ಪಟ್ಟಿವೆಯೋ ಅವನ ಮೂರನೆಯ ರೂಪದಿಂದ ಕೇಶವನ ವಿಷಯಕವಾದ ಈ ಗ್ರಂಥವು ವಿರಚಿಸಲ್ಪಟ್ಟಿದೆ. ಈ ವಾಯುವಿನ ಮೂಲರೂಪವು ಬಟ್ ಅಂದರೆ ಬಲೋತ್ಕರ್ಷವಾದುದು, ದರ್ಶತಂ ಅಂದರೆ ಜ್ಞಾನರೂಪವಾದುದು, ಭರ್ಗಃ ಅಂದರೆ ಜಗತ್ತಿನ ಭರಣ-ಗಮನಗುಣವುಳ್ಳದ್ದು, ಮಹತ್ ಅಂದರೆ ಮಹನೀಯ ಅಥವಾ ಪೂಜನೀಯವಾದದ್ದು ಈ ರೀತಿಯಾದ ಈ ರೂಪವು (ಮೂರು ಅವತಾರ ಮಾಡಲು ಭಗವಂತನಿಂದ) ನಿಹಿತಂ ಅಂದರೆ ಪ್ರೇರಿಸಲ್ಪಟ್ಟಿತು ಮತ್ತು ಅವತಾರ ಮಾಡಿತು ಅವುಗಳಲ್ಲಿ ಪ್ರಥಮಕಂ ವಪುಃ ಮೊದಲನೆಯದು (ಹನುಮಂತನ ರೂಪವು) ಶ್ರೀರಾಮನ ವಿಷಯಕವಾದ ವಚನಗಳನ್ನು (ಮೂಲರಾಮಾಯಣವನ್ನು) ಶಿಷ್ಯರಿಗೆ ಬೋಧಿಸಿತು (ಅಥವಾ ಶ್ರೀರಾಮನ ಮಾತುಗಳ ಆಜ್ಞೆಯನ್ನು ಪಾಲಿಸಿತು ಅಥವಾ ಶ್ರೀರಾಮನ ವಚನಗಳನ್ನು ಸೀತೆಗೆ ಮುಟ್ಟಿಸಿತು) ಎರಡನೆಯ ರೂಪವು (ಭೀಮಸೇನನ ರೂಪವು) ಪೃಕ್ಷಃ ಅಂದರೆ ಕೌರವನನ್ನೂ ಅವನ ಸೈನ್ಯವನ್ನೂ ನಾಶ ಮಾಡಿತು ಮೂರನೆಯ ರೂಪವು ಆನಂದರೂಪನಾದ ಹರಿಯನ್ನು ಪ್ರತಿಪಾದಿಸುವ ಶಾಸ್ತ್ರವನ್ನು ರಚಿಸಿದ ಮಧ್ವನಾಮಕ ರೂಪವು (ಈ ಮೂರನೆಯ ರೂಪದಿಂದ ಈ ಗ್ರಂಥವು ರಚಿಸಲ್ಪಟ್ಟಿದೆ)

ಸ್ವತಂತ್ರನೂ ಎಲ್ಲರ ಸ್ವಾಮಿಯೂ ನಿರ್ದೋಷನೂ ಗುಣರೂಪಿಯೂ ಪೂರ್ಣನೂ ನನಗೆ ಅತ್ಯಂತ ಪ್ರಿಯತಮನೂ ಆದ ನಾರಾಯಣ, ನಿನಗೆ ನಮಸ್ಕಾರವು

ಇತಿ ಶ್ರೀಜಯತೀರ್ಥಗುರ್ವಂತರ್ಯಾಮಿ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀವೆಂಕಟೇಶದೇವರ ಅನುಗ್ರಹದಿಂದ ಪಾಂಡುರಂಗಿ ವಿಷ್ಣ್ವಾಚಾರ್ಯ ಸುತ ಪಾಂಡುರಂಗಿ ಕೃಷ್ಣಾಚಾರ್ಯನು ಯಥಾಮತಿಯಾಗಿ ಬರೆದ ಶ್ರೀವಿಷ್ಣುತತ್ತ್ವನಿರ್ಣಯದ ಕನ್ನಡ ಅನುವಾದವು ಮತ್ತು ಟೀಕಾದ ಸಾರಸಂಗ್ರಹರೂಪವಾದ ಕನ್ನಡ ವಿವರಣೆಯ ತೃತೀಯ ಪರಿಚ್ಛೇದವು ಮುಗಿಯಿತು.

ಈ ಗ್ರಂಥವೂ ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

## DVAITA VEDANTA WORKS EDITED AND TRANSLATED BY

### Prof. K T. PANDURANGI

| | | | | |
|---|---|---|---|---|
| 1 | ईशावास्य-तलवकार-काठकोपनिषदः<br>with English Translation<br>Published by S M S O Sabha | Rs | 12 | 00 |
| 2 | षट्प्रश्न-आथर्वण-माण्डूक्योपनिषदः<br>with English Translation<br>Published by S M S O Sabha | Rs | 15 | 00 |
| 3 | छान्दोग्योपनिषत्<br>with English Translation<br>Published by S M S O Sabha | Rs | 30 | 00 |
| 4. | बृहदारण्यकोपनिषत्<br>with English Translation<br>Published by S M S O Sabha | Rs | 40 | 00 |
| 5 | ऐतरेयोपनिषत्<br>with English Translation<br>Published by S M S.O Sabha | Rs | 25 | 00 |
| 6. | तैत्तिरीयोपनिषत्<br>with English Translation<br>Published by S.M S O Sabha | Rs | 15 | 00 |
| 7 | तत्त्वमञ्जरी—with Kannada<br>translation Published by the Editor | Rs | 40 | 00 |
| 8 | ब्रह्मसूत्रानुव्याख्यानम् Critical Edition | Rs | 30 | 00 |
| 9 | विष्णुतत्त्वविनिर्णयः with English translation<br>and notes published by Dvaita Vedanta<br>Studies and Research Foundation<br>Bangalore | Rs. | 40 | 00 |

10. विष्णुतत्त्वनिर्णयः with Kannada translation published by the Editor Rs 30 00

11 न्यायामृतोद्धृतजैमिनीयन्यायमाला of Sri Vijayeendratirtha, Published by Sri Gurusarvabhouma Vidyapeetha, Mantralaya

12 सदाचारस्मृतिः—(with Kannada translation) Published by Sri Raghavendra Seva Samiti IV 'T' Block, Jayanagar, Bangalore-11) Rs 2 50

13 गीतातात्पर्यनिर्णयः with Kannada translation included in the Kannada Sarvamula Volume I

14 ईशावास्योपनिषत् Do Volume II with Kannada translation

15 **Essentials of Yuktimallika** Published by Anandatirtha Trust, Poornaprajna Vidyapeetha, Bangalore Rs 30 00

16. **Essentials of Upanishads** Published by the Author Rs 20 00

17 **Essentials of Bhagavadgita** Published by the Author Rs 10 00

18 अद्वैतनवनीतम् of Krishnavadhuta Pandita, Edited with detailed introduction, Published by the Editor Rs 45 00

Printed at Prabha Printing House, D V G. Road, Bangalore 4